॥ ಶ್ರೀ [illegible] ಪ್ರಸನ್ನ ॥

# ವಿಜಯನಗರ ಸಾಮ್ರಾಜ್ಯ

****


ಲೇಖಕರು—

ಕಲಮದಾನಿ ಗುರುರಾಯರು.



ಪ್ರಕಾಶಕರು—

ಎ. ಎಂ. ಕರಡಿ

ಬುಕ್‌ಸೆಲರ್ ಸ್ಟೇಶನರೋಡ, ಹುಬ್ಬಳ್ಳಿ.

—ಎರಡನೆಯ ಮುದ್ರಣ ೨೦೦೦ ಪ್ರತಿಗಳು—

೧೯೭೧) (ಬೆಲೆ : [illegible]

3-00

## — ವಿಷಯಾನುಕ್ರಮಣಿಕೆ —





ಮುದ್ರಕರು :
ಅಶೋಕ ಪ್ರಿಂಟಿಂಗ ಪ್ರೆಸ್, ಕಿಲ್ಲೆ, ಹುಬ್ಬಳ್ಳಿ.
—ಪ್ರಕಾಶಕರು—
ಎ. ಎಂ. ಕರಡಿ
ಬುಕ್ ಸೆಲರ್ ಆ್ಯಂಡ್ ಪಬ್ಲಿಷರ ಸ್ಟೇಶನ್‌ರೋಡ, ಹುಬ್ಬಳ್ಳಿ.

# ... ಮುನ್ನುಡಿ ...

ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಬರೆಯಬೇಕೆಂದು ನಾನು ಬಹುದಿನಗಳಿಂದಲೂ ಇಚ್ಛಿಸುತ್ತಿದ್ದು ಈಗ ಅದು ಕೈಗೂಡಿತು. ರಾಬರ್ಟ ಷಿವೆಲ್ ಎಂಬ ಇತಿಹಾಸ ಸಂಶೋಧಕನು, ಹಿಂದುಸ್ಥಾನಕ್ಕೆ ಇಂಗ್ಲಂಡದಿಂದಬಂದು ಇಲ್ಲಿ ವಿಜಯನಗರ ಸಾಮ್ರಾಜ್ಯದ ಮಾಹಿತಿಯನ್ನು ಪ್ರತ್ಯಕ್ಷ ಕೇಳಿ ಕಾಣತಕ್ಕದುದನ್ನೆಲ್ಲ ಕಂಡುಕೊಂಡನು. ಪೋರ್ತುಗಾಲ ಸರಕಾರದ ವಶದಲ್ಲಿರುವ ಕಾಗದ ಪತ್ರಗಳನ್ನು ಓದಿಸಿ ತಿಳಿಸಿದನು. ರಶಿಯಾ ಜರ್ಮನ್ ಪ್ರವಾಸಿಗಳ ದಿನವಹಿಗಳನ್ನು ಅರಿತು ಅರ್ಥಮಾಡಿಕೊಂಡು ಆ ಮೇಲೆ ಕೇವಲ ಇಂಗ್ಲಂಡ ನಾಗರಿಕರ ಜ್ಞಾನಭಾಂಡಾರಕ್ಕಾಗಿಯೇ ಎಂದು *A, Forgotten Empire (Vijayanagar)* ಎಂಬ ಬೃಹದ್ಗ್ರಂಥವನ್ನು ಬರೆದನು, ಇದು ೧೯೦೦ ಇಸ್ವಿಯಲ್ಲಿ ಲಂಡನ್ ಶಹರದಲ್ಲಿ ಮುದ್ರಿಸಲ್ಪಟ್ಟಿದೆ.

ಈ ಅತ್ಯಂತ ಸ್ವಾರಸ್ಯವಾದ ಗ್ರಂಥದ ಆಧಾರದಿಂದಲೇ ನಾನು ಈಗ ಈ ವಿಜಯನಗರ ಸಾಮ್ರಾಜ್ಯವೆಂಬ ಪುಸ್ತಕವನ್ನು ಬರೆದಿದ್ದೇನೆ. ಇದರಲ್ಲಿ ಫನ್ರಯೋನ್ಯೂನಿಜ್ ಮತ್ತು ಡೋಮಿಂಗೋಪಾಯಸ್ ಎಂಬ ಪೋರ್ತಗೀಸ ಪ್ರವಾಸಿಕರು ವಿಜಯನಗರದ ರಾಯರ ಕಾಲದಲ್ಲಿ ಇಲ್ಲಿಗೆ ಬಂದು, ಇಲ್ಲಿಯದನ್ನೆಲ್ಲ ಪ್ರತ್ಯಕ್ಷವಾಗಿ ಕಂಡದ್ದನ್ನೂ ಬರೆದುಕೊಂಡು ಹೋದದ್ದನ್ನೂ ಆಧಾರವಾಗಿ ತೆಗೆದುಕೊಳ್ಳಲಾಗಿದೆ. ಪಾಯಸನು ಹಿಂದುಸ್ಥಾನದಲ್ಲಿ ೧೫೨೦ ರ ಸುಮಾರದಲ್ಲಿಯೂ, ನ್ಯೂನಿಜ್‌ನು ೧೫೩೭ರಲ್ಲಿಯೂ ಇದ್ದನೆಂದು ನಂಬಲಾಗಿದೆ. ಬೆರೂಸ್ ಎಂಬ ಇತಿಹಾಸಕಾರನು ಹಿಂದುಸ್ಥಾನಕ್ಕೆ ಬಾರದಿದ್ದರೂ ಲಿಸ್ಬನ್‌ಕ್ಕೆ ಬಂದು ಸಕಲ ಕಾಗದ ಪತ್ರಗಳಿಂದ ವಿಷಯ ಸಂಗ್ರಹಿಸಿ ಅವನೂ ಇತಿಹಾಸದ ಮೇಲೆ ಹೊಸ ಬೆಳಕನ್ನು ಕೆಡವಿದ್ದಾನೆ. ಸೆನಾರ್ ಲೂಪ್ಸ ಎಂಬ ಅರೇಬಿಯಾದ ವಿದ್ವಾಂಸನು ಹಿಂದುಸ್ಥಾನಕ್ಕೆ

ಬಂದು ಇಲ್ಲಿಯ ವಿಷಯದ ಬಗ್ಗೆ ಬಹಳ ಬರೆದಿದ್ದಾನೆ. ವಿಜಯನಗರದ ಅಳಿಯ ರಾಮರಾಯನ ಸಂಹಾರವಾದ ಮೇಲಿನ ಸಂಪೂರ್ಣವಾದ ಇತಿಹಾಸ ವನ್ನು ಬರ್‍ರೈಡಸ್ ಎಂಬುವವನು ಬರೆದು ಲಿಸ್ಬನ್ ಸರಕಾರ ಭಂಡಾರದಲ್ಲಿ ಇಟ್ಟಿದ್ದನು. ಅದನ್ನು ಇಂಗ್ಲೀಷಿನಲ್ಲಿ ಭಾಷಾಂತರಿಸಿ ಷಿವೆಲ್ಲನು ನಮಗೆ ನೀಡಿದ್ದಾನೆ.

ಫಿರಿಸ್ತಹಾ ಎಂಬ ಪ್ರವಾಸಿಯು ವಿಶೇಷವಾಗಿ ಅಹಮ್ಮದನಗರದವರ ಆಶ್ರಯದಲ್ಲಿಯೂ ನಂತರ ಬಿಜಾಪುರದವರಲ್ಲಿಯೂ ಇದ್ದನು. ಮುಂದೆ ಅವನು ಬೆಳಗಾವಿಗೆ ಬಂದು, ಅಬ್ದುಲ ಶಯಾಕನ ಆಶ್ರಯ ಪಡೆದನು. ಅವನು ಬಹಳ ದಿವಸ ಕಾಲ ಹಿಂದುಸ್ಥಾನದಲ್ಲಿ ವಾಸಿಸಿದರೂ ಅವನು ನಿಷ್ಪಕ್ಷಪಾತಿಯಾದ ಇತಿಹಾಸಕಾರನಲ್ಲವೆಂದು ಷಿವೆಲ್ಲನು ಅಭಿಪ್ರಾಯ ಪಡುತ್ತಾನೆ. ಮುಸಲ್ಮಾನ ಪಕ್ಷಕಟ್ಟಿ ಅವರನ್ನು ಹೊಗಳುತ್ತ ಹಿಂದುಗಳನ್ನು ತೆಗಳುತ್ತ ಬರೆದಿದ್ದಾನೆ. ಅವನ ಬರಹಗಳಲ್ಲಿಯ ಕೆಲವು ಸತ್ಯಾಂಶಗಳನ್ನು ನಾನು ತೆಗೆದುಕೊಂಡಿದ್ದೇನೆ. ಶೇಷ ಸಂಗ್ರಹವೆಂಬ ಶೀರ್ಷಿಕೆಯಲ್ಲಿ ಬರುವ ವಿಷಯಗಳೆಲ್ಲವೂ ಪಾಯಸ್ ಮತ್ತು ನ್ಯೂನಿಜ್‌ರು (ಇಬ್ಬರೂ) ಪ್ರತ್ಯಕ್ಷವಾಗಿ ಕೃಷ್ಣದೇವರಾಯನ ಕಾಲದಲ್ಲಿ ಕಂಡ ಸಂಗತಿಗಳನ್ನು ಸಂಗ್ರಹಿಸಿದ್ದಾರೆ ಅದನ್ನೇ ನಾನು ತೆಗೆದುಕೊಂಡಿದ್ದೇನೆ.

ಈ ಚಿಕ್ಕ ಗ್ರಂಥವು ಓದುಗರಿಗೆ ಸ್ವಾರಸ್ಯವಾದರೆ, ವಿದ್ಯಾರ್ಥಿಗಳಿಗೆ ಉಪಯುಕ್ತವಾದರೆ ನನ್ನ ಶ್ರಮದ ಸಾರ್ಥಕವಾದಂತೆ. ಈ ಪುಸ್ತಕ ಬರೆಯಲು ಪ್ರೇರೇಪಿಸಿದ ಶ್ರೀ ಎ.ಎಂ. ಕರಡಿ, ಬುಕ್‌ಸೆಲರ್ ಸ್ಟೇಶನ್‌ರೋಡ ಹುಬ್ಬಳ್ಳಿ ಇವರಿಗೆ ನನ್ನ ಅನಂತ ಧನ್ಯವಾದಗಳು.

ತಬೀಬಲ್ಯಾಂಡ
೧೯೬೩

ಕಲಮದಾನಿ ಗುರುರಾಯ.
ಸಂಜೀವಿನಿ ಪ್ರಕಾಶನ, ಹುಬ್ಬಳ್ಳಿ.

# ವಿಜಯನಗರ ಸಾಮ್ರಾಜ್ಯ

## ಸಂಗಮ ವಂಶ

### ೧. ಹಕ್ಕ (೧ನೇ ಹರಿಹರರಾಯ) ಬುಕ್ಕರು

(೧೩೩೬ ರಿಂದ ೧೩೭೯)

ಕ್ರಿ. ಶ. ೧೩೩೬ನೇ ಇಸ್ವಿಯೆಂದರೆ ದಕ್ಷಿಣ ಹಿಂದುಸ್ಥಾನದ ಹಳೆಯ ರಾಜಕೀಯ ವಾತಾವರಣವನ್ನು ಸಂಪೂರ್ಣವಾಗಿ ತೆಗೆದೊಗೆದು ಹೊಸದನ್ನು ನಿರ್ಮಿಸಿ ಕಾಲವು ಇಲ್ಲಿಯವರೆಗೆ ದಕ್ಷಿಣವನ್ನು ಹಳೆಯ ರಾಜರು ಸರದಾರರು ಅಲ್ಲಲ್ಲಿ ಆಳುತ್ತಿದ್ದರು. ಅವರು ಎಂದು ರಾಜ್ಯ ಸ್ಥಾಪಿಸಿದರು, ಎಷ್ಟು ವರುಷ ಕಾಲದಿಂದ ಆಳುತ್ತ ಬಂದರು ಎಂಬುದು ಸರಿಯಾಗಿ ಈ ವರೆಗೂ ಇತಿಹಾಸಕಾರರಿಗೆ ತಿಳಿದುಬಂದಿಲ್ಲ. ೧೬ನೇ ಶತಮಾನದ ಶಿಲಾಲೇಖನಗಳಿಂದ ಮಸುಕು ಮಸುಕಾದ ಕೆಲವಿಷಯಗಳುಮಾತ್ರ ಗೊತ್ತಾಗುವವು. ಮಧುರಾದಲ್ಲಿ ಪಾಂಡ್ಯರೂ ತಂಜಾವುರದಲ್ಲಿ ಚೋಳರೂ ಆಗಿನ ಕಾಲದ ಪ್ರಮುಖ ರಾಜರೆಂದು ಹೇಳಬಹುದು. ವಿಜಯನಗರ ರಾಜ್ಯವು ಸ್ಥಾಪಿತವಾದ ಕೂಡಲೇ ಇವೆಲ್ಲ ಸಣ್ಣ ಪುಟ್ಟ ನಿರ್ವೀರ್ಯವಾದ ಸಂಸ್ಥಾನಗಳು ಕರಗಿ ಹೋಗಿ ವಿಂಧ್ಯಾದ್ರಿಯಿಂದ ಕನ್ಯಾಕುಮಾರಿಯವರೆಗೆ ವಿಜಯನಗರ ರಾಜರೇ ಆಳಿ ಪ್ರಖ್ಯಾತಿ ಪಡೆದರು.

ಹೀಗಾದದ್ದೇನೂ ಆಶ್ಚರ್ಯವಲ್ಲ. ಉತ್ತರದಿಂದ ಮುಸಲ್ಮಾನರ ದಾಳಿ ಪ್ರಬಲ ಸ್ವರೂಪತಾಳಿ ಕೃಷ್ಣೆಯವರೆಗೆ ಬಂದ ಕೂಡಲೇ ದಕ್ಷಿಣದ ಳಿಯ ಸಣ್ಣಪುಟ್ಟ ರಾಜರುಗಳು ವಿಜಯನಗರದ ವೀರನನ್ನೊ ಮುಂದೆ ಮಾಡಿ ಎಲ್ಲರೂ ಒಟ್ಟುಗೂಡಿ ಹಿಂದೂಧರ್ಮದ ರಾಜ್ಯದ ಉಳಿಗಾಲಕ್ಕೆ ಪ್ರಯತ್ನಿಸಿದರು. ಹಾಗೂ ಉಳಿದೂಬಟ್ಟರು. ಬಲಾಢ್ಯರಾದ ವಿಜಯನಗರದವರು ಎದ್ದು ನಿಂತರು ಉಳಿದವರು ನಾಮಶೇಷರಾದರು.

ಕ್ರಿ. ಶ. ೧೦೦೧ ಇಸ್ವಿಯಿಂದ ವಾಯುವ್ಯ ದಿಕ್ಕಿನಿಂದ ಮುಸಲ್ಮಾನರು ಪ್ರಥಮ ಸಲ ಹಿಂದುಸ್ಥಾನದ ಮೇಲೆ ದಾಳಿ ಇಟ್ಟರು. ಮಹಮ್ಮದ ಗಿಜನಿಯು ಬಂದು ಪಂಜಾಬವನ್ನೂ ನಂತರ ಮುಲ್ತಾನವನ್ನೂ ಸುಲಿದನು. ಕ್ರಮೇಣ ಪ್ರತಿ ವರುಷವೂ ದಾಳಿ ಹೂಡಿ ಮುಂದೆ ಮುಂದೆ ಉತ್ತರ ಹಿಂದುಸ್ಥಾನದಲ್ಲಿ ಪ್ರವೇಶಿಸತೊಡಗಿದನು. ಕ್ರಿ. ಶ. ೧೦೨೨ನೇ ಇಸ್ವಿಯಲ್ಲಿ ಕಲಿಂಗವನ್ನೂ ೧೦೨೫ರಲ್ಲಿ ಕಾಠೇವಾಡವನ್ನೂ ಮುತ್ತಿದನು. ಗಿಜನೀ ಮಹಮ್ಮದನು ಯುದ್ಧಮಾಡಿ ದಾಳಿಯಲ್ಲಿ ಸಿಕ್ಕಿದ್ದನು. ಸುಲಿದುಕೊಂಡು ತಿರುಗಿ ಹೋಗುತ್ತಿದ್ದನೇ ವಿನಃ ಹಿಂದುಸ್ಥಾನದಲ್ಲಿ ನೆಲೆಸಲು ಅವನ ವಿಚಾರ ವಿದ್ದಿಲ್ಲ. ಆದರೆ ಮುಂದೆ ಎರಡು ಶತಮಾನಗಳ ನಂತರ ಮುಸಲ್ಮಾನರು ದಿಲ್ಲಿಯನ್ನು ಆಕ್ರಮಿಸಿ ಸ್ಥಿರವಾಗಿ ಹಿಂದುಸ್ಥಾನದಲ್ಲಿ ನಿಂತುಬಿಟ್ಟರು. ಅಲ್ಲಿಂದ ಸತತವಾಗಿ ಯುದ್ಧದ ಮೇಲೆ ಯುದ್ಧಗಳಾದವು. ಉತ್ತರ ಹಿಂದುಸ್ಥಾನವನ್ನು ಹದಿಮೂರನೆಯ ಶತಮಾನದಲ್ಲಿ ಮುಸಲ್ಮಾನರು ಆಕ್ರಮಿಸಿಬಿಟ್ಟರು. ಈ ಶತಮಾನದ ಕೊನೆಯ ಭಾಗದಲ್ಲಿಯೇ ಅವರು ದಕ್ಷಿಣದ ದಂಡಯಾತ್ರೆಯನ್ನೂ ಕೈಕೊಳ್ಳತೊಡಗಿದರು.

ಕ್ರಿ. ಶ. ೧೨೯೪ರಲ್ಲಿ ಅಲ್ಲಾವುದ್ದೀನ ಖಿಲಜಿಯು ದಕ್ಷಿಣಕ್ಕೆ ದಂಡಯಾತ್ರೆ ಕೈಕೊಂಡನು. ದೇವಗಿರಿಯನ್ನೂ ಆಕ್ರಮಿಸಿದನು. ಮರುವರ್ಷ ಉತ್ತರದಲ್ಲಿ ಗುಜರಾಥಕ್ಕೆ ದಾಳೀ ಇಟ್ಟರು. ೧೩೦೩ನೇ ಇಸ್ವಿಯಲ್ಲಿ ಓರಂಗಲ್ಲವನ್ನೂ ಗೆದೆಯಲು ಪ್ರಯತ್ನಪಟ್ಟನು. ಕೈಬಿಟ್ಟ ದೇವಗಿರಿಯನ್ನು ಪುನಃ ದೊರಕಿಸಲು ೧೩೦೬ರಲ್ಲಿ ಪ್ರಯತ್ನಿಸಿದನು. ಆದರೆ ಅಲ್ಲಾವುದ್ದೀನನಿಗೆ ನಿಜವಾದ ಯಶವು ಇನ್ನೂ ದೊರೆಯಲಿಲ್ಲ ಆದ್ದರಿಂದ ಮಹಾರಣಯೋಧನೆಂದು ಪ್ರಖ್ಯಾತಿ ಪಡೆದ ಮಲೀಕ ಕಾಫರನು ಅಗಣಿತ ಸೈನ್ಯದೊಡನೇ ದಕ್ಷಿಣ ಹಿಂದುಸ್ಥಾನವನ್ನು ನುಗ್ಗಿ ೧೩೦೭ರಲ್ಲಿ ದೇವಗಿರಿಯನ್ನು ಕೈವಶ ಮಾಡಿಕೊಂಡನು. ಆ ಮೇಲೆ ಹೊಯ್ಸಳರೇ ಬಲ್ಲಾಳ ದ್ವಾರಸಮುದ್ರವನ್ನು ೧೩೧೦ರಲ್ಲಿ ಸುಲಿದನು. ಮಲಬಾರ ಪ್ರಾಂತದಲ್ಲಿ ಹೊಕ್ಕು ಸುಲಿಗೆ ಕೊಳ್ಳೆಗಳಿಂದ ಅದನ್ನು ಜರ್ಜಿತವನ್ನಾಗಿ ಮಾಡಿದನು. ಅಲ್ಲಿ ಒಂದು ಮಸಿದಿಯನ್ನು ಕಟ್ಟಿಸಿ ಅಗಣಿತ ಸಂಪತ್ತನ್ನು ಲೂಟಿಮಾಡಿಕೊಂಡು ಹೊತ್ತುಕೊಂಡು ಹೋದನು.

ಇವನ ದಾಳಿಯಲ್ಲಿ ಮೈಸೂರ ಸಂಸ್ಥಾನ ಸಮೇತವಾಗಿ ಹಿಡಿದು ಅಲ್ಲಿಯ ಸಕಲ ದೇವಾಲಯಗಳನ್ನೂ ಧಾರ್ಮಿಕ ಮಠ ಮೊದಲಾದ ಸಂಸ್ಥೆಗಳನ್ನೂ ನೆಲಸಮಮಾಡಿದನು. ಮೂರ್ತಿಗಳನ್ನು ಭಂಗಿಸಿದನು. ಎದುರಿಸಿದವರನ್ನು ಕತ್ತರಿಸಿದನು. ಮುಸಲ್ಮಾನ ಸೈನಿಕರು ಹಿಂದು ಸ್ತ್ರೀಯರನ್ನು ದುರ್ನೀತಿಗೆಳೆದರು. ಹೇರಳವಾದ ಸಂಪತ್ತನ್ನು ಹೊರಿಸಿಕೊಂಡು ದಿಲ್ಲಿಗೆ ತೆರಳಿದನು. ೩೧೨ ಆನೆಗಳನ್ನೂ ೨೦ ಸಾವಿರ ಕುದುರೆಗಳನ್ನೂ ೯೬ ಸಾವಿರ ಮಣ ಬಂಗಾರವನ್ನೂ ಲೆಕ್ಕವಿಲ್ಲದಷ್ಟು ವಜ್ರ, ವೈಢೂರ್ಯ ಮೊದಲಾದ ಹರಳುಕಲ್ಲುಗಳನ್ನೂ ದಿಲ್ಲಿಗೆ ಒಯ್ದನೆಂದು ಫಿರಿಸ್ತಾನ್ ಎಂಬ ಪ್ರವಾಸಿಯು ಬರೆಯುತ್ತಾನೆ. ಹೊಸ ದಾಳಿಯು ೧೩೧೨ರಲ್ಲಿ ಮತ್ತೆ ಪ್ರಾರಂಭವಾಯಿತು. ಆರು ವರುಷಗಳ ನಂತರ ದಿಲ್ಲಿ ಮುಬಾರಕನು ದೇವಗಿರಿಯನ್ನು ಸಂಪೂರ್ಣವಾಗಿ ನಾಶಮಾಡಿ ಅಲ್ಲಿಯ ರಾಜನಾದ ಹರಿಪಾಲದೇವನೆಂಬುವವನ ಶಿರಚ್ಛೇದನ ಮಾಡಿ ಅಗಸೀ ಬಾಗಿಲಿಗೆ ಕಟ್ಟಿಸಿಬಿಟ್ಟನು. ೧೩೨೩ರಲ್ಲಿ ಒರಂಗಲ್ಲವು ಸಂಪೂರ್ಣ ಮುಸಲ್ಮಾನರ ವಶವಾಯಿತು.

ಕ್ರಿ. ಶ. ೧೩೩೫ರ ಸುಮಾರಿಗೆ ತಘಲಖ ಮಹಮ್ಮದನ ಕ್ರೂರವಾದ ದಾಳಿಯಿಂದ ದಕ್ಷಿಣ ದೇಶವು ಕಂಗೆಟ್ಟಿತ್ತು. ತಮ್ಮ ಪವಿತ್ರವಾದ ದೇವಾಲಯಗಳೂ, ಹಿಂದುಧರ್ಮವೂ ತಮ್ಮ ಸ್ತ್ರೀಯರೂ ಮುಸಲ್ಮಾನರ ದಬ್ಬಾಳಿಕೆಯಲ್ಲಿ ಉಳಿಯಲಾರವೆಂದು ಅಂಜಿದರು. ದ್ವಾರಸಮುದ್ರ ಒರಂಗಲ್ಲುಗಳ ಪತನದ ನಂತರ ಆನೇಗುಂದಿಯ ಅರಸನು ಮಾತ್ರ ಉಳಿದುಕೊಂಡಿದ್ದನು. ಪರ್ವತ ದುರ್ಗ ಮತ್ತು ನದಿಯಿಂದ ಸಂರಕ್ಷಿಸಲ್ಪಟ್ಟ ಆ ನಗರವೇ ಹಿಂದೂಧರ್ಮವನ್ನು ಉಳಿಸಬಲ್ಲದೆಂದು ಎಲ್ಲರೂ ಅದರ ಸುತ್ತು ನೆರೆದರು. ಕೊನೆಗೆ ಅದೇ ದೊಡ್ಡ ಸಾಮ್ರಾಜ್ಯವಾಗಿ ವಿಜಯನಗರವೆಂದು ಹೆಸರಾಯಿತು. ಆನೇಗುಂದಿಯ ಅರಸರ ಬಗ್ಗೆ ಯಾವ ವಿಶಿಷ್ಟತರದ ಮಾಹಿತಿಯೂ ದೊರಕುವದಿಲ್ಲ. ಅವರು ಬಹುಶಃ ಹೊಯ್ಸಳರ ಮಾಂಡಲೀಕರಾಗಿ ಏಳನೇ ಶತಮಾನದಿಂದಲೂ ಆ ಭಾಗವನ್ನು ಆಳುತ್ತ ಬಂದಿರಬೇಕೆಂದು ತೋರುತ್ತದೆ.

ತಗಲಖ ಮಹಮ್ಮದನು ಆನೇಗುಂದಿಯನ್ನು ಸಹ ನಾಶಮಾಡು ದ್ದನು. ಆಗ ರಾಜವಂಶರಾದ ಇಬ್ಬರು ಬಂಧುಗಳು ಆನೇಗುಂದಿಯಿಂದ ಓಡಿಬಂದು ವಿದ್ಯಾರಣ್ಯರನ್ನು ಮೊರೆಹೊಕ್ಕರು. ವಿದ್ಯಾರಣ್ಯರು ತಮ್ಮ ತಪಃಪ್ರಭಾವದಿಂದ ಆನೇಗುಂದಿಯ ಎದುರಿಗೆ ತುಂಗಭದ್ರಾ ದಕ್ಷಿಣ ದಂಡೆಯ ಪವಿತ್ರ ಸ್ಥಳದಲ್ಲಿ ರಾಜಧಾನಿಯನ್ನು ನಿರ್ಮಿಸಿ ಅದಕ್ಕೆ ವಿಜಯ ನಗರವೆಂದು ನಾಮಕರಣ ಮಾಡಿದರು. ಬಂಧುಗಳಲ್ಲಿ ಹಿರಿಯನಾದ ಹಕ್ಕನಿಗೆ ಹರಿಹರರಾಯನೆಂದು ಹೆಸರಿಟ್ಟು ಅವನಿಗೆ ಪಟ್ಟಗಟ್ಟಿದರು. ಇವನೇ ೧ನೇ ಹರಿಹರನು ಇವನು ಸ್ವಃತಶೂರನೂ ಹಿಂದೂ ಜನರ ಸರ್ವಬೆಂಬಲಿಗನೂ ತಪಸ್ವಿಗಳ ಆಶೀರ್ವಾದ ಸಹಿತನೂ ಆಗಿಕ್ರಮೇಣ ತನ್ನ ರಾಜ್ಯವನ್ನು ಸ್ಥಿರವಾಗಿ ನೆಲೆಸಿದನು. ಇವನ ತರುವಾಯ ಬುಕ್ಕನು ಪಟ್ಟವೇರಿದನು.

ವಿಜಯನಗರ ಸಾಮ್ರಾಜವು ೧೩೩೬ರಲ್ಲಿ ಸ್ಥಾಪಿತವಾಯಿತೆಂದು ಹೇಳಲು ಶಿಲಾಲೇಖನಗಳು ಇವೆ. ಮತ್ತು ಮಹಮ್ಮದ ತಗಲಕನು ದಕ್ಷಿಣ ದಂಡಯಾತ್ರೆಯನ್ನು ಕೈಕೊಂಡು ಆನೇಗುಂದಿಯನ್ನು ನಾಶಮಾಡಿದ್ದು ೧೩೩೬ರಲ್ಲಿ ಆನೆಗುಂದಿಯ ನಾಶ ಕೆಲವೇ ವಾರದ ಕೆಲವೇ ದಿನಗಳಲ್ಲಿ ವಿಜಯನಗರವುಸ್ಥಾಪಿಸಲ್ಪಟ್ಟಿತು. ಮಹಮ್ಮದ ತಗಲಖನು ದಕ್ಷಿಣಕ್ಕೆ ಸೈನ್ಯ ಸಮೇತ ಬರಲು ಒಂದು ಕಾರಣವಾಯಿತು. ಇವನ ತಮ್ಮನ ಮಗನಾದ ಬಹನೂದ್ದೀನನು ತಗಲಖನ ಅಪ್ರೀತಿಗೆ ಪಾತ್ರನಾದನು. ಮೂರ್ಖನೂ ರಕ್ತದಾಹಿಯೂ ಅತ್ಯಂತ ಕ್ರೂರರೂ ಆದ ತಗಲಖನು ತನ್ನ ಚರ್ಮ ವನ್ನು ಜೀವಂತವಿರುವಾಗಲೇ ಸುಲಿಸುವನೆಂದೂ ಹೆದರಿ ದಕ್ಷಿಣಕ್ಕೆ ಓಡಿ ಬಂದು ಕಂಪ್ಲಿರಾಯನ ಆಶ್ರಯ ಪಡೆದನು. ಕಂಪ್ಲಿಯು ಆನೇಗುಂದಿಯ ಅತ್ಯಂತ ಭದ್ರವಾದ ಕೋಟೆಯಾಗಿದ್ದು ಎಂಟು ಮೈಲು ಪೂರ್ವಕ್ಕಿದೆ ಮಹಮ್ಮದ ತಗಲಖನು ಕಂಪ್ಲಿಯನ್ನು ಮುತ್ತಿದ ಕೂಡಲೇ ಪ್ರಾಣರಕ್ಷಣೆ ಗಾಗಿ ರಾಯರು ರಾಜಧಾನಿಯಾದ ಆನೆಗೊಂದಿಗೆ ತನ್ನ ಪರಿವಾರ ಸಹಿತ ಓಡಿಹೋದನು. ಆನೆಗೊಂದಿಯು ಕಂಪ್ಲಿಗಿಂತ ಭದ್ರವಾದ ಸ್ಥಳವೆಂದೂ ಅಲ್ಲಿಂದಲೇ ತಗಲಖನನ್ನು ಹಣಿಯಲು ಹೆಚ್ಚು ಅನುಕೂಲವಾಗುವದೆಂದೂ

ನೆನೆದನು. ತನ್ನ ಆಶ್ರಯ ಹೊಂದಿದ ಬದನುದ್ದೀನನನ್ನು ಅಲ್ಲಿಂದ ಪಾರು ಮಾಡಿ ದ್ವಾರಸಮುದ್ರದಲ್ಲಿ ಆಳುತ್ತಿದ್ದ ಹೊಯ್ಸಳ ಬಲ್ಲಾಳನೆಡೆಗೆ ಕಳುಹಿಸಿದನು. ಅಲ್ಲಿಂದ ಅವನು ಶಾಂಡೂರಲ್ಲಿ ಸುರಕ್ಷಿತವಾಗಿ ನೆಲಸಿದನು.

ಮಹಮ್ಮದ ತಗಲಖನ ಮುತ್ತಿಗೆಯಿಂದ ಪಾರಾಗುವದಾಗಲೀಯುದ್ಧದಲ್ಲಿ ಜಯಿಸುವದಾಗಲೀ ಸಾಧ್ಯವಿಲ್ಲವೆಂದು ಆನೆಗುಂದಿ ಪ್ರಜೆಗಳಿಗೂ ಅನಿಸಿತು. ಆದ್ದರಿಂದ ಬೈಲಲ್ಲಿ ಬಹು ದೊಡ್ಡದಾದ ಚಿತೆಯನ್ನು ನಿರ್ಮಿಸಿದರು ಅದರಲ್ಲಿ ಹಾರಿಕೊಂಡು ನಗರದ ಸಮಸ್ತ ಸ್ತ್ರೀಯರು ಸುಟ್ಟು ಪ್ರಾಣತೆತ್ತರು. ಇನ್ನುಳಿದ ಎಲ್ಲ ಗಂಡಸರು (ನೆಲಹಿಡಿದ ಮುದುಕರನ್ನೂ ಹಸುಳೆಯರಾದ ಬಾಲಕರನ್ನು ಬಿಟ್ಟು) ರಣರಂಗಕ್ಕೆ ಬಂದರು, ತಗಲಕನಿಗೆ ಎದುರಾದರು. ಎಲ್ಲರೂ ವೀರಸ್ವರ್ಗ ಸೇರಿದರು. ಈ ರೀತಿ ಆನೆಗುಂದಿಯು ಮುಸಲ್ಮಾನರ ವಶವಾಯಿತು. ಇದನ್ನು ಆಳಲು ಮಲಿಕ ನವಾಬನೆಂಬ ತನ್ನ ಅನುಚರನಾದ ಸರದಾರನನ್ನು ನೇಮಿಸಿ (೧೩೩೪) ಮಹಮ್ಮದ ತಗಲಖನು ಉತ್ತರಕ್ಕೆ ಪ್ರಯಾಣ ಬೆಳೆಸಿದನು.

ಮುಂದಿನ ಕಥೆಯನ್ನು ಮ್ಯೂನಿಜ್ ಎಂಬ ಪರದೇಶದ ಪ್ರವಾಸಿಯು ಬರೆಯುತ್ತಾನೆ. ಅದು ಈ ರೀತಿ:- ಆನೆಗುಂದಿಯ ಸುತ್ತಲಿನ ಪ್ರಜೆಗಳೆಲ್ಲರೂ ಮಲಿಕ ನವಾಬನ ವಿರುದ್ಧ ಬಂಡೆದೆಬ್ಬಿಸಿದ್ದರಿಂದ ಅಲ್ಲಿ ತನ್ನ ಆಳಿಕೆಯನ್ನು ನಡೆಸುವದೇ ಅಸಾಧ್ಯವಾಯಿತು. ಆದ್ದರಿಂದ ಅವನು ಮೊದಲಿನ ಆನೆಗುಂದಿಯ ರಾಜರಲ್ಲಿ ಅಳಿದ-ಉಳಿದ ಸನಿಯದ ರಕ್ತಸಂಬಂಧಿಕನಿಗೆ ಆ ಪ್ರಾಂತವನ್ನು ಒಪ್ಪಿಸಿ ಅವನು ಹೊರಟು ಹೋದನು. ಆ ರಕ್ತ ಸಂಬಂಧಿಕನು ದೇವರಾಯನೆಂದು ಮ್ಯೂನಿಜನು ಹೇಳುತ್ತಾನೆ. ಈ ದೇವರಾಯನು ಆನೆಗುಂದಿಯನ್ನು ಏಳು ವರುಷ ಆಳಿದನು. ಒಂದಾನೊಂದು ದಿವಸ ತುಂಗಭದ್ರಾ ದಕ್ಷಿಣ ತೀರದ ಅಡವಿಯಲ್ಲಿ ಬೇಟೆಯಾಡಲು ರಾಯನು ಬಂದಾಗ ಅವನ ನಾಯಿಯು ಒಂದು ಮೊಲವನ್ನು ಬೆನ್ನಟ್ಟಿತು. ಆದರೆ ಮೊಲವು ತಿರುಗಿ ನಿಂತು ನಾಯಿಯನ್ನು ಹೆದರಿಸಿ ಹಿಂದೆ ಸರಿಸಿ, ಅದನ್ನು ಬೆನ್ನಟ್ಟಿ ಕಡಿಯಿತು, ಇದನ್ನು ಕಂಡು ರಾಯನಿಗೆ ತುಂಬಾ

ಆಶ್ಚರ್ಯವಾಯಿತು.

ನೇರವಾಗಿ ಅರಮನೆಗೆ ಬಂದು ದೇವರೆದುರು ಕುಳಿತು, ಧ್ಯಾನಿಸ ತೊಡಗಿದನು. ನಿಸರ್ಗ ನಿಯಮದ ವಿರುದ್ಧವಾದ ಸಂಗತಿಯು ಫಲವೇ ನೆಂದು ಯೋಚಿಸುತ್ತ ಧ್ಯಾನಸ್ಥನಾದನು. ಮುಂದೆ ಕೆಲವು ದಿವಸಗಳ ತರುವಾಯ ರಾಯನು ವಿಹಾರಾರ್ಥವಾಗಿ ಹೊರಟಾಗ ಅರಣ್ಯದಲ್ಲಿ ಆಶ್ರಮ ವಾಸಿಗಳಾದ ವಿದ್ಯಾರಣ್ಯರೆಂಬ ಸನ್ಯಾಸಿಗಳನ್ನು ಎದುರಿಗೆ ಕಂಡನು. ಅವ ರಿಗೆ ಸಾಷ್ಟಾಂಗವೆರಗಿ ಆಶೀರ್ವಾದ ಪಡೆದು ಕೆಲ ದಿವಸಗಳ ಹಿಂದೆ ತಾನು ನೋಡಿದ (ಮೊಲವು ನಾಯಿಯನ್ನು ಬೇಟೆಯಾಡಿದ) ವೃತ್ತಾಂತವನ್ನು ನಿವೇದಿಸಿದನು. ಸ್ವಾಮಿಗಳು ತಮ್ಮ ದಿವ್ಯ ದೃಷ್ಟಿಯಿಂದ ಎಲ್ಲವನ್ನೂ ಕಂಡರು. "ತಮ್ಮ ಆ ಸ್ಥಳವು ಬಹು ಪವಿತ್ರವಾದುದು ಅಲ್ಲಿ ಸಾಕ್ಷಾತ್ ಲಕ್ಷ್ಮೀದೇವಿಯು ವಾಸಿಸಿದ್ದಾಳೆ. ಆದ್ದರಿಂದ ಅಲ್ಲಿ ಒಂದು ಪಟ್ಟಣವನ್ನು ಕಟ್ಟಿ ಅಲ್ಲಿಯೇ ರಾಜ್ಯ ಸ್ಥಾಪಿಸು. ನನ್ನ ಆಶೀರ್ವಾದವಾಗಿದೆ" ಎಂದರು. ಗುರುಗಳ ಆದೇಶದಂತೆ ರಾಯನು ಅಲ್ಲಿಗೆ ಬಂದು ನೆಲೆಸಿ, ಅವರ ತಪಸ್ಸಿನ ಬಲದಿಂದ ನಗರವನ್ನು ನಿರ್ವಹಿಸಿದನು. ಅದನ್ನು ವಿಜಯನಗರವೆಂದು ಕರೆದನು ಎಂದು ವ್ಯಾನಿಜನ ವರ್ಣನೆಯಿದೆ. ಇದು ೧೩೩೬ ರಲ್ಲಿ ಸ್ಥಾಪಿತ ವಾಗಿ ಅಮರ ರಾಜ್ಯವಾಗಿ ಶೋಭಿಸಿತು.

ಬುಚನನ್ ಎಂಬುವವನು ಈ ರೀತಿ ಹೇಳುತ್ತಾನೆ : "ನಾನು ೧೮೦೧ ರಲ್ಲಿ ಮೈಸೂರ ಸಂಸ್ಥಾನದ ಖೈದೂರ ಗ್ರಾಮಕ್ಕೆ ಹೋದಾಗ ಅಲ್ಲಿಯ ಧಾರ್ಮಿಕ ರಾಮಪ್ಪನೆಂಬುವನಲ್ಲಿ ಅತ್ಯಂತ ಹಳೆಯದಾದ ಸಂಸ್ಕೃತ ಭಾಷೆಯಲ್ಲಿಯ ವಿದ್ಯಾರಣ್ಯ ಎಂಬ ಪುಸ್ತಕವಿತ್ತು. ಅದರಲ್ಲಿ ಈ ಪ್ರಕಾರವಿದೆ. ಓರಂಗಲ್ಲದ ಪ್ರತಾಪ ರುದ್ರನ ಆಳಿಕೆಯಲ್ಲಿ ಹುಕ್ಕ ಬುಕ್ಕರು ಸರಕಾರದ ಕೋಶಾಗಾರದ ಕಾವಲುಗಾರರು ಆಗಿದ್ದರು. ಮಹ ಮ್ಮದನು ೧೩೨೩ ರಲ್ಲಿ ಓರಂಗಲ್ಲವನ್ನು ಸ್ವಾಧೀನಪಡಿಸಿಕೊಂಡ ಕೂಡಲೇ ಈ ಹಕ್ಕ-ಬುಕ್ಕರು ಕೆಲವು ಕುದುರೆ ಸವಾರರೊಡನೆ ಆನೆಗುಂದಿಗೆ ಓಡಿ ಬಂದು ಆಶ್ರಯ ಪಡೆದರು. ಮುಂದೆ ಶೃಂಗೇರಿಯ ಮೂಲಪೀಠದ

ಸನ್ಯಾಸಿಗಳಾದ ಮಾಧವಾಚಾರ್ಯರೆಂಬುವವರನ್ನು (ವಿದ್ಯಾರಣ್ಯ) ಅಕಸ್ಮಾತ್ತಾಗಿ ಕಂಡು ಅವರ ಅನುಗ್ರಹದಿಂದ ವಿಜಯನಗರವನ್ನು ಸ್ಥಾಪಿಸಿ ರಾಜ್ಯವನ್ನು ಗಳಿಸಿದರು" ಎಂದು ಹೇಳಿದ್ದಾನೆ.

ಇನ್ನೊಬ್ಬ ಇತಿಹಾಸಕಾರನು ಈ ರೀತಿ ಹೇಳಿದ್ದಾರೆ: ಒರಂಗಲ್ಲ ಮುತ್ತಿಗೆಯ ಪೂರ್ವದಲ್ಲಿ (ಅಂದರೆ ೧೩೨೩ ರಲ್ಲಿ) ಈ ಈರ್ವರು ಬಂಧುಗಳು ಮುಸಲ್ಮಾನ ನಾಯಕನಲ್ಲಿ ನೌಕರಿಯಲ್ಲಿ ಇದ್ದರು. ಇಸ್ವಿ ಸನ್ ೧೩೧೦ ರಲ್ಲಿ ಮಲ್ಲಿಕ ಕಾಫೂರನ ಆಜ್ಞೆಯ ಪ್ರಕಾರ ಈ ಈರ್ವರು ಬಂಧುಗಳನ್ನ ಹೊಯ್ಸಳ ಬಲ್ಲಾಳರ ವಿರುದ್ಧ ದ್ವಾರಸಮುದ್ರವನ್ನು ಮುತ್ತಲು ಸೈನ್ಯದೊಂದಿಗೆ ಕಳಿಸಲ್ಪಟ್ಟರು. ದ್ವಾರ ಸಮುದ್ರವು ಕೈವಶವಾಯಿತು, ಆದರೆ ಹಕ್ಕ ಬುಕ್ಕರಿದ್ದ ಮುಸಲ್ಮಾನರ ಸೈನ್ಯದ ಗುಂಪು ಹತವಾದುದರಿಂದ ಪ್ರಾಣವುಳಿಸಿಕೊಳ್ಳಲು ಆನೇಗುಂದಿಗೆ ಓಡಿಹೋದರು. ಎಷ್ಟೋ ವರುಷಕಾಲ ಅಲ್ಲಿಯೇ ಅಜ್ಞಾತವೇಷದಲ್ಲಿದ್ದರು. ಕೊನೆಗೆ ಒಂದಾನೊಂದು ದಿವಸ ಅಕಸ್ಮಾತಾಗಿ ಓರ್ವ ತಪಸ್ವಿ (ವಿದ್ಯಾರಣ್ಯ)ಯ ದರ್ಶನ ಲಾಭ ಪಡೆದರು. ಆವನ ಅನುಗ್ರಹದಿಂದ ವಿಜಯನಗರ ಸಾಮ್ರಾಜ್ಯವನ್ನು ೧೩೩೬ ರಲ್ಲಿ ಸ್ಥಾಪಿಸಿದರು." ಎಂದು ಬರೆದಿದ್ದಾನೆ.

ಕ್ಯೂಟೋ ಎಂಬುವವನು ಈ ರೀತಿ ಹೇಳುತ್ತಾನೆ: "ಆನೆಗುಂದಿಯ ಗುಡ್ಡಗಾಡು ಅರಣ್ಯದಲ್ಲಿ ವಿದ್ಯಾರಣ್ಯನೆಂಬ ಓರ್ವ ತಪಸ್ವಿಯು ತಪಶ್ಚರ್ಯ ಕೈಕೊಂಡಿದ್ದನು. ಅವನಿಗೆ ಆಹಾರ-ಪದಾರ್ಥಗಳನ್ನು ಪ್ರತಿ ದಿವಸ ಆನೆಗುಂದಿಯಿಂದ ಈರ್ವರು ಕುರುಬ ಬಂಧುಗಳು ಸ್ವತಃ ತಂದು ಒಪ್ಪಿಸುತ್ತಿದ್ದರು. ಈ ಸೇವೆಗೆ ತೃಪ್ತನಾಗಿ ಸನ್ಯಾಸಿಯು ಒಂದು ದಿವಸ ಈ ಬಂಧುಗಳಿಗೆ- "ನೀವು ರಾಜರಾಗಿರಿ" ಎಂದು ಆಶೀರ್ವದಿಸಿದರು. ಬ್ರಾಹ್ಮಣನ ಆಶೀರ್ವಾದವು ಎಂದೂ ಸುಳ್ಳಾಗುವದಿಲ್ಲವೆಂದು ದೃಢವಾಗಿ ನಂಬಿದ ಆಗಿನ ಜನರೆಲ್ಲರೂ ಈ ಬಂಧುಗಳನ್ನು (ಹಕ್ಕ ಬುಕ್ಕರನ್ನು) ಅತ್ಯಂತ ಆದರದಿಂದ ನೋಡತೊಡಗಿದರು. ಇವರು ಜಾತ್ಯಾ ಕುರುಬರಲ್ಲ.

ಕುರುಬರ ವೇಷ ಧರಿಸಿದ ವೀರರಾಗಿದ್ದರು. ತಮ್ಮ ಮಾತು ನಡೆಯುವ
ದೆಂಬ ಸಂದರ್ಭದ ಲಾಭ ಪಡೆದು ಸೈನ್ಯ ಕಟ್ಟತೊಡಗಿದರು. ಚಿಕ್ಕ ಪುಟ್ಟ
ಕದನಗಳನ್ನು ಮಾಡಿ ಜಯಿಸತೊಡಗಿದರು. ಇದೇ ಕಾಲದಲ್ಲಿ ಭೂಗತವಾದ
ಅಪಾರವಾದ ದ್ರವ್ಯದ ಶೋಧವನ್ನು ವಿದ್ಯಾರಣ್ಯ ಸನ್ಯಾಸಿಯು ಮಾಡಿದನು.
ಆ ಹಣದಿಂದ ಹಕ್ಕ ಬುಕ್ಕರಿಗೆ ಸರ್ವ ವಿಧದಿಂದಲೂ ಸಹಾಯವನ್ನೆಸಗಿ
ದನು. ತುಂಗಭದ್ರಾ ತೀರದಲ್ಲಿ ಪವಿತ್ರ ಸ್ಥಳಗಳಲ್ಲಿ ಶೋಧಿಸಿ, ವಿಜಯ
ನಗರವೆಂಬ ಪಟ್ಟಣವನ್ನು ಕಟ್ಟಿಸಿ, ವಿದ್ಯಾರಣ್ಯನು ರಾಜ್ಯವನ್ನು ಸ್ಥಾಪಿಸಿ
ಹಕ್ಕನನ್ನು ರಾಜನೆಂದು ಸಾರಿ ತಾನು ಮುಖ್ಯಮಂತ್ರಿಯಾಗಿ ಮೆರೆದನು''
ಎಂದು ಹೇಳಿದ್ದಾನೆ.

ರಶಿಯಾದಿಂದ ೧೪೭೯ ರಲ್ಲಿ ಹಿಂದುಸ್ತಾನಕ್ಕೆ ಬಂದ ಪ್ರವಾಸಿಯು,
"ಅತ್ಯಂತ ಹಳೇ ರಾಜಮನೆತನವಾದ ಬನವಾಸಿ ಕದಂಬರ ವಂಶದ ಹಕ್ಕ
ಬುಕ್ಕರು ಆನೇಗುಂದಿಗೆ ಓಡಿಬಂದು ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯ
ವನ್ನು ಕಟ್ಟಿದರು" ಎಂದು ಬರೆದಿದ್ದಾನೆ.

ಇವೆಲ್ಲವುಗಳಿಂದ ಒಂದು ಮಾತನ್ನು ನಾವು ತೆಗೆದುಕೊಳ್ಳಬಹುದು,
ಕುರುಬ ಜಾತಿಯವರೆಂದು ಹೇಳಿಕೊಳ್ಳುವ ಹಕ್ಕ ಬುಕ್ಕರೆಂಬ ಬಂಧು
ಗಳು ಓರಂಗಲ್ಲ ರಾಜ್ಯದ ಸೇವೆಯಲ್ಲಿದ್ದರು. ಅವರು ಬಲಾಢ್ಯರೂ, ಮಹಾ
ಧರ್ಮಿಷ್ಠರು ಆಗಿದ್ದರು. ೧೩೨೩ ರಲ್ಲಿ ಓರಂಗಲ್ಲ ಹಾಳಾದ ಬಳಿಕ ಇವರು
ಆನೆಗುಂದಿಗೆ ಓಡಿಬಂದು ಅಲ್ಲಿಯ ರಾಜನ ಆಶ್ರಯ ಪಡೆದರು. ಮುಸ
ಲ್ಮಾನರ ದಾಳಿಯಿಂದಲೂ, ಕ್ರೌರ್ಯದಿಂದಲೂ ಬೇಸತ್ತು ಹಕ್ಕ-ಬುಕ್ಕರು
ರಾಜನಿಂದೊಡಗೂಡಿ ಪ್ರತಿಜ್ಞೆಯನ್ನು ಕೈಕೊಂಡರು. "ಹಿಂದೂ ಧರ್ಮ
ಮತ್ತು ಪ್ರಜೆಗಳನ್ನು ರಕ್ಷಿಸು" ಎಂದು ಅಂದಿನಿಂದ ಹುಕ್ಕಬುಕ್ಕರು ಆನೇ
ಗುಂದಿಯ ಮಂತ್ರಿಯೂ ಇನ್ನೊಬ್ಬನು ಕೋಶಾಗಾರನೂ ಆಗಿ ನಿಯಮಿಸ
ಲ್ಪಟ್ಟರು. ಆನೆಗುಂದಿಯ ರಾಜನು ಮಹಮ್ಮದ ತಗಲಖನ ತಮ್ಮನ
ಮಗನಾದ ಬಹುದುದ್ದೀನನಿಗೆ ಆಶ್ರಯ ನೀಡಿದ್ದರಿಂದ ಮಹಮ್ಮದನು ಆನೆ
ಗುಂದಿಯನ್ನು (೧೩೪೪ ರಲ್ಲಿ) ಮುತ್ತಿ ಕೈವಶಮಾಡಿಕೊಂಡನು. ಮಲ್ಲಿಕ

ನನ್ನು ಆನೆಗುಂದಿಯ ಆಡಳಿತಕ್ಕೆ ಇಟ್ಟು ತಘಲಖನು ಉತ್ತರಕ್ಕೆ ಸಾಗಿದನು. ಆದರೆ ಆನೆಗುಂದಿಯ ಹಿಂದುಗಳ ಉಪಟಳ ಬಹಳವಾದುದರಿಂದ ಅದನ್ನು ತಡೆದುಕೊಳ್ಳಲಾರದೇ ಮಲ್ಲಿಕನು ಹಿಂದಿನ ರಾಜನ ಮಂತ್ರಿಯಾಗಿದ್ದ ಹಕ್ಕನನ್ನೂ ಕೋಶಾಗಾರನಾಗಿದ್ದ ಬುಕ್ಕನನ್ನೂ ಕರೆಸಿ ಅವರಿಗೆ ಆನೆಗುಂದಿಯನ್ನು ಒಪ್ಪಿಸಿ ತಾನು ಹೊರಟು ಹೋದನು. ಇದೇ ಹುಕ್ಕ ಬುಕ್ಕರು ವಿದ್ಯಾರಣ್ಯರನ್ನು ಅಕಸ್ಮಾತ್ತಾಗಿ ಕಂಡು ತುಂಗಭದ್ರಾ ದಕ್ಷಿಣ ತೀರದ ಸ್ಥಳದಲ್ಲಿ ವಿಜಯನಗರವೆಂಬ ಪಟ್ಟಣವನ್ನು ಕಟ್ಟಿ ಸಾಮ್ರಾಜ್ಯವನ್ನು ಆಳ ಮೆರೆದರು. ಇದಾದದ್ದು ೧೩೩೬ರಲ್ಲಿ.

೧ನೇ ಹರಿಹರನು ತನ್ನ ನಿವಾಸಸ್ಥಾನದ ಅತಿ ಸನಿಯದಲ್ಲಿಯೇ ಇದ್ದ ಅತಿ ಪುರಾತನ ದೇವರಾದ ಪಂಪಾಪತಿಗೆ ಹೊಸದಾಗಿ ಒಂದು ಭವ್ಯವಾದ ದೇವಾಲಯವನ್ನು ಕಟ್ಟಿಸಿದನು. ತನ್ನ ರಾಜ್ಯ ಗುರುಗಳಾದ ಮಾಧವಾಚಾರ್ಯ ವಿದ್ಯಾರಣ್ಯರಿಗೆ ಒಂದು ಮಠವನ್ನೂ ಗುಡಿಯನ್ನೂ ಕಟ್ಟಿಸಿಕೊಟ್ಟನು. ಮುಸಲ್ಮಾನರ ದಾಳಿಯಿಂದ ಓಡಿಸಲ್ಪಟ್ಟ ಸರದಾರರೂ ರಾಜರೂ ಮಾಂಡಲೀಕರೂ ಶೂರರೂ ಆದ ಸಕಲ ಹಿಂದೂಗಳು ವಿಜಯನಗರದ ಆಶ್ರಯವನ್ನು ಪಡೆದರು. ೧ನೇ ಹರಿಹರನು ಹಿಂದು ಧರ್ಮರಕ್ಷಕನು ಗೋ-ಬ್ರಾಹ್ಮಣ ಪ್ರತಿಪಾಲಕನೂ ಆದನು. ಆದರೆ ಅದನ್ನು ಬಹಿರಂಗಪಡಿಸುವಷ್ಟು ಬಲವಾಗಲೀ ಧೈರ್ಯವಾಗಲೀ ಅವನಿಗೆ ಆಗ ಇರಲಿಲ್ಲ. ದಿಲ್ಲಿ ಮುಸಲ್ಮಾನರ ಬೆದರಿಕೆಯು ಅಷ್ಟು ಪ್ರಬಲವಾಗಿತ್ತು. ಇ. ಸ. ೧೩೪೦ರ ಸುಮಾರಕ್ಕೆ ಹರಿಹರನು ತನ್ನ ರಾಜ್ಯವನ್ನು ಸಾಕಷ್ಟು ಪ್ರಮಾಣದಲ್ಲಿ ವಿಸ್ತರಿಸಿದನು. ಜನತೆಯ ಬೆಂಬಲವೂ ಸಂಪೂರ್ಣವಾಗಿದ್ದುದರಿಂದ ರಾಜ್ಯವಿಸ್ತಾರಕ್ಕೆ ತೊಂದರೆಯಾಗಲಿಲ್ಲ. ಮಲಪ್ರಭಾದ ಉತ್ತರಕ್ಕೆ ಈಗಿನ ಕಲಾದಗಿ ತಾಲೂಕಿನವರೆಗೆ ಹರಿಹರನು ಆಕ್ರಮಿಸಿಬಿಟ್ಟನು. ಇದೇ ವರುಷ ಬದಾಮಿಯಲ್ಲಿ ಒಂದು ಭದ್ರವಾದ ಕೋಟೆಯನ್ನು ಕಟ್ಟಿಸಿದನು.

೧ನೇ ಹರಿಹರನು ಕೇವಲ ಏಳು ವರುಷಗಳ ವರೆಗೆ ಮಾತ್ರ ರಾಜ್ಯವಾಳಿದನು. ಇವನ ಆಳಿಕೆಯಲ್ಲಿ ಇವನು ಮಾಡಿದ ಮಹತ್ವವಾದ ಕೆಲಸ

ವೆಂದರೆ ಸಕಲ ಹಿಂದೂ ಪ್ರಜೆಗಳಿಗೆ ಸಂರಕ್ಷಣೆಯನ್ನಿತ್ತನು. ಹಿಂದೂ ಧಾರ್ಮಿಕ ಕಾರ್ಯಗಳು ನಿರ್ವಿಘ್ನದಿಂದ ನಡೆದವು. ಪ್ರಜೆಗಳು ಸುಖ ದಿಂದಲೂ ತೃಪ್ತಿಯಿಂದಲೂ ಬಾಳಿದರು. ಹಂಪಿಯ ವಿರೂಪಾಕ್ಷದೇವರ ಭವ್ಯವಾದ ಗೋಪುರವುಳ್ಳ ದೇವಾಲಯವನ್ನು ಕಟ್ಟಿಸಿದನು. ಪೂಜೆಗಾಗಿ ಬ್ರಾಹ್ಮಣರನ್ನು ಕರೆಯಿಸಿ ಉಂಬಳಿಯನ್ನು ಹಾಕಿಕೊಟ್ಟನು. ಅವನು ಮಾಡಿದ ಏರ್ಪಾಡಿನಿಂದ ಇವತ್ತಿಗೂ ಶ್ರೀ ಪಂಪಾಪತಿಯ ಪೂಜೆ ಉತ್ಸವ ಜಾತ್ರೆಗಳು ನಿರ್ವಿಘ್ನವಾಗಿ ಸಾಗುತ್ತವೆ. ಸನ್ ೧೫೬೫ರಲ್ಲಿ ವಿಜಯ ನಗರವನ್ನು ನೆಲಸಮವಾಡುವ ಕಾಲದಲ್ಲಿ ಇದೊಂದೇ ದೇವಾಲಯವು ಅಚ್ಚಳಿಯದೇ ಉಳಿಯಿತು. ಅದು ಹೇಗೆ ಈ ಪ್ರಕಾರ ಉಳಿಯಿತೋ ಆ ಪಂಪಾಪತಿಯೇ ಬಲ್ಲನು. ೧ನೆಯ ಹರಿಹರನು ೧೩೫೩ರಲ್ಲಿ ಕಾಲ ವಾದನು.

ಇವನ ತರುವಾಯ ಇವನ ತಮ್ಮನಾದ (ಹುಕ್ಕನ ತಮ್ಮ ಬುಕ್ಕ) ಬುಕ್ಕನು ಪಟ್ಟವನ್ನೇರಿದನು. ಇವನು ಬಹಳ ಕಾಲ ಬಾಳಿದನು. ಮಂಪವ ತ್ತೇಳು ವರುಷಗಳ ವರೆಗೆ ಅಖಂಡವಾಗಿ ರಾಜ್ಯಪರಿಪಾಲನೆ ಮಾಡಿದನು. ಇವನ ಆಳಿಕೆಯಲ್ಲಿ ಸಮಗ್ರ ದಕ್ಷಿಣ ಹಿಂದುಸ್ಥಾನವು ವಿಜಯನಗರದ ಅಧಿಪತ್ಯಕ್ಕೆ ಒಳಗಾಯಿತು. ಅದೇಕೆ ಓರಿಸ್ಸಾ ಪ್ರಾಂತವನ್ನು ಸಹ ಬುಕ್ಕನು ಕೈವಶಮಾಡಿಕೊಂಡು ಬಿಟ್ಟನು. ಸೈನ್ಯದ ದರ್ಪದಿಂದಾಗಲೀ ಯುದ್ಧ ದಿಂದಾಗಲೀ ಇದೆಲ್ಲವನ್ನೂ ಜಯಿಸಲೇ ಇಲ್ಲವೆಂದರೂ ಸರಿ. ಮುಸಲ್ಮಾನರ ಕ್ರೂರ ದಬ್ಬಾಳಿಕೆಯನ್ನು ತೊರೆಯುವದಕ್ಕಾಗಿ, ಅವರ ಧರ್ಮಾಂಧತನ ದಿಂದ ಬಲಾತ್ಕಾರದಿಂದ ಹಿಂದುಗಳನ್ನು ಮುಸಲ್ಮಾನರನ್ನಾಗಿ ಪರಿವರ್ತಿ ಸುವ ನಿರ್ಣಯಕ್ಕಾಗಿ ಬೇಸತ್ತು ಕೇಳಿದೊಡನೆಯೇ ಬುಕ್ಕರಾಜನ ನೆರಳಿ ನಲ್ಲಿರಲು ದಕ್ಷಿಣದ ಸಕಲ ಸರದಾರರೂ, ದೇಸಾಯಿ ದೇಶಪಾಂಡೆಯವರೂ ಮುಂದೆ ಬಂದು ವಿಜಯನಗರದ ಪೂರ್ವಕ್ಕೆ ಎಪ್ಪತ್ತೆಂಟು ಮೈಲು ದೂರದಲ್ಲಿರುವ ಗುತ್ತಿ ಎಂಬ ಭದ್ರವಾದ ಕೋಟೆಯು ಬುಕ್ಕರಾಜನ ಸ್ವಾಧೀನಕ್ಕೆ ಬಂದಾಗ ಅಲ್ಲಿಯ ಉನ್ನತ ಗಿರಿಶಿಖರದಲ್ಲಿರುವ ಶಿಲಾಲೇಖ

ನದಿಂದ ಈ ವಿಷಯುವು ಗೊತ್ತಾಗುವದು. ೧ನೇ ಬುಕ್ಕರಾಯನು ೧೩೮೦ ರಲ್ಲಿ ಕಾಲವಾದನೆಂದು ಹೇಳಬಹುದು.

ನೆಲ್ಲೂರ ಕಲೆಕ್ಟರ ಕಚೇರಿಯಲ್ಲಿ ದೊರೆತ ತಾಮ್ರ ಪಟದಿಂದ ಇನ್ನೊಂದು ವಿಷಯು ಗೊತ್ತಾಗುವದು. ಸಂಗಮನಿಗೆ ಐದು ಮಂದಿ ಗಂಡುಮಕ್ಕಳಿದ್ದರು. ಹಕ್ಕನು ಹಿರಿಯು, ಎರಡನೆಯುವನು ಕಂಪ, ಮೂರನೆಯನು ಬುಕ್ಕನು. ಹಕ್ಕನು (೧ನೇ ಹರಿಹರನು) ತೀರಿದ ಕೂಡಲೇ ಕಂಪನು ಪಟ್ಟವೇರಬೇಕಾಯಿತು. ಅದರೆ ಬಲಾಢ್ಯನಾದ ಬುಕ್ಕನು ಕಂಪನನ್ನು ಒತ್ತಿಸರಿಸಿ ತಾನೇ ಪಟ್ಟವನ್ನು ಆಕ್ರಮಿಸಿದನು ಎಂದಿದೆ. ಇವನು ಗೌರಾಂಬಿಕೆಯೆಂಬವಳನ್ನು ವಿವಾಹವಾದನು. ಇವಳಲ್ಲಿ ೨ನೇ ಹರಿಹರನು ಜನಿಸಿದನು.

ಇ. ಸ. ೧೩೪೩-೪೪ರಲ್ಲಿ ದಕ್ಷಿಣದಲ್ಲಿ ಕೃಷ್ಣಾನದಿಯ ಉತ್ತರ ಭಾಗದ ವರೆಗೆ ಮುಸಲ್ಮಾನರನ್ನು ದಬ್ಬಿಬಿಡಬೇಕೆಂಬ ಯೋಜನೆಗಳು ಹಿಂದೂ ಸರಕಾರದಿಂದಲೂ ನಾಯಕರಿಂದಲೂ ನಿರ್ಮಿಸಲ್ಪಡತೊಡಗಿದವು. ಒರಂಗಲ್ಲದ ಉದ್ರದೇವನ ಮಗನಾದ ಕೃಷ್ಣನಾಯಕನು ಗೌಪ್ಯವಾಗಿ ಬಲ್ಲಾಳ ದೇವನಲ್ಲಿ ಹೋಗಿ ಅವನನ್ನು ಕಂಡನು. ಈ ಭಾಗದಲ್ಲಿರುವ ಎಲ್ಲ ಮುಸಲ್ಮಾನರನ್ನು ಮುಸಲ್ಮಾನ ಸರದಾರರನ್ನು ಓಡಿಸಲು ಸಕಲ ಹಿಂದುಗಳೂ ಒಟ್ಟಾಗಬೇಕೆಂಬ ಯೋಜನೆಯುನ್ನು ಹೇಳಿದನು. ತಾನು ಅದಕ್ಕೆ ಸಿದ್ಧನಾಗಿರುವೆನೆಂದು ಹೇಳುತ್ತ ಬಲ್ಲಾಳ ದೇವನನ್ನು ಮನವೊಲಿಸಿದನು. ಇದಕ್ಕೆಬಲ್ಲಾಳ ದೇವನೂ ಒಪ್ಪಿದನು. ತೆಲಂಗಾಣದ ಎಲ್ಲ ಹಿಂದುಗಳನ್ನೂ ಕ್ರೋಢಿಕರಿಸಿ ಅದಕ್ಕೆ ಬಲ್ಲಾಳನನ್ನು ನಾಯಕನನ್ನಾಗಿ ಮಾಡುವೆನೆಂದು ಕೃಷ್ಣನಾಯಕನು ವಚನವಿತ್ತನು.

ಬಲ್ಲಾಳದೇವನು ಬಹುದೊಡ್ಡ ಸೈನ್ಯವನ್ನೂ ಕೂಡಿಸಿದನು. ಕೃಷ್ಣನಾಯಕನು ಅವನನ್ನು ಕೂಡಿಕೊಂಡನು. ಯುದ್ಧವು ಪ್ರಾರಂಭವಾಯಿತು. ಆಗ ಒರಂಗಲ್ಲ ಮುಸಲ್ಮಾನರ ಆಧೀನದಲ್ಲಿತ್ತು.

ಇಮಾದ ಉಲ್ ಮುಲ್ಕನು ಅದರ ಸರದಾರನಾಗಿ ನಿಯಮಿಸಲ್ಪಟ್ಟಿದ್ದನು ಒರಂಗಲ್ಲ ಮುತ್ತಿಗೆಯಲ್ಲಿ ಇಮಾದ ಉಲ್‌ಮುಲ್ಕನು ಸೋತು ದೌಲತ್ತಾಬಾದಕ್ಕೆ (ದೇವಗಿರಿ) ಓಡಿಹೋದನು. ಒರಂಗಲ್ಲ ಮತ್ತೆ ಹಿಂದುಗಳ ವಶವಾಯಿತು. ಆ ಮೇಲೆ ಈರ್ವರು ನಾಯಕರು ಮಲಬಾರದ ಸರದಾರರನ್ನೂ ಕನ್ನಡದ ರಾಜಗುರುಗಳನ್ನು ಹುರದುಂಬಿಸಿದರು. ಅವರ ಮನವೊಲಿಸಿ ಅವರನ್ನು ತಮ್ಮೆಡೆಗೆ ಒಲಿಸಿಕೊಂಡು ಈ ರೀತಿ ಎಲ್ಲರೂ ಒಟ್ಟಾಗಿ ದಕ್ಷಿಣದಲ್ಲಿ ಮುಸಲ್ಮಾನರ ವಿರುದ್ಧ ದಂಡಯಾತ್ರೆ ಕೈಕೊಂಡು ಅವರನ್ನು ಓಡಿಸಿದರು. ದಿಲ್ಲಿ ಚಕ್ರವರ್ತಿಯಾದ ಮಹಮ್ಮದ ತಘಲಖನಿಗೆ ದೌಲತ್ತಾಬಾದವೊಂದನ್ನು ಬಿಟ್ಟರೆ ಯಾವ ಪ್ರದೇಶವೂ ಅವನ ಕೈಕೆಳಗೆ ಉಳಿಯಲಿಲ್ಲ.

ಆದರೆ ಈ ಪ್ರಾಂತಗಳು ಬಹಳ ದಿವಸ ಹಿಂದೂ ಸರದಾರರ ವಶದಲ್ಲಿ ಉಳಿಯಲಿಲ್ಲ. ಮತ್ತೆ ಮುಸಲ್ಮಾನರ ದಾಳಿಗೆ ಅವು ತುತ್ತಾದವು. ಹಿಂದುಗಳು ಕೃಷ್ಣಾನದಿ ದಕ್ಷಿಣಕ್ಕೆ ಸರಿಯಬೇಕಾಯಿತು. ಆದರೆ ಅಲ್ಲಾವುದ್ದೀನ ಖಿಲಜಿಯ ದರ್ಪವು ದಕ್ಷಿಣದಲ್ಲಿ ಉಳಿಯಲಿಲ್ಲ. ಅಲ್ಲಾವುದ್ದೀನ ಬಹಮನೀ ಎಂಬ ಸರದಾರನು ಆ ಪ್ರಾಂತವನ್ನು ಆಕ್ರಮಿಸಿದನು. ಕಲಬುರ್ಗಿಯನ್ನು ತನ್ನ ಮುಖ್ಯ ಠಾಣೆಯನ್ನಾಗಿ ನಿಯಮಿಸಿಕೊಂಡನು. ಇ. ಸ. ೧೩೪೭ರ ಅಗಷ್ಟ ೩ನೆಯ ತಾರೀಖಿನ ದಿವಸ ತಾನೇ ಆ ಭಾಗದ ಸುಲ್ತಾನನೆಂದು ಬಹಿರಂಗವಾಗಿ ಘೋಷಿಸಿ ಪಟ್ಟಾಭಿಷಿಕ್ತನಾದನು. ಈ ಬಹಮನೀ ವಂಶವು ಆ ಭಾಗವನ್ನು ಸುಮಾರು ೧೪೦ ವರುಷಗಳ ಕಾಲ ಆಳಿತು.

ಅಲ್ಲಾವುದ್ದೀನನು ಪಟ್ಟವೇರಿದ ನಂತರ ದಕ್ಷಿಣದ ದಂಡಯಾತ್ರೆಯನ್ನು ಕೈಕೊಂಡು ಕರ್ನಾಟಕದ ಭಾಗವನ್ನು ಸೆಳೆದುಕೊಂಡನು. ಆದವಾನಿಯವರೆಗೆ ಸಾಗಿ ಎಲ್ಲವನ್ನು ಗೆದ್ದನು. ಲೂಟಿ, ಸುಲಿಗೆ ಕೊಳ್ಳೆ ಹೊಡೆಯುವದನ್ನು ಅತಿ ಹೇಯ ರೀತಿಯಲ್ಲಿ ಮಾಡಿ ಹಿಂತಿರುಗಿದನು. ಹಿಂದುಗಳು ತುಂಗಭದ್ರಾ ದಕ್ಷಿಣದ ವರೆಗೆ ಸರಿಯಬೇಕಾಯಿತು.

ಅಲ್ಲಾವುದ್ದೀನನು ಇ. ಸ. ೧೩೫೮ರಲ್ಲಿ ತನ್ನ ಅರವತ್ತೇಳನೆಯ ವಯಸ್ಸಿನಲ್ಲಿ ಸತ್ತನು. ಅವನ ತರುವಾಯ ಅವನ ಮಗನಾದ ಮಹಮ್ಮದಶಹನು ಪಟ್ಟವೇರಿದನು. ವಿಜಯನಗರದ ರಾಜರು ಅಲ್ಲಾವುದ್ದೀನನಿಗೆ ಒಂದು ಅತ್ಯಮೂಲ್ಯವಾದ ಮಾಣಿಕ್ಯವನ್ನು ಕಾಣಿಕೆಯಾಗಿ ಕಳಿಸಿದ್ದರಿಂದ ಅದನ್ನು ತನ್ನ ಸಿಂಹಾಸನದ ಶಿಖರಕ್ಕೆ ಹಚ್ಚಿಸಿದ್ದನಂತೆ.

೧ನೇ ಬುಕ್ಕನು ಒರಂಗಲ್ಲ ಸರದಾರನ ಸಹಾಯ ಪಡೆದು ೧೩೫೯ರಲ್ಲಿ ಮಹಮ್ಮದ ಶಹಾ ಬಹಮನೀಯ ವಿರುದ್ಧ ದಂಡೆತ್ತಿ ಬಂದನು. ಆಗ ನಾಡಗೌಡ ಸಾಯಣ್ಣನ ಮಗನಾದ ಮಲ್ಲಿನಾಥನು ಮಹಾದಂಡ ನಾಯಕನಾಗಿ ಸೇನಾಪತಿಯೆಂದು ನಿಯಮಿಸಲ್ಪಟ್ಟಿದ್ದನು. ಆ ವೇಳೆಗೆ ಬಹಮನೀ ಸುಲ್ತಾನನಲ್ಲಿ ಯುದ್ಧದ ತಯಾರಿ ಇರಲಿಲ್ಲ. ಮೆತ್ತಗಿನ ಸೌಮ್ಯದ ಮಾತುಗಳಿಂದ ವಿಜಯನಗರವನ್ನು ಸಾಂತ್ವನಗೊಳಿಸಿ ಹೇಗೋ ಕಳಿಸಿಕೊಟ್ಟನು. ಮರುವರುಷವೇ ಪ್ರಚಂಡವಾದ ಸೇನಾಬಲದಿಂದ ಮಹಮ್ಮದಶಹನು ವಿಜಯನಗರ ಸಾಮ್ರಾಜ್ಯವನ್ನು ಪ್ರವೇಶಿಸಿ ಸಿಕ್ಕಸಿಕ್ಕಲ್ಲಿ ಕೊಲೆ ಸುಲಿಗೆ ಮೊದಲಾದವುಗಳನ್ನು ಅವ್ಯಾಹತವಾಗಿ ನಡೆಸುತ್ತ ರಾಜಧಾನಿಯ ವರೆಗೆ ಬಂದುಬಿಟ್ಟನು. ಆಗ ೧ನೇ ಬುಕ್ಕನು ಒಪ್ಪಂದಕ್ಕೆ ಸಿದ್ಧನಾಗಿ ಅವನಿಗೆ ಅಗಣಿತ ಧನಕನಕಾದಿಗಳನ್ನು ಕೊಟ್ಟು ಕಳಿಸಿಕೊಟ್ಟನು. ಈ ಯುದ್ಧದಿಂದ ವಿಜಯನಗರಕ್ಕೆ ಬಹಳ ಹಾನಿಯಾದದ್ದಲ್ಲದೇ ಅವಮಾನವೂ ಆಯಿತು.

ಆದರೆ ಒರಂಗಲ್ಲ ಮಾತ್ರ ಎಂದೂ ಶಾಂತವುಳಿಯಲಿಲ್ಲ. ಮುಂದೆ ಕೆಲವೇ ದಿವಸಗಳಲ್ಲಿ ಮದೋನ್ಮತ್ತನಾದ ಮಹಮ್ಮದಶಹನು ಸಮುದ್ರ ತೆರೆಯಂತೆ ಕಾಣುವ ಅಗಣಿತ ಸೈನ್ಯದೊಡನೆ ಒರಂಗಲ್ಲನ್ನು ಮುತ್ತಿದನು. ಅಲ್ಲಿಯ ಕೈಗೆಸಿಕ್ಕ ಪ್ರತಿಯೊಬ್ಬ ಗಂಡಸು ಮಕ್ಕಳು ಮುದುಕರನ್ನು ಚಂಡಾಡಿಬಿಟ್ಟನು. ಸ್ತ್ರೀಯರನ್ನು ಅಪಹರಿಸಿದನು. ಅಪಾರ ಸಂಪತ್ತನ್ನು ಎತ್ತಿಹಾಕಿದನು. ಒರಂಗಲ್ಲದ ರಾಜನಾದ ವಿನಾಯಕದೇವನನ್ನು ಜೀವಂತ ಹಿಡಿದುತಂದು ಕಟ್ಟಿಗೆಯ ರಾಶಿಯ ಚಿತೆಯನ್ನು ಸಾರ್ವಜನಿಕ ಸ್ಥಳದಲ್ಲಿ

ನಿರ್ಮಿಸಿ ಎಲ್ಲರೆದುರೇ ಅವನನ್ನು ಅದರಲ್ಲಿ ಒಗೆದು ಸುಡಿಸಿಬಿಟ್ಟನು. ವಿಜಯದ ಹರ್ಷೋನ್ಮಾದದಿಂದ ತನ್ನ ಸೈನ್ಯ ಸಮೇತವಾಗಿ ಹಿಂತಿರು ಗಿ ನು.

ಅತಿಯಾಗಿ ಮನನೊಂದವರೂ ಮನೆಯನ್ನು ಧನವನ್ನೂ ಆಪ್ತರಿಷ್ಟ ರನ್ನೂ ಸ್ತ್ರೀಯರನ್ನೂ ಕಳೆದುಕೊಂಡು ಒರಂಗಲ್ಲದಿಂದ ಉಳಿದ ತರುಣರು ಅತ್ಯಂತ ಶೀಘ್ರದಲ್ಲಿ ನೆರೆಹೊರೆಯ ಸರದಾರರ ಸಹಾಯ ಶೇಖರಿಸಿಕೊಂಡು ಮಹಮ್ಮದಶಹನ ಸೈನ್ಯವನ್ನು ಎದುರಿಸಿದರು. ಜಯ ಮತ್ತು ಮದ್ಯ ಸೇವ ನೆಯ ಮದದಲ್ಲಿದ್ದ ಈ ಸೈನ್ಯವನ್ನು ನಿರ್ದಯದಿಂದಲೂ ಸೇಡಿನ ಆವೇಶ ದಿಂದಲೂ ಹಿಂದುಗಳ ಚೂರಚೂರು ಮಾಡಿಬಿಟ್ಟರು. ಸ್ವತಃ ಮಹಮ್ಮದ ಶಹನ ತೋಳಿಗೆ ಬಲವಾದ ಗಾಯವಾಗಿ ಓಡಿಹೋಗಿ ನೀರಿನಲ್ಲಿ ಈಸಿ ಪಾರಾ ದನು. ಸುಲ್ತಾನನ ಸೈನ್ಯದಲ್ಲಿ ಕೇವಲ ೧೫೦೦ ಜನರು ಮಾತ್ರ ಬದುಕಿ ಬಂದರೆಂದು ವರದಿಯಾಗಿದೆ. ಬಹಮನಿ ಮಹಮದಶಹನು ಒಯ್ಯುತ್ತಿದ್ದ ಎಲ್ಲ ಲೂಟಿಯನ್ನು ತಿರುಗಿ ಒರಂಗಲ್ಲಕ್ಕೆ ತರಲಾಯಿತು.

ಬಹಮನೀ ಸುಲ್ತಾನನಂಥ ಪ್ರಬಲವಾದ ಶತ್ರುವನ್ನು ಮುಗ್ಗುಲಲ್ಲಿ ಟ್ಟುಕೊಳ್ಳುವದು ಸದಾ ಗಂಡಾಂತರಕಾರಿಯಾದ ೧ನೇ ಬುಕ್ಕನೂ ಒರಂ ಗಲ್ಲದ ರಾಜನು ಕೂಡಿಯೇ ಯೋಚಿಸಿ ದಿಲ್ಲಿ ಸಾಮ್ರಾಟನಿಗೆ ತಮ್ಮ ಶಾಂತಿ ದೂತರನ್ನು ಒಟ್ಟಾಗಿಯೇ ಕಳಿಸಿದರು. ಫಿರೋಜಶಹನು ಸೈನ್ಯ ಸಹಾಯ ವನ್ನು ತಮಗೆ ಕೊಟ್ಟದ್ದಾದರೆ ದಕ್ಷಿಣದಲ್ಲಿ ತಾವಿಬ್ಬರೂ ಅವನಿಗೆ ಮಿತ್ರರಾಗಿ ಮಾಂಡಲೀಕರಾಗಿ ಉಳಿಯುವೆವೆಂದು ಹೇಳಿಕಳಿಸಿದ್ದರು. ಆದರೆ ದಿಲ್ಲಿ ಆಂತರಿಕ ವ್ಯವಹಾರವು ಬಹಳ ದುಸ್ಥಿತಿಯಲ್ಲಿತ್ತು. ಅದನ್ನು ಸುಧಾರಿಸಿ ಕೊಂಡು ತನ್ನ ಸ್ಥಾನವನ್ನೂ ಕಾಯ್ದುಕೊಂಡು ಹೋಗುವದು ಅವಶ್ಯ ವಿದ್ದುದರಿಂದ ಫಿರೋಜಶಹನು ಇವರ ಮಾತಿಗೆ ಲಕ್ಷ್ಯವೀಯಲಿಲ್ಲ ದಿಲ್ಲಿಯಿಂದ ನಿರಾಶರಾಗಿ ಶಾಂತಿದೂತರು ತಿರುಗಿದ ಸುದ್ದಿಯು ಬಹಮನೀ ಮಹಮ್ಮದಶಹನಿಗೆ ಹತ್ತಿತು. ಇದರಿಂದ ಅವನು ಅತ್ಯಂತ ಉತ್ಸಾಹಿತ ನಾದನು. ಮತ್ತೆ ಸೈನ್ಯಸಂಗ್ರಹ ಕಾರ್ಯ ಪ್ರಾರಂಭಿಸಿದನು. ತನ್ನ ಇಡೀ

ಸೈನ್ಯವನ್ನು ಎರಡು ಭಾಗಮಾಡಿ ಒಂದನ್ನು ಒರಂಗಲ್ಲ ಮೇಲೆಯೂ ಮತ್ತೊಂದನ್ನು ಗೋವಳಕೊಂಡದ ಮೇಲೆಯೂ ಕಳಿಸಿದನು. ಎರಡೂ ಕಡೆಯಲ್ಲಿ ಜಯಲಭಿಸಿತು. ಒರಂಗಲ್ಲ ರಾಜನು ಶರಣುಬಂದನು. ಗೋವಳಕೊಂಡವು ಬಹಮನಿಯವರೊಂದಿಗೆ ಮಿತ್ರತ್ವದ ದ್ಯೋತಕವೆಂದು ಅತ್ಯಂತ ಬೆಲೆಬಾಳುವ ನವರತ್ನ ಖಚಿತವಾದ ಸಿಂಹಾಸನವನ್ನು ಮಹಮ್ಮದ ಶಹನಿಗೆ ಅರ್ಪಿಸಿ ಒಡಂಬಡಿಕೆಮಾಡಿಕೊಂಡನು. ಮುಂದೆ ೧೪೨೪ರಲ್ಲಿ ಒರಂಗಲ್ಲ ಪೂರ್ಣ ನಿರ್ನಾಮವಾಗಿ ಬಹಮನೀ ರಾಜ್ಯದಲ್ಲಿ ಸಮಾವೇಶವಾಯಿತು. ಈ ರೀತಿಯಾಗಿ ಬಹಮನೀ ರಾಜ್ಯವು ಕೃಷ್ಣಾ ನದೀ ತೀರದವರೆಗೆ ವಿಸ್ತರಿಸಲ್ಪಟ್ಟಿತು.

ಇ. ಸ. ೧೩೬೬ರಲ್ಲಿ ಒಂದು ಮೋಜಿನ ಪ್ರಸಂಗವು ಒದಗಿಬಂದಿತು. ಇದೇ ಮುಂದೆ ದೊಡ್ಡ ಯುದ್ಧಕ್ಕೆ ಕಾರಣವಾಗಿ ವಿಜಯನಗರದ ಸೈನ್ಯದಲ್ಲಿ ಅರ್ಧಕೋಟಿ ಸೈನಿಕರು ಪ್ರಾಣತ್ಯಾಗ ಮಾಡಬೇಕಾಯಿತು ಒಂದಾನೊಂದು ದಿನ ಬಹಮನೀ ಸುಲ್ತಾನನಾದ ಮಹಮ್ಮದಶಹನು ತನ್ನ ರಮಣೀಯವಾದ ಉದ್ಯಾನದಲ್ಲಿ ಸಂಜೆಯ ವೇಳೆಯಲ್ಲಿ ತನ್ನ ಸಕಲ ಪರಿವಾರದೊಂದಿಗೆ ಭೋಜನಕ್ಕಾಗಿ ಕುಳಿತಿದ್ದನು. ಮೃಷ್ಟಾನ್ನ ಭೋಜನವಾಯಿತು. ಕಂಠಮಟ ಸುರಾಪಾನವಾಯಿತು ಸುಂದರಿಯರ ಅಂಗಾಂಗ ಪ್ರದರ್ಶನದಿಂದೊಡಗೂಡಿದ ನೃತ್ಯವಾಯಿತು. ಗಾಯಕರ ಸಮೂಹವು ಸಕಲ ವಾದ್ಯಗಳೊಡನೆ ಅಮೀರ ಖುಸ್ರೂ ಬರೆದ ಸುಲ್ತಾನ ಸ್ತುತಿಪರ ಗಾಯನವನ್ನೂ ಹೇಳಲಾಯಿತು. ಸುಲ್ತಾನನಿಗೆ ಪರಮ ಸಂತೋಷವಾಯಿತು. ಮೈಮೇಲಂತೂ ಎಚ್ಚರವೇ ಇರಲಿಲ್ಲ. ಆನಂದದ ಭರದಲ್ಲಿ ತನ್ನ ಅಮಾತ್ಯನಾದ ಮಲ್ಲಿಕ ಯುಸೂಫ ಉದ್ದೀನಗೋರಿ ಎಂಬವನನ್ನು ಕರೆದು ಈ ನರ್ತಕರಿಗೂಗಾಯಕರಿಗೂ ವಾದ್ಯ ಬಾರಿಸುವವರಿಗೂ(ಒಟ್ಟು ೩೦೦ ಜನರಿದ್ದರು)ಯಥೇಷ್ಟವಾದ ಬಹುಮಾನವನ್ನು ಕೊಡಲು ವಿಜಯನಗರದ ಬುಕ್ಕರಾಯನಿಗೆ ಆದೇಶವನ್ನು ಕಳಿಸಲು ಹೇಳಿದನು. ಸುಲ್ತಾನನ ಆಜ್ಞೆ ಇದು, ಪಾಲಿಸಲೇಬೇಕು. ಮರುದಿನ ಅಮಾತ್ಯನು ಕುದುರೆ ಸವಾರನೊಂದಿಗೆ ಬಹಮನೀ ಸುಲ್ತಾನನ ಆದೇಶವನ್ನು ವಿಜಯನಗರಕ್ಕೆ ಕಳಿಸಿಕೊಟ್ಟನು.

ಬುಕ್ಕರಾಯನು ಆಸ್ಥಾನದಲ್ಲಿ ಕುಳಿತಿದ್ದನು. ಮಹಮ್ಮದಶಹನ ಆದೇಶವನ್ನು ತೆರೆದು ಓದಿದನು. ಸಿಟ್ಟಿನಿಂದ ಕಿಡಿಕಿಡಿಯಾದನು. "ಈ ಯವನನ ಸತ್ಕಾರ ಕೂಟಕ್ಕೆ ವಿಜಯನಗರದ ದೊರೆಗಳು ಬಹುಮಾನ ಕೊಡಬೇಕೆ?" ಎಂದು ಒದರಾಡಿದನು. ಬಂದಂಥ ಕುದುರೆ ಸವಾರನನ್ನು ಕತ್ತೆಯ ಮೇಲೆ ಅಮಂಗಲ ರೂಪದಲ್ಲಿ ಕುಳ್ಳಿರಿಸಿ ನಗರದ ಸಂದಿ ಮೂಲೆ ಗಳಲ್ಲಿ ಮೆರವಣಿಗೆ ಮಾಡಿ ಕಳಿಸಿಕೊಟ್ಟನು. ೧ನೇ ಬುಕ್ಕನು ಕೂಡಲೇ ಸೈನ್ಯವನ್ನು ಸಂಗ್ರಹಿಸಿದನು. ೩೦ ಸಾವಿರ ಕುದುರೆ ಸವಾರರನ್ನೂ ೩ ಸಾವಿರ ಗಜದಳವನ್ನೂ ೧೦ ಲಕ್ಷ ಕಾಲಾಳುಗಳನ್ನೂ ಶೇಖರಿಸಿ ಆದವಾನಿ ಕೋಟೆಗೆ ಕಳಿಸಿದನು. ಅಲ್ಲಿಂದ ಬಹಮನೀ ವಶದಲ್ಲಿದ್ದ ಮುದುಗಲ್ಲ ಕೋಟೆಗೆ ಲಗ್ಗೆ ಇಟ್ಟನು. ಆಗ ಮಳೆಗಾಲವಿತ್ತು ಆದರೂ ಶೌರ್ಯದಿಂದ ಕಾದಿ ಕೋಟೆಯನ್ನು ವಶಪಡಿಸಿಕೊಂಡನು. ಅಲ್ಲಿರುವ ಮುಸಲ್ಮಾನ ಗಂಡಸರನ್ನೂ ಹೆಂಗಸರನ್ನೂ ಬಾಲಕರನ್ನೂ ವೃದ್ಧರನ್ನೂ ಎಲ್ಲರನ್ನೂ ಸಂಹರಿಸಿಬಿಟ್ಟರು.

ಅದರಲ್ಲಿ ಒಬ್ಬನು ಪಾರಾಗಿ ಕಲಬುರ್ಗಿಗೆ ಓಡಿಹೋಗಿ ಮಹಮ್ಮದ ಶಹನಿಗೆ ವಾರ್ತೆ ಮುಟ್ಟಿಸಿದನು: ಸುಲ್ತಾನನು ಸಿಟ್ಟಿನಿಂದ ತಲೆತಿರುಗಿಯೇ ಹೋಯಿತು. "ಮೂರ್ಖ ನೀನಾದರೂ ಏಕೆ ತಪ್ಪಿಸಿಕೊಂಡು ಬಂದಿ" ಎಂದು ಅವನನ್ನು ಅಲ್ಲಿಯೇ ತನ್ನ ಖಡ್ಗಕ್ಕೆ ಆಹುತಿಕೊಟ್ಟನು. ಈ ಕೃತ್ಯದ ಸೇಡು ತೀರಿಸಿಕೊಳ್ಳುವದಕ್ಕಾಗಿ ಕಾಲಯಮನಂತೆ ಮಹಮ್ಮದ ಶಹನು ವಿಜಯನಗರದ ಮೇಲೆ ದಂಡಯಾತ್ರೆಯನ್ನು ಕೈಕೊಂಡನು. "ಈ ಹಿಂದೂ ಜನರ ಒಂದು ಲಕ್ಷ ಜೀವಿಗಳನ್ನು ಪರಲೋಕಕ್ಕೆ ಕಳಿಸದ ವಿನಃ ವಿಶ್ರಮಿಸುವದಿಲ್ಲ. ಆಹಾರ ನಿದ್ರಾ ಸೇವಿಸುವದಿಲ್ಲ ಹಿರಿದ ಕತ್ತಿಯನ್ನು ಒರೆ ಯಲ್ಲಿಡುವದಿಲ್ಲ"ವೆಂದು ಪ್ರತಿಜ್ಞೆ ಮಾಡಿ ಮಹಮ್ಮದಶಹನು ಮುದಗಲ್ಲ ಕೋಟೆಯನ್ನು ಪುನಃ ಪಡೆಯಲು ಹೊರಟನು. ಅವನ ಆರ್ಭಟವನ್ನು ಕಂಡು ೧ನೆಯ ಬುಕ್ಕನು ಒದರಿದನು. ಮುದಗಲ್ಲ ಕೋಟೆಯಲ್ಲಿಯ ತನ್ನ ಎಲ್ಲ ಐಶ್ವರ್ಯ, ಆನೆ, ಅಶ್ವ ಮೊದಲಾದ ಹೆಚ್ಚಿನವೆಂದು ಕಂಡವುಗಳನ್ನೆಲ್ಲವನ್ನೂ ರಾತ್ರಿ ರಾತ್ರಿಯೇ ವಿಜಯನಗರಕ್ಕೆ ಸಾಗಿಸತೊಡಗಿದನು.

ರಾತ್ರಿ ಬಹಳವಾಗಿತ್ತು. ಮಳೆಯಿಂದ ನೆಲವೆಲ್ಲವೂ ಕೆಸರಾಗಿದ್ದಿತು. ಆನೆ ಅಶ್ವಗಳು ಬಹಳ ಪ್ರಯಾಸದಿಂದ ದಾರಿ ಕ್ರಮಿಸತೊಡಗಿದವು. ಈ ಚಟುವಟಿಕೆಯನ್ನೂ ಕಂಡು ಒಮ್ಮಿಂದೊಮ್ಮೆಲೇ ಮಹಮ್ಮದಶಹನು ಮುದಗಲ್ಲ ಕೋಟೆಗೆ ಲಗ್ಗಿ ಇಟ್ಟನು. ರಾತ್ರಿ ಇದ್ದರೂ ಕೂಡ ಯಶಸ್ವೀ ರೀತಿಯಿಂದ ಮುಸ್ಲಿಮ ಸೈನ್ಯವು ಮುಂದರಿಯಿತು. ರಾಜನು ಗಾಬರಿಯಾದನು. ತನ್ನ ಸಕಲ ಪರಿವಾರದೊಂದಿಗೆ ಕೋಟೆಯನ್ನು ಇದ್ದಕ್ಕಿದ್ದಂತೆಯೇ ತೊರೆದು ಪಾರಾಗಿ ಓಡಿಬಿಟ್ಟನು. ಮುದಗಲ್ಲ ಕೋಟೆಯು ಪುನಃ ಬಹಮನೀ ರಾಜ್ಯದಲ್ಲಿ ಉಳಿಯಿತು. ಆಗ ಮುಸ್ಲೀಮರು ಕೋಟೆಯಲ್ಲಿ ವಾಸಿಸುತ್ತಿದ್ದ ಹಿಂದು ಹೆಂಗಸರನ್ನೂ ಗಂಡಸರನ್ನೂ ಬಾಲವೃದ್ಧರನ್ನೂ ಯಾವ ನಿಧಿನಿಷೇಧವಿಲ್ಲದೇ ಖಡ್ಗಗಳಿಗೆ ಅರ್ಪಿಸಿದರು. ಆ ಸಮಯದಲ್ಲಿ ಸತ್ತ ಸಂಖ್ಯೆಯು ೭೦ ಸಾವಿರಕ್ಕೂ ಮೇಲ್ಪಟ್ಟಿತೆಂದು ಉಲ್ಲೇಖವಿದೆ.

ಮಹಮ್ಮದಶಹನು ಮಳೆಗಾಲವನ್ನು ಮುದಗಲ್ಲ ಕೋಟೆಯಲ್ಲಿಯೇ ಕಳೆದನು. ಚಳಿಗಾಲ ಪ್ರಾರಂಭದಲ್ಲಿ ಮಹಮ್ಮದಶಹನು ಮತ್ತೆ ಹೆಚ್ಚಿನ ಸೈನ್ಯ ಶೇಖರಿಸಿ ಆದವಾನಿಯ ಕಡೆಗೆ ದಂಡೆತ್ತಿ ಬಂದನು. ಆದವಾನಿಯು ತುಂಗಭದ್ರಾ ನದೀ ತೀರದಲ್ಲಿಯ ಭದ್ರವಾದ ಆಯಕಟ್ಟಿನ ಸ್ಥಳವು. ಅದರ ಆಡಳಿತವನ್ನು ಬುಕ್ಕರಾಯನು ತನ್ನ ತಂಗಿಯ ಮಗನ ಸ್ವಾಧೀನಕ್ಕೆ ಒಪ್ಪಿಸಿದನು. ಬುಕ್ಕರಾಯನು ಸಹ ಅಗಣಿತ ಸೈನ್ಯದೊಡನೆ ತುಂಗಭದ್ರಾ ದಕ್ಷಿಣ ತೀರದಲ್ಲಿ ಬೀಡುಬಿಟ್ಟನು. ಮಹಮ್ಮದಶಹನು ನದಿಯನ್ನು ಹೇಗೋ ಹಿಂದೂ ಸೈನಿಕರ ಕಣ್ಣುತಪ್ಪಿಸಿ ಸಿರುಗುಪ್ಪಾ ಎಂಬಲ್ಲಿ ದಾಟಿ ಬಂದನು. ವಿಜಯನಗರ ಸಾಮ್ರಾಜ್ಯ ಸ್ಥಾಪಿಸಲ್ಪಟ್ಟಾಗಿನಿಂದ ಮುಸ್ಲಿಮರು ಈ ರಾಜ್ಯದಲ್ಲಿ ಹೊಕ್ಕದ್ದು ಇದೇ ಮೊದಲನೆಯ ಸಲ. ಕೌತಾಳ ಎಂಬ ವಿಶಾಲವಾದ ಭೂಮಿ ಇದ್ದ ಗ್ರಾಮದ ಹತ್ತಿರ ಭೀಕರವಾದ ಕದನವು ಪ್ರಾರಂಭವಾಯಿತು. ಹಿಂದೂ ಮುಸ್ಲಿಮರು ಕೈಗೆಕೈ ಹತ್ತಿ ಕಾದಿದರು.

ಇ. ಸ. ೧೩೬೬ ಜುಲೈ ೨೩ನೇ ತಾರೀಖಿನ ದಿನ ಈ ಕದನವು ಪ್ರಾರಂಭವಾಯಿತು. ಮೊದಮೊದಲು ಹಿಂದೂಗಳಿಗೆ ಜಯ ದೊರೆತಂತಾ

ಯಿತು. ಆಗ ಸುಲ್ತಾನನು ಹೊಸ ಸೈನ್ಯದೊಡನೆ ಪುನಃ ಏರಿಬಂದನು. ಹಿಂದು ಸೇನಾಧಿಪತಿಯಾದ ಮಲ್ಲಿನಾಥನಿಗೆ ಘೋರಗಾಯವಾದ್ದರಿಂದ ಆಕಸ್ಮಾತ್ತಾಗಿ ರಣದಿಂದ ಕಣ್ಮರೆಯಾದನು. ಸೇನಾಪತಿಯು ಬಿದ್ದನೆಂದು ತಿಳಿದು ಹಿಂದು ಸೈನ್ಯವು ಪ್ರಾಣರಕ್ಷಣೆಗಾಗಿ ಚಲ್ಲಾಪಿಲ್ಲಿಯಾಯಿತು. ಮುಸಲ್ಮಾನರು ಜಯಶೀಲರಾದರು ಆಗ ನಡೆಸಿದ ಲೂಟಿಯು ನಿರ್ದಯಪೂರ್ಣವಾಗಿತ್ತು ಹಿಂದೂ ದೇವಾಲಯಗಳೆಲ್ಲವೂ ನಾಶವಾದವು ಆಕಳುಗಳೆಲ್ಲವೂ ಸಂಹರಿಸಲ್ಪಟ್ಟವು.

ಸ್ತ್ರೀ-ಪುರುಷ ಬಾಲ-ವೃದ್ಧರೆಲ್ಲರನ್ನೂ ನೀಚತನದಿಂದ ಯಮಸದನಕ್ಕಟ್ಟಿದನು. ಗರ್ಭಿಣಿ ಸ್ತ್ರೀಯರನ್ನೂ ಸಹ ಬಿಡದೇ ಕೊಂದರೆಂದು ಉಲ್ಲೇಖವಿದೆ. ಸ್ವತಃ ಮಹಮ್ಮದಶಹನು ರಣರಂಗದಲ್ಲಿ ಒಂದು ವಾರದ ವರೆಗೆ ನಿಂತು ಈ ಕೃತಿಗಳೆಲ್ಲವನ್ನೂ ಮಾಡಿಸಿದನು. ಆದರೂ ತೃಪ್ತನಾಗಲಿಲ್ಲ. ಬುಕ್ಕರಾಯನನ್ನು ಬೆನ್ನಟ್ಟಿದನು. ಬುಕ್ಕರಾಯನು ಅರಣ್ಯವನ್ನು ಹೊಕ್ಕು ಆತ್ಮರಕ್ಷಣೆಗಾಗಿ ಅಲೆದಾಡಿ ಕೊನೆಗೆ ವಿಜಯನಗರವನ್ನು ಬಂದು ಸೇರಿಕೊಂಡನು.

ಸುಲ್ತಾನ ಮಹಮ್ಮದಶಹನು ಒಂದು ತಿಂಗಳವರೆಗೆ ವಿಜಯನಗರವನ್ನು ಮುತ್ತಿದನು. ನಿರರ್ಥಕವಾಯಿತು. ಸೋಲಿನ ಸೋಗಿನಿಂದ ತನ್ನ ಸಹಪರಿವಾರದೊಡನೆ ಹಿಂದಕ್ಕೆ ಸರಿದನು. ತುಂಗಭದ್ರಾ ದಾಟಿ ಆಚೆಯ ದಂಡೆಯಲ್ಲಿ ಠಾಣೆ ಹೂಡಿದನು. ಹಾಗೆ ಹೋಗುವಾಗ ದಾರಿಯಲ್ಲಿ ಸಿಕ್ಕ ಎಲ್ಲ ಗ್ರಾಮಗಳನ್ನೂ ನಾಶಮಾಡಿದನು. ಪ್ರಜೆಗಳೆಲ್ಲರನ್ನೂ ಕೊಲ್ಲುತ್ತಲೇ ಸಾಗಿದನು. ಮಹಮ್ಮದಶಹನು ಸೋತನೆಂದು ಉಬ್ಬಿನಿಂದ ಬುಕ್ಕನು ವಿಲಾಸದಲ್ಲಿ ತೊಡಗಿದನು. ಮದ್ಯಪಾನ, ಸ್ತ್ರೀಸಂಗ, ನರ್ತನ ಗಾಯನಗಳಲ್ಲಿ ಅವನೂ ಅವನ ಸಕಲ ಸೈನಿಕರೂ ಅಧಿಕಾರಿಗಳೂ ಸರದಾರರೂ ಎಲ್ಲರೂ ವೈಪರೀತ್ಯ ಲೋಲಾಲಸೊಡಗಿದರು. ಇದೇ ಸಮಯವೆಂದರಿತು ಒಂದು, ರಾತ್ರಿ ಮಹಮ್ಮದಶಹನು ತನ್ನ ಸಕಲ ಸೈನ್ಯ ಸಮೇತವಾಗಿ ತುಂಗಭದ್ರಾ ನದೀ ದಾಟಿ ಬುಕ್ಕರಾಯನ ಠಾಣೆಯನ್ನು ಮುತ್ತಿದನು. ಬುಕ್ಕ

ರಾಯನು ಪಲಾಯನ ಮಾಡಿ ವಿಜಯನಗರವನ್ನು ಸೇರಿದನು. ೧೦ಸಾವಿರ ಹಿಂದೂ ಸೈನಿಕರ ಕೊಲೆಮಾಡಿದರು. ಆದರೂ ಸುಲ್ತಾನನ ಸಿಟ್ಟು ಇಳಿಯಲಿಲ್ಲ. ವಿಜಯನಗರದ ಸುತ್ತಲಿನ ಸಕಲ ಗ್ರಾಮಗಳಿಗೆ ಕೊಳ್ಳೆಕೊಡಬೇಕೆಂದು ಗಂಡಸರು ಮಕ್ಕಳು ಮುದುಕರನ್ನು ಖಡ್ಗದಿಂದ ಸಂಹರಿಸಬೇಕೆಂದೂ ಸ್ತ್ರೀ ಸಮೂಹವನ್ನೆಲ್ಲ ತನ್ನ ಸೈನಿಕರ ತೃಪ್ತಿಗಾಗಿ ಉಪಯೋಗಿಸಬೇಕೆಂದೂ ಆಜ್ಞೆ ಇತ್ತನು. ವಿಜಯೋನ್ಮಾದದ ಮುಸ್ಲಿಮರು ಈ ಆಜ್ಞೆಯನ್ನು ಶಿರಸಾವಹಿಸಿದನು.

ಬುಕ್ಕರಾಯನು ಗಾಬರಿಯಾದನು. ಒಪ್ಪಂದಕ್ಕೆ ಸರದಾರನನ್ನು ಕಳಿಸಿದನು. ಆದರೆ ಬಹಮನೀ ಸುಲ್ತಾನನು ಒಪ್ಪಂದಕ್ಕೆ ಒಪ್ಪಲಿಲ್ಲ. "ನಾನು ೧೦ ಲಕ್ಷ ಹಿಂದೂ ಪ್ರಾಣಗಳನ್ನು ತೆಗೆದುಕೊಳ್ಳುವೆನೆಂದು ಪ್ರತಿಜ್ಞೆ ಮಾಡಿದ್ದರೂ ಈಗ ೨೦ ಲಕ್ಷಕ್ಕೆ ಮೇಲ್ಪಟ್ಟ ಹಿಂದುಗಳು ಸತ್ತಿದ್ದಾರೆ. ಆದರೂ ಸಹ ಅಂದು ವನಭೋಜನದಲ್ಲಿ ನರ್ತನ ಗಾಯನ ವಾದನಗಳನ್ನು ಮಾಡಿದವರಿಗೆ ನಿಮ್ಮ ರಾಜನು ಬಹುಮಾನವನ್ನು ಕೊಡದ ವಿನಃ ನಾನು ಶಾಂತನಾಗಲಾರೆ" ಎಂದನು. ಒಪ್ಪಂದಕ್ಕಾಗಿ ಬಂದ ಸರದಾರನಿಗೆ ಬುಕ್ಕರಾಯನು ಸಂಪೂರ್ಣ ಅಧಿಕಾರವನ್ನು ಕೊಟ್ಟದ್ದರಿಂದ ಸರದಾರನು ಹಣವನ್ನು ಆಗಿನಿಂದಲೇ ಕೊಟ್ಟುಬಿಟ್ಟನು. ಸುಲ್ತಾನನು ಶಾಂತನಾದನು. ಆಗ ಜಾಣನಾದ ಹಿಂದೂ ಸರದಾರನು "ಸುಲ್ತಾನ ಪ್ರಭುಗಳೇ ನನ್ನ ರಾಜನಾದ ಬುಕ್ಕರಾಯನು ಮಾಡಿದ ತಪ್ಪಿಗಾಗಿ ನಿರಪರಾಧಿ ಪ್ರಜೆಗಳೇಕೆ ಸಾಯಬೇಕು. ಅವರನ್ನು ಕೊಲ್ಲಬೇಡಿರಿ. ಮೇಲಾಗಿ ನಾವೂ ನೀವೂ ನೆರಹೊರೆಯ ರಾಷ್ಟ್ರಗಳು ಹಿಂದೆ ಆದದ್ದು ಆಗಿಹೋಯಿತು. ಇನ್ನು ಮುಂದಾದರೂ ಪ್ರೀತಿಯಿಂದ ಸಹಕರಿಸುತ್ತಿರೋಣ. ಇದೇ ನನ್ನ ಪ್ರಾರ್ಥನೆ'' ಎಂದು ವಂದಿಸಿದನು.

ಮಹಮ್ಮದಶಹನಿಗೆ ಸಂತೋಷವಾಯಿತು. ''ಆಗಲಿ ಇನ್ನು ಮುಂದೆ ನಾವು ನಿಮ್ಮ ರಾಜ್ಯದಲ್ಲಿ ಕೊಲೆಸುಲಿಗೆಗಳನ್ನು ಮಾಡುವದಿಲ್ಲ" ಎಂದನು. ಈ ರೀತಿ ಕೆಲವು ವರುಷಗಳ ವರೆಗೆ ವಿಜಯನಗರ ಮತ್ತು

ಕಲಬುರ್ಗಿ ನಡುವೆ ಶಾಂತತೆ ನೆಲೆಸಿತು. ಯಾವ ಕದನಗಳೂ ಆಗಲಿಲ್ಲ. ಮುಹಮ್ಮದಶಹನು ೧೩೭೫ ಎಪ್ರಿಲ ೨೧ನೇ ತಾರೀಖಿನ ದಿವಸ ಸತ್ತನು. ಅವನ ಮಗನಾದ ಮುಜಾಹಿದ ಎಂಬ ಹದಿನೆಂಟು ವರುಷದ ತರುಣನು ಪಟ್ಟವೇರಿದನು.

ಮುಜಾಹಿದನು ಕೂಡಲೇ ಬುಕ್ಕರಾಯನಿಗೆ ಒಂದು ಪತ್ರ ಬರೆದು ಕಳುಹಿಸಿದನು. "ಕೃಷ್ಣಾ ಮತ್ತು ತುಂಗಭದ್ರಾ ನಡುವಿನ ಪ್ರದೇಶವೆಲ್ಲವೂ ಬಹಮನೀ ರಾಜ್ಯಕ್ಕೆ ಸೇರಿದ್ದು ಅದನ್ನು ನೀವು ವಿಜಯನಗರದವರು ಬಲಾತ್ಕಾರದಿಂದ ಹಿಡಿದುಕೊಂಡಿರುವಿರಿ. ಕಾರಣ ಕೂಡಲೇ ಆ ಪ್ರದೇಶ ವನ್ನು ಬಂಕಾಪೂರ ಕೋಟೆ ಸಹಿತ (ಈಗ ಧಾರವಾಡ ಜಿಲ್ಲೆಯಲ್ಲಿದ್ದದ್ದು) ನಮಗೆ ಕೊಡಬೇಕು" ಎಂದು ಬರೆದಿದ್ದನು. ಇದಕ್ಕೆ ಉತ್ತರವೆಂದು ಬುಕ್ಕರಾಯನು "ರಾಯಚೂರ ಮತ್ತು ಮುದಗಲ್ಲ ಕೋಟೆಗಳು ಮತ್ತು ಅದರ ಸುತ್ತುಮುತ್ತಲಿನ ಪ್ರದೇಶವೆಲ್ಲವೂ ಬಹುಕಾಲದಿಂದಲೂ ಆನೆಗುಂದಿಯ ವಶದಲ್ಲಿದ್ದುದರಿಂದ ಅವುಗಳು ನಮ್ಮವು ನೀವು ಆಕ್ರಮಿಸಿದ್ದೀರಿ. ಅವುಗಳನ್ನು ಕೂಡಲೇ ಬಿಟ್ಟುಕೊಡಬೇಕು. ಇಷ್ಟೇ ಅಲ್ಲ ನಿನ್ನ ತಂದೆಯು ಸೆಳೆದುಕೊಂಡೊಯ್ದ ಎಲ್ಲ ಆನೆಗಳನ್ನೂ ನಮ್ಮ ವಶಕ್ಕೆ ಒಪ್ಪಿಸಬೇಕು" ಎಂದು ಬರೆದು ಕಳಿಸಿದನು.

ಇದರ ಪರಿಣಾಮವು ಯುದ್ಧವೇ ಆಯಿತು. ಬುಕ್ಕರಾಯನಿಗೂ ಮುಜಾಹಿದನಿಗೂ ಘೋರ ಕಾಳಗವಾಯಿತು. ಸುಲ್ತಾನನ ಕಕ್ಕನಾದ ದಾವುದಖಾನನು ತನಗೆ ಜಯ ಸಿಗಲಿಕ್ಕಿಲ್ಲವೆಂದು ಅಂಜಿ ಹಿಂದೆ ಸರಿಯ ತೊಡಗಿದನು. ಬುಕ್ಕರಾಯನ ತಮ್ಮನು ಹೊಸ ಸೈನ್ಯದೊಂದಿಗೆ ಬಂದದ್ದೇ ಕಾರಣವಾಗಿತ್ತು. ಆದರೆ ಮುಜಾಹಿದಶಹನ ಶೌರ್ಯದ ಅಬ್ಬರದಲ್ಲಿ ಮುಸ್ಲಿಮ ಸೈನ್ಯವು ಜೋರಿನಿಂದ ಮುಂದೆ ಸಾಗಿತು. ಹಿಂದುಗಳು ಸೋತರು. ಬುಕ್ಕರಾಯನು ಪಲಾಯನ ಮಾಡಿದನು. ೬೦ ಸಾವಿರ ಹಿಂದೂ ಸೆರೆಯಾಳುಗಳೊಂದಿಗೆ ಮುಜಾಹಿದನು ವಿಜಯನಗರದಿಂದ ಹಿಂದೆ ಸರಿದು ಆದವಾನಿಗೆ ಮುತ್ತಿಗೆ ಹಾಕಿದನು. (ಈ ೬೦ ಸಾವಿರದಲ್ಲಿ ಹೆಚ್ಚು

ಸ್ತ್ರೀಯರೇ ಇದ್ದರೆಂದು ಆಗಿನ ಇತಿಹಾಸಕಾರರು ಬರೆಯುತ್ತಾರೆ.) ಒಂಬತ್ತು ತಿಂಗಳ ವರೆಗೆ ಸತತವಾಗಿ ಆದವಾನಿಯನ್ನು ಮುತ್ತಿದರೂ ಅದು ಸುಲ್ತಾನನ ಕೈವಶವಾಗಲಿಲ್ಲ. ಆದ್ದರಿಂದ ನಿರಾಶನಾಗಿ ಕಲಬುರ್ಗಿಗೆ ತೆರಳಿದನು.

ಯುದ್ಧದಲ್ಲಿ ಕಾರಣವಿಲ್ಲದೆ ಹಿಂದೆ ಸರಿದದ್ದಕ್ಕಾಗಿ ತನ್ನ ಕಕ್ಕನಾದ ದಾವುದಖಾನನನ್ನು ಮುಜಾಹಿದನು ಹೀನಮಾತುಗಳನ್ನಾಡಿ ಅವಮಾನ ಗೊಳಿಸಿದನು. ಈ ಸಿಟ್ಟಿನಿಂದ ದಾವುದಖಾನನು ಕುಲಬುರ್ಗಿಗೆ ಹೋಗುವ ಪ್ರವಾಸದಲ್ಲಿಯೇ ಮುಜಾಹಿದನನ್ನು ಮುಗಿಸಿಬಿಡಬೇಕೆಂದು ಸಂಚುಹೂಡಿ ಒಂದು ದಿನ ಮುಜಾಹಿದನು ತನ್ನ ಡೇರೆಯಲ್ಲಿ ರಾತ್ರಿ ಮಲಗಿ ನಿದ್ರಿಸುತ್ತಿದ್ದಾಗ ದಾವುದಖಾನನು ತನ್ನ ಇಬ್ಬರೂ ಸಂಗಡಿಗರೊಡನೆ ಮುತ್ತಿ ಇರಿದು ಮುಜಾಹಿದಶಹನನ್ನು ಕೊಂದುಬಿಟ್ಟನು.

ಮುಜಾಹಿದಶಹನಿಗೆ ಮಕ್ಕಳನ್ನೂ ಆಗಿರಲಿಲ್ಲವಾದ್ದರಿಂದಲೂ ತಾನೇ ಸನಿಯದ ಬಂಧುವೆಂದು ಪಟ್ಟಕ್ಕೆ ತಾನೇ ಬಾಧ್ಯಸ್ಥನೆಂದೂ ಸಾರಿ, ಕಲಬುರ್ಗಿಗೆ ಬಂದಕೂಡಲೇ ಪಟ್ಟವೇರಿದನು ಇನ್ನೂ ಒಂದು ತಿಂಗಳು ಸಹ ಆಗಿದ್ದಿಲ್ಲ. ಅವನು ಸುಲ್ತಾನನಾಗಿ ಒಂದು ದಿವಸ ನಮಾಜು ಮಾಡು ವಾಗ ಅತೃಪ್ತರಾಗಿದ್ದ ಪ್ರಜೆಗಳಲ್ಲಿ ಓರ್ವನು ಹಿಂದಿನಿಂದ ಅವನನ್ನು ಇರಿದು ಕೊಂದುಬಿಟ್ಟನು. ದಾವುದಖಾನನಿಗೆ ಒಬ್ಬ ಮಗನಿದ್ದನು. ಅವನು ದಾವುದಖಾನನ ತರುವಾಯ ಪಟ್ಟಕ್ಕೆ ಬರಬಹುದೆಂಬ ಸಂಶಯದಿಂದ ಮುಜಾಹಿದನ ತರುವಾಯ ಹುತ್‌ಪರ್ವಾರ ಆಗಾ ಎಂಬುವವಳು ತನ್ನ ಗುಪ್ತ ಅನುಚರರಿಂದ ಆ ತರುಣನ ಕಣ್ಣುಗಳನ್ನು ಕಿತ್ತಿಸಿಬಿಟ್ಟಳು. ಆ ಮೇಲೆ ಅಲ್ಲಾವುದ್ದೀನ ಎಲ್ಲಕ್ಕೂ ಚಿಕ್ಕ ಮಗನಾದ ಮಹಮ್ಮದನನ್ನೇ ಪಟ್ಟಕ್ಕೆ ಕೂಡ್ರಿಸಿದರು.

ಈ ಮಹಮ್ಮದಶಹನು ಹಿಂದಿನ ವಾತಾವರಣವನ್ನೆಲ್ಲ ಮರೆಯು ವಂತೆ ಮಾಡಿ ಸಕಲರನ್ನೂ ಪ್ರೀತಿಯಿಂದ ಸ್ವಾಗತಿಸಿದನು ಅದೇಕೆ ?

ಇದೇ ಕಾಲಕ್ಕೆ ರಾಯಚೂರ ಕೋಟೆಗೆ ಮುತ್ತಿಗೆ ಹಾಕಿದ ಬುಕ್ಕರಾಯನನ್ನು ಕೂಡ ಸಾಂತ್ವನಗೊಳಿಸಿ ಅವನಿಂದಲೇ ಮತ್ತೆ ಕಾಣಿಕೆಗಳನ್ನು ಸ್ವೀಕರಿಸಿದನು. ಮುಂದೆ ಇಪ್ಪತ್ತು ವರುಷಗಳವರೆಗೆ ಮಹಮ್ಮದ ಶಹನು ತನ್ನ ರಾಜ್ಯವನ್ನು ಸುಖದಲ್ಲಿಟ್ಟಿದ್ದನಲ್ಲದೇ ಯಾವ ಯುದ್ಧವನ್ನೂ ಎಬ್ಬಿಸಲಿಲ್ಲ. ಇವನು ೧೩೭೮ ಎಪ್ರಿಲ ೨೦ ನೇ ತಾರೀಖಿಗೆ ತೀರಿದನು. ಬುಕ್ಕರಾಯನು ಕೂಡ ಇದೇ ಇಸ್ವಿಯಲ್ಲಿಯೇ ಸತ್ತನು.

---

# ೨. ರಾಜ್ಯ ಬೆಳವಣಿಗೆ

## (೧೩೭೮ರಿಂದ ೧೪೦೬)

೧ನೇ ಬುಕ್ಕರಾಯನ ಕಾಲದಲ್ಲಿ ವಿದ್ಯಾರಣ್ಯರು ಇನ್ನು ಪಾರ್ಥಿವ ಶರೀರದೊಂದಿಗೆ ಇದ್ದರೆಂದು ಗೊತ್ತಾಗುವದು, ಏಕೆಂದರೆ ಅವರ ಜಟುವಟಿಕೆಗಳ ಉಲ್ಲೇಖವು ೧೩೭೮ರಲ್ಲಿ ಕಂಡುಬರುವವು. ಅವರ ತರುವಾಯ ಅವರ ತಮ್ಮಂದಿರಾದ ಸಾಯಣಾಚಾರ್ಯರು ೨ನೇ ಹರಿಹರರಾಯನಿಗೆ ಮುಖ್ಯಮಂತ್ರಿಗಳಾಗಿ ರಾಜ್ಯಕಾರಭಾರ ನಡೆಸಿದರು. ೧ನೇ ಬುಕ್ಕರಾಯನಿಂದ ಅವನ ಪಟ್ಟದ ರಾಣಿಯಾದ ಗೌರಾಂಬಿಕೆಯಲ್ಲಿ ಜನಿಸಿದ ೨ನೇ ಹರಿಹರನು ತಂದೆಯ ತರುವಾಯ ಪಟ್ಟವೇರಿದನು. ಇವನು ೨೦ ವರುಷ ರಾಜ್ಯವನ್ನಾಳಿದನು. "ರಾಜಾಧಿರಾಜ"ರೆಂಬ ಬಿರುದನ್ನು ಧರಿಸಿದ ಇವನು ವಿಜಯನಗರ ಸಾಮ್ರಾಟರಲ್ಲಿ ಇವನೇ ಮೊದಲಿಗನು.

ಇವನು ಅನೇಕ ದೇವಾಲಯಗಳಿಗೆ ಉಂಬಳಿಯನ್ನು ಹಾಕಿಕೊಟ್ಟನು ದಕ್ಷಿಣದಲ್ಲಿ ತನ್ನ ವರ್ಚಸ್ಸನ್ನು ಕೆಡವಿ ರಾಜ್ಯದ ತಳವನ್ನು ಭದ್ರವಾಗಿ ಊರಿದನು. ಇ ಸ. ೧೩೭೯ರಿಂದ ೮೦ರ ವರೆಗೆ ಮುದ್ದಣ್ಣನು ಮುಖ್ಯ ಸೇನಾಪತಿಯಾಗಿದ್ದನು. ಈರುಗನೆಂಬವನು ಮತ್ತು ಗುಂಡಣ್ಣನೆಂಬವನೂ ಸೇನಾಪತಿಯಾಗಿದ್ದರು. ೨ನೇ ಹರಿಹರರಾಯನು ಎಲ್ಲಕ್ಕೂ ಮೊದಲು ಮಾಡಿದ ಮಹತ್ಕಾರ್ಯವೆಂದರೆ ಗೋವೆಯಿಂದ ಮುಸಲ್ಮಾನರನ್ನು ಹೊರಗೆ ಸಂಪೂರ್ಣವಾಗಿ ದಬ್ಬಿಬಿಟ್ಟದ್ದು. ಅವರ ಅಧಿಪತ್ಯವನ್ನು ಉದ್ಧಾವರ ಎಂಬ ಬ್ರಾಹ್ಮಣ ಗವ್ಹರ್ನರನಿಗೆ ಒಪ್ಪಿಸಿದನು.

ಮೈಸೂರು, ಧಾರವಾಡ, ಕಾಂಜೀವರಂ, ಚೆಂಗ್ಲಿಪೇಟೆ, ಮತ್ತು ತ್ರಿಚನಾಪಳ್ಳಿಗಳಲ್ಲಿ ೨ನೇ ಹರಿಹರನ ಆಳಿಕೆಯ ಶಿಲಾಲೇಖನಗಳು ಸಿಕ್ಕಿವೆಯಾದ್ದರಿಂದ ತ್ರಿಚನಾಪಳ್ಳಿಯವರೆಗೆ ಇವನು ತನ್ನ ರಾಜ್ಯವನ್ನು ವಿಸ್ತರಿಸಿದನೆಂದು ಗೊತ್ತಾಗುವದು. ಇವನು ಅನೇಕ ಸುಂದರಿಯರನ್ನು ಲಗ್ನವಾದನು. ಮಲ್ಲಾಂಬಿಕೆಯೆಂಬುವವಳು ಇವನ ಪ್ರಥಮ ಪತ್ನಿ ಅರ್ಥಾತ್ ಪಟ್ಟದರಾಣಿ ಇವನು ಹಂಪೆಯ ವಿರೂಪಾಕ್ಷದೇವರ ಪರಮ ಭಕ್ತನು. ಶಿವಾರ್ಚಕನು ಆದರೂ ಎಲ್ಲ ಜಾತಿ ಮತಪಂಥವವರನ್ನು ಅತ್ಯಂತ ಸಹಾನುಭೂತಿಯಿಂದ ನೋಡುತ್ತಿದ್ದನು.

ಇತ್ತ ಕಲಬುರ್ಗಿಯಲ್ಲಿ ಸುಲ್ತಾನ ಮಹಮ್ಮದನ ಹಿರಿಯ ಮಗನಾದ ಘಿಯಾಸುದ್ದೀನನು ತನ್ನ ತಂದೆಯ ತರುವಾಯ ಸುಲ್ತಾನನಾದನು. ಆಗ ಅವನಿಗೆ ೧೭ ವರುಷ ವಯಸ್ಸು ಮಾತ್ರ. ಅವನು ಪಟ್ಟವೇರಿ ೫೦ ದಿವಸಗಳು ಕಳೆದಿದ್ದವು. ಒಂದು ದಿನ ವಿಹಾರ ಮಹೋತ್ಸವ ನಡೆದಾಗ ಸಂಜೆಯಲ್ಲಿ ಅತ್ಯಂತ ನೀಚನಾದ ಅವನ ಗುಲಾಮನೇ ಕುಹಕತನದಿಂದ ಸುಲ್ತಾನನ ಕಣ್ಣುಗಳನ್ನು ಕಿತ್ತುಬಿಟ್ಟನು. ಮತ್ತು ಕೊಂದುಬಿಟ್ಟನು. ಇ. ಸ. ೧೩೯೭ ಜೂನ ೧೪ನೇ ದಿನವದು. ಇವನ ತರುವಾಯ ಇವನ ತಮ್ಮನಾದ ಶಮ್‌ಶುದ್ದೀನನನ್ನು ಪಟ್ಟಕ್ಕೆ ತಂದರು. ಇವನು ಐದು ತಿಂಗಳು ಸಹ ರಾಜ್ಯವನ್ನು ಆಳಿದ್ದಿಲ್ಲ ಅಷ್ಟರಲ್ಲಿಯೇ ಅವನು ತೀರಿಹೋದನು.

ದಾವುದಶಹ ಸುಲ್ತಾನನ ಎರಡನೆಯ ಮಗನಾದ ಫಿರೋಜಖಾನ ನೆಂಬವನು ಸಂಚುಹೂಡಿ ಶಮ್‌ಶುದ್ದೀನನ ಕಣ್ಣುಗಳನ್ನು ಕಿತ್ತು ಅವ ನನ್ನು ಪಟ್ಟದಿಂದ ತಳ್ಳಿ ತಾನು ಕುಳಿತುಕೊಂಡನು. ಇವನು ಪಟ್ಟವೇರಿದ್ದು ೧೩೯೭ ನವ್ಹಂಬರ ೧೫ನೇ ದಿವಸ ಫಿರೋಜಖಾನನು ವಯಸ್ಸಾದವನೂ ಅನುಭವಿಕನೂ ಇದ್ದುದರಿಂದ ತನ್ನ ಕತೃತ್ವಶಕ್ತಿಯಿಂದ ರಾಜ್ಯವನ್ನು ಒಳ್ಳೇ ವೈಭವದಿಂದ ಆಳಿದನೆಂದು ಇತಿಹಾಸಕಾರರು ಬರೆಯುತ್ತಾರೆ. ೨ನೇ ಹರಿಹರನು ಇ. ಸ. ೧೪೦೪ರ ಕೊನೆಯ ಭಾಗದಲ್ಲಿ ತೀರಿದನೆಂದು ಶಿಲಾ ಲೇಖನದಿಂದ ಗೊತ್ತಾಗುವದು.

೨ನೇ ಹರಿಹರರಾಯನ ಹಿರಿಯ ಮಗನಾದ ೨ನೇ ಬುಕ್ಕನು ನಂತರ ೧೪೦೬ ರ ವರೆಗೆ ಆಳಿದನು. ಇವನ ತರುವಾಯ ಇವನ ತಮ್ಮನಾದ ೧ನೇ ದೇವರಾಯನು ೧೪೧೨ನೇ ಇಸ್ವಿಯ ವರೆಗೆ ರಾಜ್ಯವಾಳಿದನು, ಇವನು ಮಧ್ಯವಯಸ್ಕನೂ ಶಾಂತಸ್ವಭಾವದವನೂ ಆಗಿದ್ದನು. ವಿಜಯ ನಗರದ ಸುತ್ತಲೂ ಇದ್ದ ಕೋಟೆಯ ಗೋಡೆಗಳನ್ನು ಭದ್ರಪಡಿಸಿದನ ಲ್ಲದೇ ಅವುಗಳನ್ನು ಮತ್ತಷ್ಟು ಎತ್ತರವಾಗಿ ಕಟ್ಟಿಸಿದನು. ಅದರ ಸುತ್ತಲೂ ಇನ್ನೊಂದು ಅದ್ಭುತವಾದ ಗೋಡೆಯನ್ನು ಕಟ್ಟಿಸಿ ನಗರವನ್ನು ಭದ್ರಗೊಳಿ ಸಿದನು. ಇನ್ನೊಂದು ಕಲ್ಯಾಣದ ಕಾರ್ಯವನ್ನು ಇವನು ಕೈಕೊಂಡ ದ್ದೆಂದರೆ, ತುಂಗಭದ್ರಾ ನದಿಗೆ ಡ್ಯಾಮು ಕಟ್ಟಿಸಿದನು. ಅಲ್ಲಿಂದ ಹದಿನೈದು ಮೈಲು ಉದ್ದವಾದ ಸಾಕಷ್ಟು ಅಗಲವಾದ ಕಾಲುವೆಯನ್ನು ನಿರ್ಮಿಸಿ ವಿಜ ಯನಗರದಲ್ಲಿ ತಂದನು. ಈ ಕಾಲುವೆಯು ಈಗಲೂ ಒಳ್ಳೇ ಸ್ಥಿತಿಯಲ್ಲಿದ್ದು ಎಲ್ಲ ಹೊಲಗಳಿಗೂ ಬೇಕಾದಷ್ಟು ನೀರನ್ನು ಪೂರೈಸುತ್ತದೆ.

ಇವನು ಕೂಡ ಯಾವ ತರದ ದೊಡ್ಡ ದಂಡಯಾತ್ರೆಯನ್ನೂ ಮಾಡಿ ದಂತೆ ಕಾಣಲಿಲ್ಲ. ಆದರೆ ಗೋವಾ, ಚೌಳ, ದಾಬೂಲ ಪ್ರಾಂತಗಳನ್ನು ಕೈವಶಮಾಡಿಕೊಂಡನು. ಕೋರೋಮಂಡಲ ಭೂಶಿರದವರು ಇವನ ಆಳಿಕೆಯಲ್ಲಿ ವಿಜಯನಗರ ಮಾಂಡಲೀಕರಾದರು. ೨ನೇ ಬುಕ್ಕನು ಇನ್ನೂ ತನ್ನ ತಂದೆಇರುವಾಗಲೇ ರಾಯಚೂರ ಮುದಗಲ್ಲ ಕೋಟೆಗಳನ್ನು

ಕೈವಶ ಮಾಡಿಕೊಳ್ಳಲು ಅಗಣಿತ ಸೈನ್ಯದೊಂದಿಗೆ ಹೊರಟನು. ಆಗ ಮಳೆಗಾಲ ಮತ್ತು ಕೃಷ್ಣಾ ನದಿಯು ತುಂಬಿ ಭರದಿಂದ ಹರಿಯುತ್ತಿತ್ತು. ದಕ್ಷಿಣ ದಂಡೆಗೆ ರಾಯನು ತನ್ನ ಸೈನ್ಯವನ್ನು ಬೀಡುಬಿಟ್ಟು ನಿಂತು ಕೊಂಡನು. ವಯಸ್ಸಿಗೆ ಬಂದ ಇವನ ಮಗನೂ ರಣರಂಗಕ್ಕೆ ಬಂದಿದ್ದನು.

ಈ ಸುದ್ದಿ ಮುಟ್ಟಿದ ಕೂಡಲೇ ಬಹಮನೀ ರಾಜ್ಯದ ಸುಲ್ತಾನನಾದ ಫಿರೋಜಖಾನನೂ ತನ್ನ ಸೈನ್ಯದೊಂದಿಗೆ ಬಂದು ಕೃಷ್ಣಾ ನದೀ ತೀರದಲ್ಲಿ ತಳವೂರಿದನು. ಹಿಂದೂ ಸೈನ್ಯದ ಗಾತ್ರವನ್ನು ಕಂಡು ಇದನ್ನು ಎದುರಿಸುವದು ಸುಲಭವಲ್ಲವೆಂದು ತಿಳಿದು ಮಂತ್ರಿಗಳ ಸಭೆ ಕರೆದನು, ಎಲ್ಲರೂ ಸುಲ್ತಾನನಿಗೆ ಹಿಂತಿರುಗಲು ಸಲಹೆಕೊಟ್ಟರು. ಆದರೆ ಖ್ವಾಜಾ ಸರೋಜಿ ಎಂಬ ಯುಕ್ತಿವಾನ ಸಗದಾರನೊಬ್ಬನು ಸುಲ್ತಾನನೆದುರು ಬಂದು ತನಗೆ ಅಪ್ಪಣೆ ದಯಪಾಲಿಸಿದರೆ ಕೆಲವೇ ಜನರೊಡನೆ ತಾನು ನದೀ ದಾಟಿ ವಿಜಯ ನಗರದ ಠಾಣೆಯೊಳ್ ಗೊಂದಲ ಹಾಕುವೆನೆಂದೂ ವಿಶಿಷ್ಟ ಸಂಜ್ಞೆಯಾದೊಡನೇ ಸೈನ್ಯಸಮೇತ ಮುತ್ತಬೇಕೆಂದೂ ಬೇಡಿಕೊಂಡನು. ಅದಕ್ಕೆ ಸುಲ್ತಾನ ಫಿರೋಜಖಾನನು ಒಪ್ಪಿದನು.

ಸೈನ್ಯ ಸಾಗರದೊಡನೆ ಸ್ತ್ರೀ ಪರಿವಾರವನ್ನೂ ನರ್ತಕಿಯರನ್ನೂ ಗಾಯಕಿಯರನ್ನೂ, ವೇಶ್ಯೆ ಮೊದಲಾದ ದೊಡ್ಡ ಪರಿವಾರವನ್ನೇ ತರುವ ಪರಿಪಾಠ ಆಗಿನ ಕಾಲದಲ್ಲಿತ್ತು, ಅದರಂತೆ ೨ನೇ ಬುಕ್ಕನು ತಂದಿದ್ದನು- ಇಂಥ ಜನಾನಾ ಡೇರೆಯಲ್ಲಿ ಖೋಜ್ಜೆಯ ವೇಷಧರಿಸಿ ಖ್ವಾಜಾ ಹೊಕ್ಕನು. ಅಲ್ಲಿರುವ ಓರ್ವ ಸುಂದರಿಯ ಆಶ್ರಯ ಬೇಡಿದನು, ಅವಳ ಪಾದಗಳನ್ನು ಹಿಡಿದು ಕೊಂಡನು. ತಾನು ಸಕಲಕಲಾ ಪ್ರವೀಣನೆಂದೂ ಗಾಯನ ನರ್ತನ ಮಾಡ ಬಲ್ಲವನೆಂದೂ ತನ್ನನ್ನು ತನ್ನ ಸಂಗಡ ಇರುವ ಇನ್ನಿಬ್ಬರನ್ನೂ ರಾಜ ದರ್ಬಾರದಲ್ಲಿ ಪ್ರವೇಶಿಸಬೇಕೆಂದು ಬೇಡಿಕೊಂಡನು. "ನಮ್ಮ ನರ್ತನ ಕಾರ್ಯಕ್ರಮವಿದೆ. ಅಲ್ಲಿಗೆ ನಿಮಗೆ ಕರೆದೊಯ್ಯುವೆ"ನೆಂದು ನುಡಿದು ಅವರನ್ನು ಕ್ಯಾಂಪಿಗೆ ಕರೆತಂದಳು. ಖ್ವಾಜಾನ ಜೊತೆಗೆ ಇನ್ನೂ ನಾಲ್ಕೈದು ಜನರು ಬಂದಿದ್ದರು. ಅವರು ಶಸ್ತ್ರಸಹಿತ ಹೊರಗೆ ನಿಂತಿದ್ದರು.

ಅಂದು ಕೃಷ್ಣಪಕ್ಷದ ರಾತ್ರಿ ರಾಜಕುಮಾರನೂ ಅವನ ಜೊತೆಗಿರುವ ಸರದಾರ ಜೋಪದಾರರೆಲ್ಲರೂ ಮಧ್ಯ ಕುಡಿದು ಮೈಮರೆತು ಲೋಲಾಡುತ್ತಿರುವಾಗ ಸುಂದರಿಯರ ನರ್ತನವೂ ಅಶ್ಲೀಲತನವೂ ಪ್ರಾರಂಭವಾಯಿತು. ಇದು ಮುಗಿದನಂತರ ಮೂವರು ಖೊಜ್ಜೆಯರ ನರ್ತನ ನಡೆಯಿತು. ಅವರು ಕೈಯಲ್ಲಿ ಕಠಾರಿಯನ್ನು ಹಿಡಿದು ವಿವಿಧ ವಿಶ್ವಾಸದೊಂದಿಗೆ ನರ್ತನಕ್ಕಾರಂಭಿಸಿದರು. ನರ್ತನವು ರಭಸಕ್ಕೆ ಬಂದಾಗ ಖ್ವಾಜಾ ಸರೋಜಿಯು ಒಮ್ಮೆಲೇ ರಾಜಕುಮಾರನ ಮೇಲೇರಿ ಅವನನ್ನು ಇರಿದು ಕೊಂದುಬಿಟ್ಟನು. ಇನ್ನಿರ್ವರು ದೀಪಗಳನ್ನು ಆರಿಸಿದರು. ಹೊರಗಿನವರು ವಿಶಿಷ್ಟ ಸಂಜ್ಞೆಗಳನ್ನು ಮೊಳಗಿಸಿದರು.

ಆಗಲೇ ನದಿಯನ್ನು ದಾಟುತ್ತಿದ್ದ ಸುಲ್ತಾನನ ಸೈನ್ಯವು ೨ನೆಯ ಬುಕ್ಕನ ಸೈನ್ಯದ ಮೇಲೆ ದಾಳಿ ಮಾಡತೊಡಗಿತು. ಕತ್ತಲೆಯಲ್ಲಿ ಮುಸಲ್ಮಾನರು ಮುತ್ತಿದರೆಂಬ ವಾರ್ತೆಯಿಂದ ಭೀತಿಗೊಂಡು ಸರ್ವರೂ ಸರ್ವವನ್ನೂ ಬಿಟ್ಟು ಓಡಿದರು. ಅತಿ ದುಃಖಿತನಾದ ಎರಡನೆಯ ಬುಕ್ಕನು ತನ್ನ ಮಗನ ಮೃತದೇಹವನ್ನು ಹೊತ್ತುಕೊಂಡು ಬಂದು ವಿಜಯನಗರವನ್ನು ಸೇರಿದನು. ಈ ದಾಳಿಯಿಂದ ವಿಜಯನಗರದವರು ದುಡ್ಡಿನಿಂದ ಅಪಾರ ಹಾನಿಗೊಳಗಾದದಲ್ಲದೇ ಅಗಣಿತ ಸೈನ್ಯವು ನಿರ್ನಾಮವಾಯಿತು. ಅಸಂಖ್ಯರನ್ನು ಸೆರೆಯಾಳೆಂದು ಕಲಬುರ್ಗಿಗೊಯ್ದರು. ಅದರಲ್ಲಿ ಬ್ರಾಹ್ಮಣರು ಸಹ ಇದ್ದರೆಂದು ವರದಿಯಾಗಿದೆ. ಈ ಸೆರೆಯಾಳುಗಳನ್ನು ಬಿಡುಗಡೆ ಮಾಡಲು ೧೦ ಲಕ್ಷ ಮೋಹರುಗಳನ್ನು (೩ ಕೋಟಿ ರೂಪಾಯಿ) ೨ನೇ ಹರಿಹರನು ಕೊಟ್ಟು ಒಡಂಬಡಿಕೆ ಮಾಡಿಕೊಂಡನು. ಸೆರೆಯಾಳುಗಳು ಮುಕ್ತರಾದರು. ಈ ವಡಂಬಡಿಕೆಯನ್ವಯ ಯುದ್ಧದ ಪೂರ್ವದಲ್ಲಿಯ ಪರಸ್ಪರರ ಪ್ರದೇಶಗಳು ಅವರವರಿಗೇ ಬಿಡಬೇಕೆಂದು ನಿರ್ಣಯವಾಯಿತು. ಪ್ರಜೆಗಳನ್ನು ಈರ್ವರೂ ಹಿಂಸಿಸಬಾರದೆಂಬುದು ಎರಡನೆಯ ಕರಾರು ಆಗಿತ್ತು. ಇದು ೧೩೯೯ನೇ ಇಸ್ವಿ ಸಪ್ಟಂಬರ ೩ನೇ ತಾರೀಖಿನ ದಿವಸ ಆಯಿತು. ಮುಂದೆ ಅಕ್ಟೋಬರ ೧೫ನೇ ತಾರೀಖಿನ ದಿವಸ ೨ನೇ ಹರಿಹರನು ತೀರಿದನು.

೨ನೇ ಬುಕ್ಕರಾಯನು ಪಟ್ಟವೇರಿದನು. ಆದರೆ ಇವನ ಕಾಲದಲ್ಲಿ ಯುದ್ಧ ಮೊದಲಾದವುಗಳೇನೂ ಆಗಲಿಲ್ಲ. ಗುಜರಾಥ, ಮಾಳವಾ, ಖಾನ ದೇಶದ ಅರಸರ ಬೆಂಬಲವಿದ್ದುದರ ಧೈರ್ಯದ ಮೇಲೆ ಅವಲಂಬಿಸಿ ಇವನು ಪ್ರತಿವರುಷ ಬಹಮನೀ ಸುಲ್ತಾನರಿಗೆ ಕೊಡತಕ್ಕ ಕಪ್ಪ-ಕಾಣಿಕೆಗಳನ್ನು ನಿಲ್ಲಿಸಿಬಿಟ್ಟನು. ನಾಲ್ಕು ವರುಷಗಳವರೆಗೆ ಕೊಡದೇ ಹೋದರೂ ಫಿರೋಜ ಖಾನನು ಯಾವ ಮಾತನ್ನೂ ಆಡದೇ ಸುಮ್ಮನಿದ್ದು, ಪ್ರಸಂಗದಲ್ಲಿ ಸೇಡು ತೀರಿಸಿಕೊಳ್ಳಬೇಕೆಂದು ನೆನೆಯುತ್ತಿದ್ದನು.

೨ನೇ ಬುಕ್ಕನ ತರುವಾಯ ಅವನ ತಮ್ಮನಾದ ೧ನೇ ದೇವರಾಯನು ಪಟ್ಟವೇರಿದನು. ಹಾಸನದಲ್ಲಿ ಸಿಕ್ಕ ಶಿಲಾಲೇಖನದಿಂದ ೧ ನೆಯ ದೇವರಾಯನ ಪಟ್ಟಾಭಿಷೇಕವು ೧೪೦೬ನೇ ನವಂಬರ ೬ನೇ ತಾರೀಖಿನ ದಿವಸ ನೆರವೇರಿತೆಂದು ಗೊತ್ತಾಗುವದು. ಇದೇ ಇಸ್ವಿ ಎಪ್ರಿಲ್‌ದಲ್ಲಿ ೨ನೇ ಬುಕ್ಕನು ತೀರಿರಬಹುದು.

——————

## ೩. ೧ನೇ ದೇವರಾಯ

(೧೩೦೬ ರಿಂದ ೧೪೧೯)

೧ನೇ ದೇವರಾಯನು ಪಟ್ಟಕ್ಕೇರಿದಾಕ್ಷಣವೇ ಒಂದು ಅವ್ಯವಹಾರಿಕವಾದ ಕಾರ್ಯದಲ್ಲಿ ತೊಡಗಿಬಿಟ್ಟನು. ಮುದಗಲ್ಲ ಪಟ್ಟಣದಲ್ಲಿ ಓರ್ವ ಒಕ್ಕಲಿಗನಿದ್ದನು. ಅವನ ಮಗಳು ಅತ್ಯಂತ ಸುಂದರಿಯೆಂದು ಪ್ರಸಿದ್ಧಿ ಪಡೆದ

ದ್ದಳು. ಓರ್ವ ವೃದ್ಧ ಬ್ರಾಹ್ಮಣನಿಂದ ಆ ಒಕ್ಕಲಿಗನು ತನ್ನ ಮಗಳಿಗೆ ಸಕಲ ವಿದ್ಯಾಭ್ಯಾಸವನ್ನು ಮಾಡಿಸಿದ್ದನು. ಈ ಅಲೌಕಿಕ ಸುಂದರಿಯು ಗಂಧರ್ವಳೋ ಕಿನ್ನರಿಯೋ ಅಥವಾ ಸಾಕ್ಷಾತ್ ರತಿದೇವಿಯು ಅವತಾರಳೋ ಎಂಬಂತೆ ತಾರುಣ್ಯದಲೆಗಳಲ್ಲಿ ತೇಲುತ್ತಾ ಜನರ ಕಣ್ಮನಗಳಿಗೆ ಅಲ್ಹಾದಕರ ಳಾಗಿದ್ದಳು ಕೇವಲ ಸೌಂದರ್ಯದಲ್ಲಿಯು ಷ್ಟೇ ಅಲ್ಲ, ಸಕಲ ವಿದ್ಯಾ ಮೊದಲಾದವುಗಳಲ್ಲಿ ಪ್ರವೀಣಳಾಗಿದ್ದಳು. ಇಂಥವಳು ಮಹಾರಾಜನ ಪತ್ನಿ ಆಗಲು ಯೋಗ್ಯಳೆಂದು ವೃದ್ಧ ಬ್ರಾಹ್ಮಣನು ಯೋಚಿಸಿದನು. ಇವಳನ್ನು ವಿಜಯ ನಗರದ ರಾಯನಿಗೆ ಕೊಡಿಸಿಬಿಟ್ಟರೆ ತನ್ನ ಶಿಷ್ಯಳಿಗೆ ಯೋಗ್ಯ ಸ್ಥಾನ ದೊರೆ ತಂತಾಗುವದು ಮತ್ತು ಒಕ್ಕಲಿಗ ದಂಪತಿಗಳ ಬಡತನವು ಹಿಂಗಿದಂತಾಗು ವದು ಎಂಬು ನೆನೆದು, ವಿಜಯನಗರಕ್ಕೆ ಬಂದನು. ೧ನೆಯ ದೇವರಾಯ ನನ್ನು ಏಕಾಂತದಲ್ಲಿ ಕಂಡು ಕುಮಾರಿಯು ರೂಪ-ಲಾವಣ್ಯ ವಿದ್ಯಾ, ಮೊದಲಾದವುಗಳನ್ನು ಅಖಂಡವಾಗಿ ಹೊಗಳಿದನು. ಯೌವನ, ಧನ-ಸಂಪತ್ತು, ಪ್ರಭುತ್ವಗಳುಳ್ಳ ರಾಜನ ಬಾಯಿಯಲ್ಲಿ ನೀರೊಡೆಯಿತು. ಬ್ರಾಹ್ಮಣನಿಗೆ ಅಖಂಡ ಮಾನ-ಮರ್ಯಾದೆಗಳನ್ನು ದಕ್ಷಿಣಾದಿಗಳಿಂದ ಅರ್ಪಿಸಿ ವಂದಿಸಿದರು. ಬಾಲೆಯ ತಂದೆ-ತಾಯಿಯರಿಗೂ ಆ ಹುಡಗೆಗೂ ಅಮೂಲ್ಯವಾದ ವಸ್ತ್ರ ಆಭರಣ ಮೊದಲಾದವುಗಳನ್ನೂ ತೆಗೆದುಕೊಂಡು ಹೋಗಲು ಕೊಟ್ಟನು. ಹೇಗಾದರೂ ಮಾಡಿ ಈ ಲಗ್ನ ಮಾಡಿಸಿದರೆ ಬ್ರಾಹ್ಮಣನಿಗೆ ತನ್ನ ದರಬಾರಿನಲ್ಲಿ ದೊಡ್ಡ ಸ್ಥಾನವನ್ನು ಕಲ್ಪಿಸಿಕೊಡುವದಾಗಿ ವಚನವಿತ್ತು ರಾಜನು ಕಳಿಸಿದನು.

ಬ್ರಾಹ್ಮಣನು ಮುದಗಲ್ಲಿಗೆ ಬಂದನು. ಒಕ್ಕಲಿಗ ದಂಪತಿಗಳಿಗೆ ನಡೆದ ವಿಷಯುಗಳನ್ನೆಲ್ಲ ಹೇಳಿದನು. ಅವರು ಆನಂದದ ಶಿಖರವನ್ನೇರಿದರು. ತಮ್ಮ ಜೀವನದಲ್ಲಿ ಎಂದೂ ಕಾಣದ ಭಾಗ್ಯವು ಇಂದು ದೊರೆಯಿತೆಂದು ಉಬ್ಬಿ ಹೋದರು. ತಮ್ಮ ಮಗಳನ್ನು ಕರದು ರಾಜನ ವಿನಂತಿಯನ್ನು ನಿವೇದಿಸಿ ನೀನು ಮಹಾರಾಣಿಯಾಗುವಿ ತೆಗೆದುಕೊ ಈ ಆಭರಣ, ಈ ವಸ್ತ್ರ ಈಗಲೇ ಇಷ್ಟು ಕಳಿಸಿದ್ದಾರೆ ಮುಂದೆ ನಿನ್ನನ್ನು ಹಿಡಿದವರಾರು ವಿಜಯನಗ

ರದ ರಾಣಿಯಾಗಿ ಇಡೀ ದಕ್ಷಿಣ ಹಿಂದುಸ್ಥಾನವನ್ನಾಳುವಿ'' ಎಂದರು. ನೆಹಾ ಲಳು(ಹುಡುಗಿಯು ಹೆಸರು ಪೆರ್ತಾಳೆಂದಿದ್ದಿತೆಂದು ಇನ್ನೊಬ್ಬ ಇತಿಹಾಸಕಾ ದನು ಬರೆಯುತ್ತಾನೆ) ಕಣ್ಣು ತುಂಬಾ ನೀರನ್ನು ತಂದು ‹‹ನಾನು ರಾಣಿ ಯಾಗಿ ಜನಾನದಲ್ಲಿ ಸೇರಿದೆನೆಂದರೆ ಯಾವ ಆಪ್ತೇಷ್ಟರ ಮಿತ್ರರ ಆದೇಕೆ ತಂದೆ ತಾಯಿಗಳ ದರ್ಶನ ಕೂಡ ಲಭ್ಯವಾಗದು. ಸಿರಿವಂತಳಾಗಿ ಸೆರೆಯ ಲ್ಲಿರುವದಕ್ಕಿಂತ ಬಡವಳಾಗಿ ಸ್ವತಂತ್ರಳಾಗಿರುವದು ನನಗೆಬೇಕು. ಅಪ್ಪಾ, ಅವ್ವಾ ದಯವಾಡಿ ನನ್ನನ್ನು ರಾಯನಿಗೆ ಕೊಟ್ಟು ವಿವಾಹ ಮಾಡಬೇಡಿರಿ'' ಎಂದು ಗೋಳಿಟ್ಟಳು. ತಂದೆತಾಯಿಗಳ ಹೃದಯವು ಕರಗಿತು ಈವಿವಾಹವು ಸಾಧ್ಯವಿಲ್ಲವೆಂದು ವಿಜಯನಗರ ರಾಜನಿಗೆ ತಿಳಿಸಲು ಬ್ರಾಹ್ಮಣನಿಗೆ ಹೇಳಿ ಅವನು ಕಳಿಸಿದ ಎಲ್ಲ ಕಾಣಿಕೆಗಳನ್ನು ತಿರುಗಿಕೊಟ್ಟು ಕಳಿಸಿದನು.

ವೃದ್ಧ ಬ್ರಾಹ್ಮಣನು ನಿರಾಶನಾಗಿ ವಿಜಯನಗರಕ್ಕೆ ಬಂದು ರಾಜನಿಗೆ ಅವೆಲ್ಲ ವಸ್ತ್ರ, ಭೂಷಣಗಳನ್ನು ಕೊಟ್ಟು ನಡೆದ ವೃತ್ತಾಂತವನ್ನು ನಿವೇದಿಸಿ ಹೊರಟುಹೋದನು. ರಾಯನಿಗೆ ಅಧಿಕಾರದ ಮದದೊಂದಿಗೆ ಯೌವನವೂ ಧನಸಂಪತ್ತೂ ಕೂಡಿತ್ತು. ಮೇಲೆ ಕಾಮನ ಪಂಚಬಾಣಗಳೂ ಇವನ ಹೃದ ಯವನ್ನು ಘಾಸಿ ಮಾಡಿದ್ದವು. ಏನಾದರೂ ಆಗಲಿ ಮುದಗಲ್ಲ ಕೋಟೆಯ ಲ್ಲಿಯ ಆ ಒಕ್ಕಲಿಗನ ಮಗಳನ್ನು ಹೊತ್ತು ತರತಕ್ಕದ್ದು ಇದಕ್ಕಾಗಿ ಬಲ ಪ್ರಯೋಗವೇ ಯೋಗ್ಯವಾದದ್ದು ಎಂದು ನಿರ್ಣಯಿಸಿದನು. ತನ್ನ ರಾಜ್ಯ ವನ್ನು ನೋಡಿಬರಲು ಹೊರಟಿರುವೆನೆಂದು ಸುದ್ದಿ ಹಬ್ಬಿಸಿ ೪ ಸಾವಿರ ಕುದುರೆ ಶೂರರಿಂದೊಡಗೂಡಿ ತುಂಗಭದ್ರಾ ನದಿಯ ದಂಡೆಯಲ್ಲಿ ಠಾಣೆ ಹಾಕಿದನು. ಎಲ್ಲ ಹಿತೈಷಿಗಳೂ ಮಿತ್ರರೂ ೧ನೇ ದೇವರಾಯನಿಗೆ ಈ ತರದ ಕಾಲಕೆದರಿ ಯುದ್ಧ ಹೂಡುವದು ಬೇಡವೆಂದು ಸಲಹೆಯನ್ನು ನೀಡಿದರು. ಕಾಮಮೋಹಿತನಿಗೆ ಯಾವದೂ ರುಚಿಸಲಿಲ್ಲ.

೧ನೇ ದೇವರಾಯನು ಮುದಗಲ್ಲ ಕೋಟೆಯಸಮೀಪದ ಹಳ್ಳಿಯನ್ನು ಮುತ್ತಿಅಲ್ಲಿರುವ ಒಕ್ಕಲಿಗದಂಪತಿಗಳನ್ನೂ ಅವರ ಮಗಳಾದ ನೆಹಾಲಳನ್ನೂ

ಜೀವಂತ ಹಿಡಿದು ತರಬೇಕೆಂದು ಆಜ್ಞೆ ವಿಧಿಸಿದನು. ಕುದುರೆ ಸವಾರ ಸೈನ್ಯವು ಹಗಲು ರಾತ್ರಿ ೪೧ ಮೈಲು ನಡೆದು ಬಂದರು. ರಾಯನುಸೈನ್ಯ ಸಮೇತ ಬಂದನೆಂಬ ಅಂಜಿಕೆಯಿಂದ ಪ್ರಜೆಗಳೆಲ್ಲರೂ ಪಲಾಯನ ಮಾಡಿದರು. ಅದರಲ್ಲಿ ಆ ಒಕ್ಕಲಿಗ ದಂಪತಿಗಳು ಸಹ ಊರು ಬಿಟ್ಟರು. ಸೈನ್ಯವು ತಿರುಗಿ ಬಂದಿತು. ಆದರೆ ತಿರುಗುವಾಗ ಸಾಕಷ್ಟು ಲೂಟಿ ಕೊಳ್ಳೆ ಹೊಡೆದುಕೊಂಡೇ ಬಂದಿತು.

ಈ ವಾರ್ತೆ ಕೇಳಿ ಬಹಮನೀ ಸುಲ್ತಾನ ಫಿರೋಜಖಾನನು ಸಿಟ್ಟಿನಿಂದ ಭುಸುಗುಟ್ಟುತ್ತ ಪ್ರಚಂಡ ಬಲಸಮೇತನಾಗಿ ಬಂದು ವಿಜಯನಗರವನ್ನು ನಾಲ್ಕು ತಿಂಗಳುಗಳ ವರೆಗೆ ಮುತ್ತಿ ಹಿಂದುಗಳನ್ನು ಸೋಲಿಸಿದನು. ಇಷ್ಟೇ ಅಲ್ಲ ವಿಜಯನಗರ ಸಾಮ್ರಾಜ್ಯವು ಅಳಿದು ಹೋಗುವದೆನ್ನುವಷ್ಟರಮಟ್ಟಿಗೆ ಸ್ಥಿತಿಯುಂಟಾಯಿತು. ೧ನೇ ದೇವರಾಯನು ಯಾವ ಕರಾರೂ ಇರಲೊಲ್ಲ ಬೇಕೆಂದು ಒಪ್ಪಂದಕ್ಕೆ ಸಿದ್ಧನಾದನು. ಸ್ವತಃ ತನ್ನ ಮಗಳನ್ನು ಫಿರೋಜ ಖಾನನಿಗೆ ಕೊಟ್ಟು ಲಗ್ನ ಮಾಡುವದಲ್ಲದೇ ಇದ್ದು ಬಿದ್ದ ಸಕಲ ಐಶ್ವರ್ಯವನ್ನೂ ಅಳಿಯನಿಗೆ ಕೊಟ್ಟು ಸಮಾಧಾನ ಪಡಿಸಬೇಕಾಯಿತು.

ಮುಸಲ್ಮಾನ ಬೀಗರು ವಿಜಯನಗರದಿಂದ ಆರುಮೈಲು ದೂರದಲ್ಲಿ ಬೀಡುಬಿಟ್ಟಿದ್ದರು. ಅಳಿಯನಾದ ಫಿರೋಜಖಾನನ್ನು ತನ್ನ ಮಗಳೊಂದಿಗೆ ಅರಮನೆಗೆ ಕರೆದೊಯ್ದು ಆದರಿಸಬೇಕೆಂಬ ಇಚ್ಛೆಯಿಂದ ೧ನೆಯ ದೇವರಾಯನು ಖಾನನಿಗೆ ಔತಣವಿತ್ತನು. ಖಾನನು ಅದನ್ನು ಸ್ವೀಕರಿಸಿ ವಿಜಯನಗರದ ಮಾವನ ಮನೆಗೆ ತನ್ನ ನೂತನ ಪತ್ನಿಯೊಂದಿಗೆ ಅದ್ಭುತವಾದ ಮೆರವಣಿಗೆಯಲ್ಲಿ ಹೊರಟನು. ಈ ಎಂಟು ಮೈಲುದ್ದ ಮೆರವಣಿಗೆ ಅಸದೃಶ್ಯವಾಗಿತ್ತು. ಲಕ್ಷಗಟ್ಟಲೆ ಮೊಹರುಗಳು ದೇವರಾಯನಿಂದ ವೆಚ್ಚವಾದವು. ನಾಲ್ಕು ದಿವಸ ಖಾನನು ತನ್ನ ಪತ್ನಿ ಸಹಿತ ವಿಜಯನಗರದ ಅರಮನೆಯಲ್ಲಿ ದೇವತೆಗಳಿಗೂ ಲಭ್ಯವಾಗದಂಥ ವೈಭವಾದಿ ಸತ್ಕಾರಗಳಿಂದ ಆರೈಕೆಹೊಂದುತ್ತ ಇದ್ದನು. ಐದನೇದಿನ ತನ್ನ ಠಾಣೆಗೆ ದಯ

ಮಾಡಿದನು. ದೇವರಾಯನು ತನ್ನ ಅಳಿಯನನ್ನೂ ಮಗಳನ್ನೂ ನಾಲ್ಕು ಮೈಲುಗಳ ವರೆಗೆ ಕಳಿಸಲು ಹೋಗಿ ಹಿಂತಿರುಗಿದನು.

ಫಿರೋಜಖಾನನು ಅತ್ಯಂತ ಕ್ರೋಧಾವಿಷ್ಟನಾದನು. "ನೋಡಿದೆಯಾ ಮೀರ ಫಜುಲ್ಲಅಲ್ಲಾ, ಈ ಹಿಂದೂ ಕಾಫರನ ಸೊಕ್ಕನ್ನು ಇಲ್ಲಿಗೇ ಅವನು ತಿರುಗಿಬಿಟ್ಟನು. ನನ್ನ ಠಾಣೆಯವರೆಗೆ ಕಳಿಸಲು ಬಂದಿದ್ದರೆ ಇವನಿಗೇನಾಗುತ್ತಿತ್ತು ಇರಲಿ ಈ ಅಪಮಾನದ ಸೇಡನ್ನು ತೀರಿಸಿಕೊಳ್ಳುವೆನು" ಎಂದು ತನ್ನ ಜಾತಿಗನುಗುಣವಾದ ಸ್ವಭಾವದಲ್ಲಿಯೇ ನುಡಿದು ಮುಂದೆ ಸಾಗಿದನು.

ಫಿರೋಜಖಾನನು ತನ್ನ ರಾಜಧಾನಿಗೆ ಬಂದಕೂಡಲೇ ಮೊಟ್ಟ ಮೊದಲು ಮಾಡಿದ ಕೆಲಸವೆಂದರೆ ಆ ದೇವಸುಂದರಿಯಾದ ನೆಹಾಲಳನ್ನು ಅವಳ ಮಾತಾಪಿತೃಗಳನ್ನು ಕರೆಸಿಕೊಂಡನು. ನೋಡಿದನು. ಈ ಸೌಂದರ್ಯದ ರಾಶಿಯನ್ನು ಜನರು ಮಾಡುವ ಸ್ತೋತ್ರಗಳಿಂದ ಸಹಸ್ರ ಪಟ್ಟು ನೆಹಾಲಳು ಸುಂದರಿಯಿರುವಳೆಂದು ಮನಗಂಡನು. ಅವಳನ್ನು ತನ್ನ ಹಿರಿಯ ಮಗನಾದ ಹಸನಖಾನನಿಗೆ ತೆಗೆದುಕೊಂಡನು. ನೆಹಾಲ ಮತ್ತು ಹಸನಖಾನರ ವಿವಾಹವು ಅತ್ಯಂತ ವೈಭವದಿಂದಲೂ, ವಿಲಾಸಗಳಿಂದಲೂ ನೆರವೇರಿತು. ಅಂತೂ ನೆಹಾಲಳು ಹಿಂದೂ ಜನಾನಾವನ್ನು ತಿರಸ್ಕರಿಸಿದಂಥವಳು, ಸೆರೆಮನೆಗಿಂತಲೂ ಗೌಪ್ಯವಾದ ಮುಸ್ಲಿಮ ಜನಾನಾಕ್ಕೆ ಒತ್ತಾಯಪೂರ್ವಕವಾಗಿ ಸೇರಿಸಲ್ಪಟ್ಟಳು.

ಆದರೆ ಈ ಹಸನಖಾನನು ಮಹಾ ದುರ್ಬಲನೂ ಹೇಡಿಯೂ ಇದ್ದನು ವಿಲಾಸಪ್ರಿಯನಾಗಿ ಸ್ತ್ರೀ ಸಹವಾಸದಲ್ಲಿಯೇ ಇರುತ್ತಿದ್ದನು. ಇವನು ಪಟ್ಟಕ್ಕೆ ಬಾಧ್ಯಸ್ಥನಾಗಿದ್ದರೂ ಖಾನನು ಇವನನ್ನು ಲೀಲಾಮಾತ್ರದಿಂದ ಒತ್ತಿ ತಾನು ಪಟ್ಟವೇರಿದನು. ಹಸನಖಾನನು ತನ್ನ ನೆಹಾಲಳೊಂದಿಗೆ ಫಿರೋಜಾಬಾದದಲ್ಲಿ ಗೌಪ್ಯವಾಗಿ ವಾಸಿಸತೊಡಗಿದನು. ಕೊನೆಗೆ ಪಟ್ಟವನ್ನಾಕ್ರಮಿಸಿದ ೧ನೇ ಅಹಮ್ಮದಶಹನು (ಇವನ ಕಕ್ಕನು) ಇವನ ಮೇಲೆ ಕರುಣೆತೋರಿ ಫಿರೋಜಾಬಾದದಲ್ಲಿ ಹಸನಖಾನನಿಗೆ ಇರಲು ಒಂದು ಅರಮನೆಯನ್ನು ಕೊಟ್ಟನು. ಬಹು ದೊಡ್ಡದಾದ ಜಹಗೀರವನ್ನು ಇವನ

ಹೆಸರಿನಲ್ಲಿ ಹಾಕಿಕೊಟ್ಟನು. ಮತ್ತು ಅರಮನೆಯಿಂದ ಎಂಟು ಮೈಲು ಸುತ್ತಳತೆಯಲ್ಲಿ ಸರಕಾರದ ಪರವಾನಿಗೆ ಇಲ್ಲದೇ ಸ್ವತಂತ್ರವಾಗಿ ತಿರುಗಾಡಲು ಬೇಟೆಯಾಡಿ ಬರಲು ಅಪ್ಪಣೆಯನ್ನು ದಯಪಾಲಿಸಿದನು. ರಾಜ್ಯದಾಡಳಿತಕ್ಕಿಂತ ಇದೇ ಹೆಚ್ಚು ಸುಖದಾಯಕವೆಂದು ತೃಪ್ತನಾಗಿ ಐಷಾರಾಮದಲ್ಲಿ ಲೋಲಾಡುತ್ತ ಕಾಲಕಳೆದನು. ಇವನ ಕಕ್ಕನು ತೀರಿದ ಬಳಿಕ ಹಸನಖಾನನ ಕಣ್ಣುಗಳನ್ನು ಕಿತ್ತಿ ಅದೇ ಫಿರೋಜಾಬಾದದ ಅರಮನೆಯಲ್ಲಿಯೇ ಇವನನ್ನು ಇಡಲಾಯಿತು, ಇದು ೧೪೩೪ರಲ್ಲಿ ಘಟಿಸಿತು. ಹಸನಖಾನನು ತನ್ನ ಕೊನೆಯ ದಿನಗಳನ್ನು ಬಹಳ ದುಃಖದಲ್ಲಿ ಕಳೆದನು.

ಇ. ಸ, ೧೪೧೯ರಲ್ಲಿ ೧ನೇ ದೇವರಾಯನು ತೀರಿದನು. ಅವನ ಮಗನಾದ ವಿಜಯರಾಯನು ಪಟ್ಟವನ್ನೇರಿದನು. ವಿಜಯರಾಯನ ಕಾಲದಲ್ಲಿ ಯಾವ ಘಟನೆಗಳೂ ನಡೆಯಲಿಲ್ಲ. ಮುಂದೆ ಕೆಲವರುಷಗಳಲ್ಲಿ ವಿಜಯರಾಯನು ತೀರಿದ್ದರಿಂದ ಅವನ ಹಿರಿಯ ಮಗನಾದ ೨ನೇ ದೇವರಾಯನು ೧೪೧೯ರಲ್ಲಿ ಪಟ್ಟವೇರಿದನು. ಇವನು ೨೫ ವರ್ಷ ರಾಜ್ಯವಾಳಿದನೆಂದು ಉಲ್ಲೇಖವಿದೆ. ಇವನ ಕಾಲದಲ್ಲಿ ಸತತವಾಗಿ ಮುಸಲ್ಮಾನರ ದಾಳಿಯು ವಿಜಯನಗರದ ಮೇಲೆ ಆಯಿತು. ಇವನ ಆಯುಷ್ಯವೆಲ್ಲವೂ ರಣರಂಗದಲ್ಲಿಯೇ ಹೋಯಿತು.

ಇ. ಸ. ೧೪೧೭ರಲ್ಲಿ ಕಲಬುರ್ಗಿಯ ಫಿರೋಜಖಾನನು ಹಿಂದೂ ರಾಜ್ಯವಾದ ತೆಲಂಗಾಣಕ್ಕೆ ದಂಡಯಾತ್ರೆಯನ್ನು ಕೈಕೊಂಡನು. ಆ ರಾಜ್ಯದ ಭದ್ರವಾದ ಪಂಗಾಲ ಕೋಟೆಯನ್ನು ಮುತ್ತಿಗೆ ಹಾಕಿದನು. ಇದು ಆದವಾನಿಯಿಂದ ಈಶಾನ್ಯಕ್ಕೆ ೭೦ ಮೈಲು ದೂರದಲ್ಲಿದೆ. ಎರಡು ವರುಷ ಕಾಲ ಸತತವಾಗಿ ಪಂಗಾಲ ಕೋಟೆಯನ್ನು ಮುತ್ತಿದರೂ ಹಿಂದುಗಳು ಹಣಿಯಲಿಲ್ಲ. ಫಿರೋಜಖಾನನ ಸೈನ್ಯದಲ್ಲಿ ಕುದುರೆಗಳಿಗೂ ಸೈನಿಕರಿಗೂ ಪ್ಲೇಗು ಮತ್ತು ಗಂಟು ಬೇನೆಗಳು ತಗಲಿ ಅವನ ಸೈನ್ಯವು ಶೀಘ್ರದಲ್ಲಿ ವಿನಾಶವಾಗತೊಡಗಿತು. ಆದ್ದರಿಂದ ನಿರ್ವಾಹವಿಲ್ಲದೆ ತಳಕಿತ್ತು ಕಲಬುರ್ಗಿಗೆ ಬಂದನು.

ಇದೇ ಸಮಯ ಸಾಧಿಸಿ ೧ನೇ ದೇವರಾಯನು ಸೈನ್ಯಸಂಗ್ರಹಿಸಿದನು ತನ್ನ ಸುತ್ತುಮುತ್ತಲಿನ ಸರದಾರರ ಮತ್ತು ತೆಲಂಗಣಾದ ರಾಜನ ಸೈನ್ಯದ ಸಹಾಯವೂ ಅಪಾರವಾಗಿ ಸಿಕ್ಕಿತು. ಅದನ್ನೆಲ್ಲ ಒಟ್ಟಾಗಿ ಸೇರಿಸಿ ಫಿರೋಜ ಖಾನನ ಮೇಲೇರಿ ಹೋದನು. ಇದು ಇ. ಸ. ೧೪೧೯ರಲ್ಲಿಯೇ ನಡೆಯಿತು. ಫಿರೋಜಖಾನನು ಅಪಾರವಾದ ಹಾನಿಗೊಳಗಾಗಿ ಓಡಿಹೋದನು. ೧ನೇ ದೇವರಾಯನು ೧೪೧೯ರಲ್ಲಿ ತೀರಿದನು. ಇವನ ತರುವಾಯ ಇವನ ಮಗನಾದ ಚಿಕ್ಕರಾಯ (ಚಿನ್ನ ಅಥವಾ ಪಿನ್ನ)ನು ಪಟ್ಟವೇರಿದನು, ಆದರೆ ಕೆಲವೇ ದಿವಸಗಳಲ್ಲಿ ಅಂದರೆ ೧೪೧೯ ರಲ್ಲಿ ಎಪ್ರಿಲ್ ತಿಂಗಳಲ್ಲಿ ಚಿಕ್ಕರಾಯನ ತಂಗಿಯ ಮಗನು ಸಂಚುಹೂಡಿ ಕಠಾರಿಯ ತುದಿಗೆ ವಿಷವನ್ನು ಲೇಪಿಸಿ ಸಮಯ ಸಾಧಿಸಿ ರಾಯನನ್ನು ಇರಿದನು. ಆದರೆ ಚಿನ್ನರಾಯನು ತಕ್ಷಣ ಸಾಯಲಿಲ್ಲ. ಗಾಯವೂ ಮಾಯಲಿಲ್ಲ. ವಿಷವು ದೇಹವನ್ನು ಕ್ರಮೇಣ ಆಕ್ರಮಿಸಿತು. ಆರು ತಿಂಗಳ ತರುವಾಯ ಸತ್ತನು.

---

# ೪. ೨ನೇ ದೇವರಾಯ

(೧೪೮೯ ರಿಂದ ೧೪೪೪)

ಇ. ಸ. ೧೪೧೯ರಲ್ಲಿ ಫಿರೋಜಶಹನು ಒರಂಗಲ್ಲ ಪಂಗಾಲ ಮತ್ತು ವಿಜಯನಗರಗಳ ಸಂಯುಕ್ತ ಸೇನೆಯಿಂದ ಜರ್ಜರಿತನಾಗಿ ಹಿಂದೆ ಸರಿದನೆಂದು ಹಿಂದಿನ ಪ್ರಕರಣದಲ್ಲಿ ಹೇಳಿದೆ ಆದರೆ ಕೆಲವೇ ದಿನಗಳಲ್ಲಿ ಮತ್ತೆ ಸೈನ್ಯವನ್ನು ಸಂಗ್ರಹಿಸಿದನು. ಮೀರಜಾಫರ ಅಲ್ಲಾನನ್ನು ಮುಖ್ಯ ಸೇನಾಪತಿಯನ್ನಾಗಿ ಮಾಡಿ ಅಪಾರ ಸೈನ್ಯದೊಂದಿಗೆ ವಿಜಯನಗರದ ಮೇಲೆ ಏರಿಹೋಗಲು ಫಿರೋಜಖಾನನು ಆದೇಶವಿತ್ತನು. ಹಿಂದು ಮುಸ್ಲಿಮರಲ್ಲಿ ಭೀಕರ ಸಂಗ್ರಾಮವೆಸಗಿತು. ಹಿಂದುಗಳು ಸೋಲುವಸ್ಥಿತಿಯುಂಟಾಯಿತು ಆದರೆ ಹಿಂದು ಮಂತ್ರಿಯು ಮೀರಜಾಫರನ ಅಂಗರಕ್ಷಕನಿಗೆ ಹೇರಳವಾದ ಧನರಾಶಿಯನ್ನು ಕೊಟ್ಟು ಒಲಿಸಿಕೊಂಡಿದ್ದನು. ಈ ಸ್ವಾಮಿಘಾತುಕಿಯು ಸಮಯಸಾಧಿಸಿ ಹಿಂದಿನಿಂದ ಮೀರಜಾಫರನ ತಲೆಗೆ ಬಲವಾದ ಪೆಟ್ಟನ್ನು ಕೊಟ್ಟನು. ಮೀರಜಾಫರನು ಬಿದ್ದನು. ಮುಸ್ಲಿಮ ಸೈನ್ಯವು ಚಲ್ಲಾಪಿಲ್ಲಿಯಾಯಿತು. ಹಿಂದುಗಳು ಅವರನ್ನು ಬೆನ್ನಟ್ಟಿದರು. ಬಹಮನೀ ರಾಜ್ಯದಲ್ಲಿ ಹೊಕ್ಕರು. ಅಖಂಡವಾದ ಕೊಲೆ ಸುಲಿಗೆಗಳನ್ನು ನಡೆಸಿದರು. ರಣರಂಗದಲ್ಲಿಯಂತೂ ಒಬ್ಬ ಮುಸ್ಲಿಮ ಸೈನಿಕರನ್ನೂ ಬಿಡದಂತೆ ಸಂಹರಿಸಿ ಹೆಣದ ರಾಶಿಯನ್ನೇ ಒಟ್ಟಿದರು. ಬಹಮನೀ ರಾಜ್ಯದಲ್ಲಿಯ ಮಸೀದೆಗಳನ್ನು ನೆಲಸಮ ಮಾಡಿದರು. ಕೈಗೆ ಸಿಕ್ಕ ಪ್ರಜೆಗಳನ್ನು ಸಂಹರಿಸಿದರು. ಅಪಾರ ಹಣ ಸುಲಿಗೆ ಮೊದಲಾದವುಗಳನ್ನು ಅಖಂಡವಾಗಿ ನಡೆಸಿದರು.

ಫಿರೋಜಖಾನನು ಗುಜರಾತದ ಸುಲ್ತಾನನಿಂದ ಸಹಾಯ ಯಾಚಿಸಿದನು. ಆದರೆ ಅವನು ಪಟ್ಟಕ್ಕೆ ಬಂದು ಕೆಲವೇ ದಿನಗಳಾದದ್ದರಿಂದ ಅವನಿಂದ ಯಾವ ಸಹಾಯವೂ ದೊರೆಯಲಿಲ್ಲ. ಕೊನೆಗೆ ಫಿರೋಜಖಾನನ ತಮ್ಮನಾದ ಅಹಮ್ಮದಖಾನನೇ ಸಾಹಸದಿಂದ ಹೇಗೋ ಹಿಂದು ಸೈನಿಕ

ರನ್ನು ಬಹಮನೀ ರಾಜ್ಯದಿಂದ ಹೊರಗಟ್ಟಿದನು. ಇದರಿಂದ ಫಿರೋಜ ಖಾನನ ಮನಸ್ಸಿಗೆ ಬಲವಾದ ಪೆಟ್ಟು ತಗಲಿತು. ಮೊದಲೇ ಮುಪ್ಪಿನ ಮುದುಕನಾಗಿ ಹೋಗಿದ್ದನು. ಹಾಸಿಗೆ ಹಿಡಿದನು. ತ್ರಿಲೋಕ ಸುಂದರಿ ಯಾದ ನೆಹಾಲಳ ಪತಿಯೂ ತನ್ನ ಜೇಷ್ಠ ಪುತ್ರನೂ ಆದ ಹಸನಖಾನನನ್ನು ಪಟ್ಟಕ್ಕೆ ಕೂಡ್ರಿಸಬೇಕೆಂದು ಫಿರೋಜಖಾನನು ಯೋಜಿಸಿದನು. ಆದರೆ ಅಹಮ್ಮದಖಾನನು ಪ್ರಚಂಡ ಸೈನ್ಯದೊಂದಿಗೆ ಬಂದು ಪಟ್ಟವನ್ನು ಕೇಳಿ ದನು. ಇವನ ಬೆಂಬಲಕ್ಕೆ ದರಬಾರದ ಅಮಾತ್ಯಮೊದಲಾದವರೂ ಸೈನ್ಯದ ಶೂರ ಸರದಾರರೂ ಇದ್ದುದರಿಂದ ಸ್ವತ: ಫಿರೋಜನು ಮನಸ್ಸಿತ್ಯನಾಗಿ ಹಾಸಿಗೆ ಹಿಡಿದದ್ದರಿಂದ ಉಪಾಯಗಾಣದೇ ಒಪ್ಪಬೇಕಾಯಿತು. ಅಹಮ್ಮದ ಖಾನನು ೧ನೇ ಅಹಮ್ಮದಶಹ ಎಂಬ ಬಿರುದಾವಳಿಯನ್ನು ಧರಿಸಿ ಕಲಬು- ರ್ಗಿಯ ಸುಲ್ತಾನನಾದನು. ಫಿರೋಜಖಾನನು ಇ. ಸ. ೧೪೨೨ರ ೨೪ನೇ ತಾರೀಖಿನ ದಿವಸ ಮೃತನಾದನು.

೧ನೇ ಅಹಮ್ಮದಶಹನು ಪಟ್ಟವನ್ನೇರಿದ ಬಳಿಕ ಎಲ್ಲಕ್ಕೂ ಮೊದಲು ಮಾಡಿದ ಕೆಲಸವೆಂದರೆ ರಾಜ್ಯದಲ್ಲಿ ಸುಖಶಾಂತಿಯನ್ನು ನೆಲಿಸಿದನು. ಪ್ರಜೆ ಗಳ ಪ್ರೀತಿಯನ್ನು ಸಂಪಾದಿಸಿದನು. ಜೊತೆಗೆ ಸೈನ್ಯ ಸಂಗ್ರಹವನ್ನು ಚನ್ನಾಗಿಯೇ ಮಾಡಿದನು. ೨ನೇ ದೇವರಾಯನ ಮೇಲಿನ ಸಿಟ್ಟಿನ ಸೇಡನ್ನು ತೀರಿಸಿಕೊಳ್ಳದ ವಿನ: ಅವನ ಮನಕ್ಕೆ ಶಾಂತಿಇರಲಿಲ್ಲ. ಅಖಂಡ ವಾದ ಸೇನಾಸಾಗರದಿಂದ ತುಂಗಭದ್ರಾ ಉತ್ತರ ತೀರದಲ್ಲಿ ತಳವೂಸಿದನು. ವಿಜಯನಗರದವರು ಸೈನ್ಯ ಸಂಗ್ರಹಿಸಿದರು. ಆದರೆ ಅವರಲ್ಲಿ ಸೈನ್ಯ ಬಲ ಅಷ್ಟಿರಲಿಲ್ಲ. ಒರಂಗಲ್ಲಿಗೆ ಸಹಾಯಾರ್ಥವಾಗಿ ಕುದುರೆ ಸವಾರವನ್ನು ಓಡಿಸಿ ನದಿಯ ದಕ್ಷಿಣ ತೀರದಲ್ಲಿ ಬೀಡುಬಿಟ್ಟನು. ಇ. ಸ. ೧೯೨೪ರ ಚಳಿ ಗಾಲದಲ್ಲಿ ಇದು ಜರುಗಿರಬೇಕು.

ಒಂದು ದಿನ ರಾತ್ರಿ ಲೋಡಿಖಾನ ಅಲಮಖಾನ ದಿಲಾವರಖಾನರೆಂಬ ಮೂವರು ಯೋಧರು ನದಿಯನ್ನು ದಾಟಿ ರಾಯನ ಠಾಣೆಯನ್ನು ಪ್ರವೇಶಿಸಿ ದರು. ಹಿಂದೂ ರಾಯನು ಆಗ ತನ್ನ ಡೇರೆಯಲ್ಲಿ ಮಲಗಿ ನಿದ್ರಿಸುತ್ತಿ

ದ್ದನು. ಎರಡು ಮೂರು ಮಂದಿ ಮಾತ್ರ ಕಾವಲುಗಾರರಾಗಿದ್ದರು ಇಡೀ ಸೈನ್ಯವೆಲ್ಲವೂ ನಿದ್ರಿಸುತ್ತಿತ್ತು. ಮುಂಜಾನೆ ಜುಮುಜುಮು ನಸುಕಾಯಿತು ಈ ಮೂವರು ಖಾನರು ಠಾಣೆಯನ್ನು ಹೊಕ್ಕರು. ಸನಿಯದಲ್ಲಿಯ ಕಬ್ಬಿನ ತೋಟವನ್ನು ಮೊದಲು ನಾಶಪಡಿಸಬೇಕೆಂದು ಗಡಿಬಡಿಸಿ ಸಾಗಿದರು. ಅಷ್ಟ ರಲ್ಲಿ ರಾಯನಿಗೆ ಎಚ್ಚರಾಯಿತು. ಮುಸ್ಲಿಮರು ತನ್ನ ಠಾಣೆಯನ್ನು ಮುತ್ತಿ ದರೆಂದು ಗಾಬರಿಯಾಗಿ ಇದ್ದಕ್ಕಿದ್ದಂತೆಯೇ ಅಡಗಿಸಿಕೊಳ್ಳಲು ಕಬ್ಬಿನ ತೋಟದಲ್ಲಿ ಓಡಿದನು. ಮೂವರು ಖಾನರು ಇವನನ್ನು ಹಿಡಿದರು. ರಾಜ ನೆಂದು ಅವರು ಅರಿಯರು. ಯಾವನೋ ಒಬ್ಬ ಸಾಮಾನ್ಯ ಮನುಷ್ಯನೆಂದು ತಿಳಿದು ರಾಯನ ಹೆಗಲಮೇಲೆ ಕಬ್ಬಿನ ಹೊರೆ ಹೊರಿಸಿ ತಮ್ಮನ್ನು ಅನು ಸರಿಸಲು ಹೇಳಿ ಮುಂದೆ ನಡೆದರು. ಅಷ್ಟರಲ್ಲಿ ಮುಸ್ಲಿಮ ಸೈನ್ಯವು ನದೀ ದಾಟಿಬಂದು ಹಿಂದೂ ಸೈನ್ಯವನ್ನು ಮುತ್ತಿತು. ಘೋರ ಕದನವೆಸ ಗಿತು. ರಾಯನು ಕಣ್ಮರೆಯಾದದ್ದು ತಿಳಿದಕೂಡಲೇ ಹಿಂದೂ ಸೈನ್ಯವು ಚಲ್ಲಾಪಿಲ್ಲಿಯಾಯಿತು. ಈ ಗದ್ದಲದಲ್ಲಿ ಈ ಮೂವರು ಖಾನರು ಓಡಿ ತಮ್ಮ ಸೈನ್ಯವನ್ನು ಕೂಡಿಕೊಂಡರು. ರಾಯನು ಪಾರಾಗಿ ನಗರಕ್ಕೆ ಓಡಿಬಂದನು. ಅಳಿದುಳಿದ ಸೈನಿಕರು ಸರದಾರರೂ ರಾಯನನ್ನು ಕಂಡು ಹರ್ಷಿತರಾದರು.

ಆದರೆ ಅಹ್ಮದಶಹನು ತನ್ನ ಸೇಡನ್ನು ಚನ್ನಾಗಿಯೇ ತೀರಿಸಿಕೊಂ ಡನು. ಹೆಂಗಸರು ಹುಡುಗರು ವೃದ್ಧರು ಯಾರೆಂದುನೋಡದೇ ಹಿಂದೂ ಜನರ ನಾಶವನ್ನು ಅಸಾಧ್ಯ ರೀತಿಯಲ್ಲಿ ಮಾಡಿ ಆ ಇಡೀ ಪ್ರಾಂತವನ್ನೂ ನಿರ್ಜನವನ್ನಾಗಿ ಮಾಡಿಬಿಟ್ಟನು. ದೇವಾಲಯಗಳನ್ನು ಕೆಡವಿದನು. ಹೇರಳವಾದ ದ್ರವ್ಯವನ್ನು ಎತ್ತಿದನು. ಬ್ರಾಹ್ಮಣರ ಅಗ್ರಹಾರಗಳನ್ನೂ ಪಾಠಶಾಲೆಗಳನ್ನು ನಾಶಮಾಡಿದನು. ಬ್ರಾಹ್ಮಣರನ್ನು ಖಡ್ಗಕ್ಕೆ ಆಹುತಿ ಕೊಟ್ಟನು.

ಈ ರೀತಿ ಹತ್ಯಾಕಾಂಡವು ನಡೆದದ್ದನ್ನು ಕಂಡು ಕೆಲವು ಹಿಂದೂ ವೀರರು ಐದುಸಾವಿರ ಯೋಧರನ್ನು ಕೂಡಿಸಿಕೊಂಡು ಸುಲ್ತಾನನನ್ನು ಯುಕ್ತಿಯಿಂದ ಕೊಲ್ಲಲು ಹೊಂಚು ಹಾಕಿದರು. ಅಹಮ್ಮದಶಹನಿಗೆ ಬೇಟೆ

ಯಾಡುವ ಹುಚ್ಚು-ಬಹಳ ಇದ್ದುದರಿಂದ ಒಂದು ದಿನ ತನ್ನ ಠಾಣೆಯಿಂದ ಕೇವಲ ಕೆಲವೇ ಕಾವಲುಗಾರರೊಡನೆ ತುಂಗಭದ್ರಾ ತೀರದ ಬಂಡೆ ಪ್ರದೇಶದಲ್ಲಿ ಬೇಟೆಗೆ ಹೊರಟನು. ಈ ವೀರರು ಅವನನ್ನು ಮುತ್ತಿದರು. ಖಾನನು ಕಣ್ಮರೆಯಾದದ್ದನ್ನು ಕಂಡು ಅವನ ಹಿತೈಷಿ ಅಬ್ದುಲ್ಲಖಾದೀರನು ಕೆಲವು ಸೈನ್ಯದೊಡನೆ ಹುಡುಕಾಡಲು ಹೊರಟಿದ್ದರು. ಅಕಸ್ಮಾತ್ತಾಗಿ ಅವನು ಸಹಾಯಕ್ಕೆ ಬಂದಂತಾಯಿತು. ಸುಲ್ತಾನನು ಪಾರಾದನು. ಈ ಪ್ರಸಂಗದಲ್ಲಿ ೫೦೦ ಮುಸ್ಲಿಮ ಸೈನಿಕರು ಒಂದು ಸಾವಿರ ಹಿಂದುಗಳೂ ಸತ್ತರೆಂದು ಉಲ್ಲೇಖವಿದೆ.

ಈ ರೀತಿ ಪಾರಾಗಿ ಬಂದು ಅಹಮ್ಮದಖಾನನು ವಿಜಯನಗರಕ್ಕೇ ನೇರವಾಗಿ ಲಗ್ಗೆ ಇಟ್ಟನು. ಕೆಲ ದಿವಸಗಳಲ್ಲಿಯೇ ರಾಯನು ಹತಾಶನಾಗಿ ಒಡಂಬಡಿಕೆಗೆ ಸಿದ್ಧನಾದನು. ವಿಜಯನಗರದವರು ಬಹಮನೀಯುವರಿಗೆ ಇಲ್ಲಿಯವರೆಗೆ ಸಲ್ಲಿಸದೇ ಉಳಿದಿದ್ದ ಕಪ್ಪ-ಕಾಣಿಕೆಗಳನ್ನು ಆನೆಯ ಮೇಲೆ ಹೇರಿಸಿ ತನ್ನ ಠಾಣೆಗೆ ಕಳಿಸಬೇಕೆಂದು ಸುಲ್ತಾನನು ಆಜ್ಞೆ ಮಾಡಿದನು. ಈ ಪ್ರಕಾರ ೨ನೇ ದೇವರಾಯನು ೩೦ ಸರ್ವೋತ್ಕೃಷ್ಟವಾದ ಆನೆಗಳ ಮೇಲೆ ಅಮೂಲ್ಯವಾದ ಕಪ್ಪ ಕಾಣಿಕೆಗಳನ್ನು ಹೇರಿಸಿ ತನ್ನ ಮಗನನ್ನು ಜೊತೆಗೆ ಕಳಿಸಿಕೊಟ್ಟನು.

ಅಹಮ್ಮದಶಹನು ಕಾಣಿಕೆಗಳನ್ನು ಸ್ವೀಕರಿಸಿದನು. ಬಾಲಕನನ್ನು ಎದುರುಗೊಂಡು ಅಪ್ಪಿಕೊಂಡು ತನ್ನ ಸಿಂಹಾಸನದ ಅಡಿಯಲ್ಲಿ ತನ್ನ ಪಾದ ತಲದಲ್ಲಿ ಕುಳ್ಳಿರಿಸಿಕೊಂಡನು. ಅವನ ಹೆಗಲ ಮೇಲೆ ಅತ್ಯಂತ ಬೆಲೆ ಬಾಳುವ ವಸ್ತ್ರಗಳನ್ನು ಹೊಚ್ಚಿದನು. ರತ್ನ ವೈಢೂರ್ಯ ಮೊದಲಾದ ಅಗಣಿತ ಬೆಲೆಯ ಆಭರಣಗಳನ್ನು ಅವನ ಕೊರಳಲ್ಲಿ ಹಾಕಿದನು. ವಿವಿಧ ದೇಶಗಳಿಂದ ಸಂಗ್ರಹಿಸಿದ ಅಮೂಲ್ಯವಾದ ೨೦ ಕುದುರೆಗಳನ್ನೂ ಅಸಾಮಾನ್ಯ ಸಾಮರ್ಥ್ಯದಿಂದೊಡಗೂಡಿದ ಒಂದು ಆನೆಯನ್ನೂ ಅನೇಕ ಬೇಟೆಯ ನಾಯಿಗಳನ್ನೂ ಮೂರು ಅದ್ಭುತವಾದ ರಣಹದ್ದುಗಳನ್ನೂ, ಬಾಲಕನಿಗೆ ಕಾಣಿಕೆಯಾಗಿ ಕೊಟ್ಟು ವಿಜಯನಗರದ ಮುತ್ತಿಗೆಯನ್ನು ಕಿತ್ತಿದನು.

ಕೃಷ್ಣಾ ತೀರದ ವರೆಗೆ ಬಾಲಕನನ್ನು ಕರೆದುಕೊಂಡು ಹೋಗಿ ಅವನನ್ನು ವಾಪಸು ಕಳಿಸಿ ತಾನು ಕಲಬುರ್ಗಿಯನ್ನು ಸೇರಿದನು.

ಅಹಮ್ಮದಶಹನು ೧೪೨೪ರಲ್ಲಿ ಪ್ರಚಂಡ ಸೈನ್ಯದೊಡನೆ ಒರಂಗಲ್ಲ ವನ್ನು ಮುತ್ತಿ ಅದನ್ನು ಗೆದ್ದುಕೊಂಡನು. ಒರಂಗಲ್ಲ ರಾಜ್ಯವು ಸಂಪೂರ್ಣ ವಾಗಿ ಬಹಮನೀ ರಾಜ್ಯದಲ್ಲಿ ಸೇರ್ಪಡೆಯಾಗಿ ಹೋಯಿತು. ಮುಂದೆ ಇ. ಸ. ೧೪೩೫ ಫೆಬ್ರುವರಿ ತಿಂಗಳಲ್ಲಿ ಅಹಮ್ಮದಶಹನು ತೀರಿದನು. ಅದೇ ತಿಂಗಳ ೨೭ನೇ ತಾರೀಖಿನ ದಿವಸ ಅವನ ಮಗನಾದ ೨ನೇ ಅಲ್ಲಾವುದ್ದೀನನು ಪಟ್ಟವೇರಿದನು. ಐದು ವರುಷದ ವರೆಗೆ ವಿಜಯನಗರದ ರಾಜನು ಕಪ್ಪು ಕಾಣಿಕೆಗಳನ್ನು ಬಹಮನೀ ರಾಜ್ಯಕ್ಕೆ ಸಲ್ಲಿಸಿದ್ದಿಲ್ಲ. ಕಾರಣ ಅದನ್ನು ವಸೂಲ ಮಾಡಲಿಕ್ಕೆ ಅಲ್ಲಾವುದ್ದೀನನು ಪ್ರಚಂಡ ಸೈನ್ಯದೊಡನೇ ತನ್ನ ತಮ್ಮನಾದ ಮುಹಮ್ಮದಖಾನನನ್ನು ಕಳಿಸಿಕೊಟ್ಟನು. ಮುಹಮ್ಮದಖಾನನು ಸೈನಿಕರು ಕೊಳ್ಳೆ ಸುಲಿಗೆಗಳನ್ನು ಪ್ರಾರಂಭಿಸುತ್ತಲೇ ರಾಯನ ರಾಜ್ಯವನ್ನು ಪ್ರವೇಶಿಸಿದ್ದರಿಂದ ರಾಯನು ಮೊತ್ತಗಾಗಿ ಎಲ್ಲ ಕಪ್ಪು ಕಾಣಿಕೆಗಳನ್ನು (ಹಿಂದಿನ ಬಾಕಿ) ಕೊಟ್ಟದ್ದಲ್ಲದೇ ೨೦ ಆನೆಗಳನ್ನೂ, ೨೦೦ ಸ್ತ್ರೀಯರನ್ನೂ ಹೇರಳವಾದ ಕಪ್ಪು ಕಾಣಿಕೆಗಳನ್ನು ಕೊಟ್ಟು ಕಳಿಸಿದನು. ಈ ಸ್ತ್ರೀಯರು ನರ್ತನದಲ್ಲಿ, ಗಾಯನದಲ್ಲಿ, ವಾದ್ಯ ನುಡಿಸುವದರಲ್ಲಿ ಅತ್ಯಂತ ಜಾಣಾಕ್ಷರಿದ್ದ ರಲ್ಲದೇ ಬಹಳ ಸುಂದರಿಯರಾಗಿದ್ದರು. ಇವರನ್ನು ಮುಸ್ಲಿಮ ಸೈನಿಕರು ಭೋಗಿಸಿ ತೃಪ್ತಿಪಟ್ಟರ .

ಇದೇ ರೀತಿ ಸಾಗಿದರೆ ತಾವು ಬದುಕುವದು ಸಾಧ್ಯವಿಲ್ಲವೆಂದು ೨ನೇ ದೇವರಾಯನು ಯೋಚಿಸತೊಡಗಿದ. ಒಂದು ದಿನ ರಾಜ್ಯದ ಎಲ್ಲ ಸರದಾರ ರನ್ನೂ, ರಾಜಕಾರಣಿಗಳನ್ನೂ, ಬ್ರಾಹ್ಮಣರನ್ನು ಕರೆಸಿ ಮಂತ್ರಾಲೋಚನೆ ನಡೆಸಿದನು. ವಿಜಯನಗರದ ಸೈನಿಕರಲ್ಲಿ ಶಿಸ್ತು ಇದ್ದಿದ್ದಿಲ್ಲ. ಬಿಲ್ಲು ಬಾಣ ಪ್ರಯೋಗವು ಇವರಿಗೆ ಗೊತ್ತಿದ್ದಿಲ್ಲ. ಇವರ ಕುದುರೆಗಳೂ, ಕುದುರೆ ಸವಾ ರರೂ ನಿರ್ಬಲರಾಗಿದ್ದರು. ಇವರಿಗೆ ಆಧುನಿಕ ರೀತಿಯ ಯುದ್ಧ ಪದ್ಧತಿಯು ಗೊತ್ತಿದ್ದಿಲ್ಲವೆಂಬ ಅನೇಕ ವಿಷಯಗಳು ಅಂದಿನ ಸಭೆಯಲ್ಲಿ ಬಹಿರಂಗದಲ್ಲಿ

ತರಲ್ಪಟ್ಟವು ಅಂದಿನಿಂದ ಮುಸಲ್ಮಾನ ತಜ್ಞರನ್ನು ವಿಜಯನಗರಕ್ಕೆ ರಾಯನು ಕರೆಸಿಕೊಂಡನು. ಮುಸಲ್ಮಾನೀ ರಾಜ್ಯದಲ್ಲಿ ಅತೃಪ್ತಿ ಹೊಂದಿದ ಆದರೆ ನಿಜವಾಗಿಯೂ ಯುದ್ಧಕುಶಲರಾದ ಮುಸ್ಲಿಮ ಯೋಧರಿಗೆ ತನ್ನಲ್ಲಿ ಸ್ವಾಗತವಿದೆಯೆಂದು ಹೇಳಿಕಳಿಸಿ ಅವರನ್ನು ಕರೆಸಿದನು. ರಾಜಧಾನಿಯಲ್ಲಿ ಒಂದು ಮಸೂತಿಯನ್ನು ಕಟ್ಟಿಸಿ ಮುಸಲ್ಮಾನರಿಗೆ ನವಾಜು ಮಾಡಲು ಆಸ್ಪದ ಮಾಡಿಕೊಟ್ಟನು. ಮುಸ್ಲಿಮ ಪ್ರಜೆಗಳಲ್ಲಿ ಸಹಾನುಭೂತಿಯಿಂದಲೂ ಪ್ರೀತಿಯಿಂದಲೂ ನಡೆಸಿಕೊಳ್ಳಬೇಕೆಂದು ತನ್ನ ಎಲ್ಲ ಪ್ರಜೆಗಳಿಗೆ ಸುಗ್ರೀವಾಜ್ಞೆಯನ್ನು ಹೊರಡಿಸಿದನು. ತನ್ನ ದರ್ಬಾರದಲ್ಲಿ ಅಲಂಕೃತವಾದ ವೇದಿಕೆಯೊಂದನ್ನು ನಿರ್ಮಿಸಿ ಅದರ ಮೇಲೆ ಕುರಾಣವನ್ನು ಇಡಿಸಿದನು. ಹೀಗಾದ್ದರಿಂದ ಮುಸಲ್ಮಾನರು ದೊಡ್ಡ ಸಂಖ್ಯೆಯಲ್ಲಿ ವಿಜಯನಗರದ ರಾಜನ ಆಶ್ರಯ ಪಡೆಯತೊಡಗಿದರು. ಸೈನಿಕರಿಗೆ ಆಧುನಿಕ ಯುದ್ಧ ಕಲೆಯನ್ನು ಮುಸ್ಲಿಮ ಸರದಾರರು ಕಲಿಸಿಕೊಟ್ಟರು. ಆದ್ದರಿಂದ ಕೆಲವು ದಿವಸದಲ್ಲಿಯೇ ದೇವರಾಯನಲ್ಲಿ ೨ಸಾವಿರ ಮುಸಲ್ಮಾನರೂ ೬೦ ಸಾವಿರಹಿಂದೂ ಸೈನಿಕರೂ ಬಿಲ್ಲುಬಾಣ ಯುದ್ಧದಲ್ಲಿ ನಿಷ್ಣಾತರಾದರು. ೮೦ ಸಾವಿರ ಅತ್ಯುತ್ತಮ ಕುದುರೆ ಮತ್ತು ಕುದುರೆ ಸವಾರರೂ ಕೂಡಿಕೊಂಡು ದೊಡ್ಡ ಸೈನ್ಯವು ಶಿಸ್ತನ್ನರಿತು ಸಿದ್ಧವಾಯಿತು.

ಇ. ಸ. ೧೪೪೩ನೇ ಇಸ್ವಿಯ ಬೇಸಿಗೆಯಲ್ಲಿ ಒಂದು ಅದ್ಭುತ ಕ್ರೂರವಾದ ಕೃತ್ಯವೊಂದು ೨ನೇ ದೇವರಾಯನ ಜೀವನದಲ್ಲಿ ಘಟಿಸಿಹೋಯಿತು. ಇವನ ತಂಗಿಯ ಮಗನು ವಿಜಯನಗರದಲ್ಲಿ ಒಂದು ಭವ್ಯವಾದ ಅರಮನೆಯಂತೆ ಶೋಭಿಸುವ ಪ್ರಸಾದವನ್ನು ಕಟ್ಟಿಸಿದನು ವಾಸ್ತವಿಕ ದಿವಸ ರಾಯನನ್ನು ಆಹುತಿಯನ್ನು ತೆಗೆದುಕೊಂಡು ತಾನೇ ಪಟ್ಟವನ್ನು ಆಕ್ರಮಿಸಬೇಕೆಂದು ಸಂಚು ಮಾಡಿದನು. ಆಗಿನ ಕಾಲದಲ್ಲಿ ಈಗಿನಂತೆ ವಾಸ್ತವಿಕ ದಿನವಲ್ಲಿ ಊರಿನ ಪ್ರತಿಷ್ಠಿತರನ್ನೂ ಆಪ್ತರು ಇಷ್ಟರನ್ನು ಆಮಂತ್ರಿಸುವದು ರೂಢಿಯಾಗಿತ್ತು. ಆ ಪ್ರಕಾರ ಎಲ್ಲರಿಗೂ ಆಮಂತ್ರಣವಿತ್ತು ಆ ಸೋದರಳಿಯನ್ನು ತನ್ನ ನೂತನ ಪ್ರಸಾದದಲ್ಲಿ ಅಂತರಂಗದ ಪಡಶಾಲೆಯನ್ನು ನಿರ್ಮಿಸಿದ್ದನು. ಅಲ್ಲಿ ನಡೆದ ಚಟುವಟಿಕೆಗಳಾವೂ ಬಹಿರಂಗವಾಗದಂತೆ ಗೌಪ್ಯವಾಗಿ

ಅದು ಕಟ್ಟಲ್ಪಟ್ಟಿತ್ತು. ಪ್ರಸಾದದೆದುರು ಸಕಲ ವಾದ್ಯಗಳು ಆದಿನ ಅವ್ಯಾಹತವಾಗಿ ಬಾರಿಸುವಂತೆ ಆಜ್ಞೆ ವಿಧಿಸಿದ್ದನು. ರಾಯನ ಅತ್ಯಂತ ನಂಬಿಗಸ್ಥರೂ ವೀರಾಧಿವೀರರೂ ಪಡಶಾಲೆಗೆ ಬರಬೇಕೆಂದು ವ್ಯವಸ್ಥೆಗೊಳಿಸಿ ಒಬ್ಬೊಬ್ಬರನ್ನೇ ಸ್ವಾಗತಿಸತೊಡಗಿದನು. ಅವರು ಪಡಶಾಲೆಗೆ ಹೋದಕೂಡಲೇ ಖಡ್ಗದಿಂದ ಶಿರಸ್ಸನ್ನು ಹಾರಿಸಲ್ಪಟ್ಟವರಾಗಿ ಬೀಳುತ್ತಿದ್ದರು. ವಾದ್ಯಗಳ ಆರ್ಭಟೆಯಲ್ಲಿ ಒಳಗಿನ ಮರಣಕಾಲದ ಆರ್ತಧ್ವನಿಯೂ ಕೇಳಬರುತ್ತಿದ್ದಿಲ್ಲ ಈ ರೀತಿ ನಡೆದುಹೋಯಿತು. ಒಳಗೆ ರಕ್ತ ಹರಿಯುವದು ಹೇಗೋ ಓರ್ವನಿಗೆ ಗೋಚರವಾಯಿತು. ಕೂಡಲೇ ಓಡಿಹೋಗಿ ೨ನೇ ದೇವರಾಯನಿಗೆ "ಪ್ರಸಾದದಲ್ಲಿ ಏನೋ ಗದ್ದಲವಿದೆ. ನೀವು ಬರಬೇಡಿರಿ" ಎಂದು ಸೂಚಿಸಿದನು.

ಈ ಹತ್ಯಾಕಾಂಡದಲ್ಲಿ ಎಲ್ಲ ಸರದಾರರನ್ನೂ, ರಾಯನ ಅತ್ಯಂತ ವಿಶ್ವಾಸಿಕರನ್ನೂ ಆಹುತಿ ತೆಗೆದುಕೊಂಡದ್ದಾಯಿತು. ಆದರೆ ರಾಯನು ಇನ್ನೂ ಬರಲಿಲ್ಲ, ತಾನೇ ಹೋಗಿ ಕರೆದರಾಯಿತೆಂದೂ ಪ್ರಸಂಗ ಸಾಧಿಸಿದರೆ ಅರಮನೆಯಲ್ಲಿಯೇ ರಾಯನನ್ನು ಮುಗಿಸಿದಹಾಯಿತೆಂದೂ ನೆನೆದ ಸೋದರಳಿಯನು ತಟ್ಟೆಯಲ್ಲಿ ವೀಳ್ಯೆಯನ್ನು ಇಟ್ಟುಕೊಂಡು ಅದಕ್ಕೆ ರೇಶಿಮೆಯ ವಸ್ತ್ರ ಹೊದಿಸಿ ತೆಗೆದುಕೊಂಡು ಹೋಗಿ ನಮಸ್ಕರಿಸಿ— ಪ್ರಭೋ ನನ್ನ ಪ್ರಸಾದಕ್ಕೆ ದಯಮಾಡಿಸಬೇಕು. ವೀಳ್ಯೆಯನ್ನು ಸ್ವೀಕರಿಸಿರಿ". ಎಂದನು. "ನನಗೆ ಇಂದು ಏಕೋ ಮೈಯಲ್ಲಿ ನೆಟ್ಟಗಿಲ್ಲ, ಸಾಗಲಿ ಸಮಾರಂಭ' ಎಂದು ರಾಯನೆಂದನು. ಕೂಡಲೇ ಅಳಿಯನು ರಾಯನ ಮೇಲೆ ಏರಿ ಹೋಗಿ ಕಠಾರಿಯಿಂದ ನಾಲ್ಕೈದು ಕಡೆಗೆ ಇರಿದನು. ೨ನೇ ದೇವರಾಯನು ಬಿದ್ದನು.

ತನ್ನ ಕಾರ್ಯ ಸಾಧಿಸಿತೆಂಬ ಸಂತೋಷದಿಂದ ಅರಮನೆಯಿಂದ ದರಬಾರಕ್ಕೋಡಿದನು. "ರಾಯನು ತೀರಿದನು. ಈಗ ನಾನೇ ವಿಜಯನಗರದ ರಾಜಾಧಿರಾಜನು ನನ್ನನ್ನು ನೀವೆಲ್ಲರೂ ರಾಜನೆಂದು ಸ್ವೀಕರಿಸಿ ಜಯಘೋಷ ಮಾಡಿರಿ' ಎಂದು ಪ್ರಚೋದಿಸತೊಡಗಿದನು. ಅಷ್ಟರಲ್ಲಿ ಅಳಿಯನ ಆನು

ಚರರಾದ ಯೋಧರೂ ಸರದಾರರೂ ಬಂದು ಕೂಡಿಕೊಂಡರು. ದೊಡ್ಡ ಸಭೆಯೇ ನೆರೆದಂತಾಯಿತು. ಇನ್ನೇನು ಪ್ರಜೆಗಳು ಘೋಷಣೆ ಮಾಡುವದೊಂದು ಉಳಿದಿದ್ದಿತು. ಅಷ್ಟರಲ್ಲಿ ಮುಗ್ಗುತ್ತ ಮುಗ್ಗರಿಸುತ್ತ ರಕ್ತದಲ್ಲಿ ಮುಳುಗಿದ ೨ನೇ ದೇವರಾಯನು ಉಚ್ಚಸ್ವರದಲ್ಲಿ ಒದರುತ್ತಲೇ ಬಂದನು “ನಾನಿನ್ನೂ ಸತ್ತಿಲ್ಲ, ಜೀವದಿಂದಿದ್ದೇನೆ. ಆ ಚಾಂಡಾಲನನ್ನು ಹಿಡಿಯಿರಿ” ಎಂದು ಧಾವಿಸಿದನು. ಪ್ರಜೆಗಳು ಕೂಡಲೇ ಅವನನ್ನು ಹಿಡಿದು ಯಮಲೋಕಕ್ಕೆ ಕಳಿಸಿದರು. ಅರಸನ ಹಿತಚಿಂತಕರಲ್ಲಿ ದಣ್ಣಾಯಕ ನಾಗಣ್ಣನೊಬ್ಬನೇ ಜೀವದಿಂದ ಉಳಿದಿದ್ದನು. ಅವನು ಈ ಸಂಚನ್ನು ಶೋಧಿಸಿ ಅಳಿಯನಿಗೆ ಸಹಾಯಕರಾಗಿ ನಿಂತವರೆಲ್ಲರನ್ನೂ ಸಂಹರಿಸಿದನು. ಅವರ ಮನೆತನವನ್ನೇ ಒರೆಸಿ ಒಗೆದನು.

ಇಂಥ ಸಂಕಟ ಸಮಯದಲ್ಲಿಯೇ ಬಹಮನೀ ಖಾನನು ವಿಜಯನಗರಕ್ಕೆ ತನಗೆ ಸಲ್ಲತಕ್ಕ ಕಪ್ಪ ಕಳಿಸಲು ಹೇಳಿಕಳಿಸಿದನು. ಅದಕ್ಕೆ ಉತ್ತರವು ಯುದ್ಧವಾಯಿತು. ಇ. ಸ. ೧೪೪೩ರಲ್ಲಿ ದಣ್ಣಾಯಕ ನಾಗಣ್ಣನು ಕಲಬುರ್ಗಿಯ ಮೇಲೇರಿ ಹೋಗಿ ಅಲ್ಲಿಯ ಸುತ್ತಲಿನ ವೀರರೆಲ್ಲರನ್ನೂ ಸೆರೆಹಿಡಿದು ತಂದನು. ರಾಯನ ಹಿರಿಯ ಮಗನು ಮುದಗಲ್ಲ ಕೋಟೆಯನ್ನು ಕೈವಶಮಾಡಿಕೊಂಡು ಬಂಕಾಪೂರ ರಾಯಚೂರಗಳ ಕಡೆಗೆ ಮತ್ತೊಂದು ರಾಯನ ದಂಡು ಹೋಗಿ ಮುತ್ತಿ ಅವುಗಳನ್ನು ಹಿಡಿದುಕೊಂಡನು. ಸುಲ್ತಾನ ಅಲ್ಲಾವುದ್ದೀನನು ಅಪಾರ ಸೈನ್ಯದೊಡನೆ ಹಿಂದೂ ಸೈನ್ಯವನ್ನು ಎದುರಿಸಿದನು. ತೆಲಂಗಾಣ ದೌಲತ್ತಾಬಾದ, ಬೀದರ ಅಹಮದಾಬಾದಗಳಲ್ಲಿಯ ಎಲ್ಲ ಸೈನ್ಯವನ್ನೂ ತರಿಸಿಕೊಂಡನು.

ಇದನ್ನು ತಿಳಿದು ೨ನೇ ದೇವರಾಯನು ತನ್ನ ಠಾಣೆಯನ್ನು ಕಿತ್ತು ಮುದುಗಲ್ಲ ಕೋಟೆಯೊಳಗೆ ಹೋಗಿ ಕುಳಿತನು. ಇದನ್ನು ತಿಳಿದು ಅಲ್ಲಾವುದ್ದೀನನು ಬಿಜಾಪೂರದ ನಾಯಕನಾದ ಝುಮಾನಖಾನನಿಗೆ ವಿಜಯನಗರವನ್ನು ರಕ್ಷಿಸುತ್ತಲಿದ್ದ ನೇ ದೇವರಾಯನ ಹಿರಿಯ ಮಗನ ಮೇಲೇರಿ ಹೋಗಲು ದೌಲತ್ತಾಬಾದದಿಂದ ತರಿಸಿದ ಸೈನ್ಯ ಸಮೇತವಾಗಿ ಕಳಿಸಿದನು. ಬೀದರದ ಸೇನಾಪತಿಯಾದ ಖಾನ ಅಝಿಮನನ್ನು

ವಿಜಯನಗರದ ಮುಖ್ಯ ಸೈನ್ಯದ ಮೇಲೆ ಯುದ್ಧ ಮಾಡಲು ಆದೇಶವಿತ್ತನು. ಮಲ್ಲಿಕ ಅಲ್ತಿಝಾರನನ್ನು ರಾಯಚೂರ ಮೇಲೇರಿ ಹೋಗಲು ಹೇಳಿದನು.

ಈ ಘೋರವಾದ ಕದನದಲ್ಲಿ ಹಿಂದೂ-ಮುಸ್ಲೀಮರೀರ್ವರಲ್ಲಿಯೂ ಬಹು ಸಂಖ್ಯೆಯಲ್ಲಿ ಮರಣಹೊಂದಿದರು. ಅಲ್ಲಾವುದ್ದೀನನಿಗೆ ಬಹಳವಾದ ನಷ್ಟವಾಯಿತು. ೨ನೇ ದೇವರಾಯನ ಹಿರಿಯ ಮಗನನ್ನು ಝುವನಖಾನನು ಭಲ್ಲೆಯಿಂದ ಇರಿದುಕೊಂದನು. ಇದರಿಂದ ರಾಜನಿಗೆ ದುಃಖ ವಿಶೇಷವಾಗಿ ತನ್ನ ಸೈನ್ಯ ಸಮೇತವಾಗಿ ಹಿಂತಿರುಗಿದನು. ಅಲ್ಲಾವುದ್ದೀನನ ಅತ್ಯಂತ ವರ್ಚಸ್ವಿಯಾದ ಶೂರ ಸರದಾರರಿಬ್ಬರು ವಿಜಯನಗರವನ್ನು ಗೌಪ್ಯವಾಗಿ ಹೊಕ್ಕು ಸೆರೆ ಹಿಡಿಯಲ್ಪಟ್ಟರು. ಆಗ ೨ನೇ ದೇವರಾಯನು ಅಲ್ಲಾವುದ್ದೀನನಿಗೆ ಹೇಳಿ ಕಳಿಸಿದನು. "ನೀವು ಇನ್ನು ಮೇಲೆ ಯಾವ ಕಾರಣದಿಂದಲೂ ನನ್ನ ರಾಜ್ಯದಲ್ಲಿ ಕಾಲಿಡಬಾರದು. ಅಂದರೆ ನಾನು ನಿಮಗೆ ಪ್ರ ವರುಷ ಕಪ್ಪು ಕಾಣಿಕೆಗಳನ್ನು ಸಲ್ಲಿಸುತ್ತೇನೆ. ಮತ್ತು ಈ ವರುಷ ಸರದಾರರನ್ನು ಬಿಡುಗಡೆ ಮಾಡುತ್ತೇನೆ" ಎಂದು ಇದಕ್ಕೆ ಸುಲ್ತಾನನು ಒಪ್ಪಿದನು. ಸರದಾರರನ್ನು ಬಿಡುಗಡೆ ಮಾಡಲಾಯಿತು. ವಿಜಯನಗರದಿಂದ ಕಪ್ಪು ಕಾಣಿಕೆಗಳೂ ಹೋದವು. ಈ ಒಡಂಬಡಿಕೆಯನ್ನು ಈರ್ವರೂ ಜೀವಂತವಿರುವವರೆಗೂ ಪಾಲಿಸಿದರು.

ಇ. ಸ. ೧೪೨೬ರಲ್ಲಿ ೨ನೇ ದೇವರಾಯನು ವಿಜಯನಗರದಲ್ಲಿ ಪಾನಸುಪಾರಿ ಬಝಾರದಲ್ಲಿ ಜೈನ ಬಸ್ತಿಯನ್ನು ಕಟ್ಟಿಸಿದನು. ಜೈನರಿಗೆ ರಾಜಧಾನಿಯಲ್ಲಿ ಬಹಳ ಆಶ್ರಯಕೊಟ್ಟನು. ಮಹಾರಾಜಾಧಿರಾಜ ಪರಮೇಶ್ವರ ಎಂಬ ಬಿರುದನ್ನು ಧರಿಸಿದ್ದನೆಂದು ಅಲ್ಲಿಯ ಲೇಖನದಿಂದ ಗೊತ್ತಾಗುವದು ಇ. ಸ. ೧೪೩೦ರಲ್ಲಿ ತಂಜಾವೂರದ ದೇವಾಲಯಕ್ಕೆ ೨ನೇ ದೇವರಾಯನು ಉಂಬಳಿ ಹಾಕಿಕೊಟ್ಟನು. ಅದರ ಶಿಲಾಲೇಖದಲ್ಲಿ ವೀರ ಪ್ರತಾಪ ಮಹರಾಯ ಮಹಾಮಂಡಲೇಶ್ವರ ಎಂಬ ಬಿರುದುಗಳ ಉಲ್ಲೇಖವಿದೆ. ೨ನೇ ದೇವರಾಯನು ಇ. ಸ. ೧೪೪೪ರ ಪ್ರಾರಂಭದಲ್ಲಿ ತೀರಿದನು.

ಆಗಿನ ಕಾಲದಲ್ಲಿರುವ ವಿಜೃಂಭಣೆಯಿಂದ ಮೆರೆಯುತ್ತಿರುವ ವಿಜಯಾ ನಗರದ ವರ್ಣನೆಯನ್ನು ಇಟಲಿಯ ಪ್ರವಾಸಿಯಾದ ನಿಕೋಲೋ ಎಂಬವನು ವರ್ಣಿಸುತ್ತಾನೆ. ಅವನು ೧೪೨೦ನೇ ಇಸ್ವಿಯಲ್ಲಿ ಅಂದರೆ ೨ನೇ ದೇವರಾಯನು ಪಟ್ಟವೇರಿದ ಮರುವರುಷವೇ ವಿಜಯನಗರಕ್ಕೆ ಬಂದನು. "ಈ ವಿಶಾಲವಾದ ನಗರದ ಸುತ್ತಳತೆಯು ೬೦ ಮೈಲು ಆಗುವದು. ಇದರ ಸುತ್ತಲೂ ಗಗನ ಚುಂಬಿತವಾದ ಭದ್ರವಾದ ಗೋಡೆಯಿರುವದು. ಕೆಳಗೆ ಸುತ್ತಲೂ ಆಳವಾದ ಕೊಳ್ಳವಿರುವದು. ಇಲ್ಲಿಯ ಜನಸಂಖ್ಯೆಯಲ್ಲಿ ಸುಮಾರು ಒಂದು ಲಕ್ಷ ಪುರುಷರು ಯುದ್ಧ ಕಲೆಯಲ್ಲಿ ನಿಪುಣರಿರುವರು. ಕೋಟೆಯ ಗೋಡೆಯಿಂದ ಹೊರಗೆ ಪರ್ವತಗಳ ವರೆಗೂ ಬಡಬಗ್ಗರುಗಳು ವಾಸಿಸುವರು. ಒಳಗಿನ ಮಗ್ಗುಲಲ್ಲಿ ಬಂಡೆಗಲ್ಲುಗಳಿಂದ ಕಟ್ಟಿದ ಕೋಟೆಯಂತಿರುವಲ್ಲಿ ಸಿರಿವಂತರೂ, ವ್ಯಾಪಾರಸ್ಥರೂ, ಸರದಾರರೇ ಮೊದಲಾದವರು ವಾಸಿಸಿರುವರು. ನದಿಯಿಂದ ಬಂದ ಕಾಲುವೆಯ ಮಗ್ಗುಲಲ್ಲಿ ಕಬ್ಬಿನ ತೋಟಗಳಿರುವವು. ಉದ್ಯಾನ ವಿಹಾರ ಸ್ಥಾನಗಳು ಶೋಭಿಸುವವು. ಅಲ್ಲಲ್ಲಿ ದೇವಾಲಯಗಳೂ ಬ್ರಾಹ್ಮಣರಿಂದ ನಡೆಸಲ್ಪಟ್ಟ ಶಾಲೆ ಕಾಲೇಜುಗಳೂ, ಶೋಭಿಸುವವು.

"ಈ ರಾಜ್ಯದಲ್ಲಿ ಪುರುಷನು ತಮಗೆ ಇಚ್ಛಿಸಿದಷ್ಟು ಸ್ತ್ರೀಯರನ್ನು ಲಗ್ನವಾಗಲು ಅಧಿಕಾರವಿದೆ. ಸತಿ ಹೋಗುವ ಪದ್ಧತಿಯೂ ರೂಢಿಯಲ್ಲಿದೆ ಇಡೀ ಹಿಂದುಸ್ಥಾನದಲ್ಲಿಯೂ ಎಲ್ಲ ರಾಜರಿಗಿಂತಲೂ ಇವನು (೨ನೇ ದೇವ ರಾಯನು) ಮಹಾಸಮರ್ಥನು (ದೇಹದಿಂದ) ಇವನು ೧೨ ಸಾವಿರ ಸ್ತ್ರೀಯ ರಿಂದೊಡಗೂಡಿರುವನು. ಇವನ ಅಡಿಗೆ ಮನೆಯಲ್ಲಿ (ಕೇವಲ ಸ್ತ್ರೀಯರೇ ಇದ್ದು) ೪ ಸಾವಿರ ಇರುವರು. ಇವರೆಲ್ಲರೂ ತ್ರಿಲೋಕ ಸುಂದರಿಯರಿದ್ದಾರೆ. ರಾಜನ ಸಂಗಡ ಸುಮಾರು ೩ ಸಾವಿರ ಮಡದಿಯರು ಪಲ್ಲಕ್ಕಿಯಲ್ಲಿ ಅವನನ್ನು ಸದಾ ಹಿಂಬಾಲಿಸುತ್ತಾರೆ.

"ದೇವರ ರಥೋತ್ಸವವು ಒಳ್ಳೇ ವಿಜೃಂಭಣೆಯಿಂದ ನೆರವೇರುವದು ಇನ್ನೊಂದು ಆಶ್ಚರ್ಯದಾಯಕವಾದ ವಿಷಯವೆಂದರೆ ಬೇಸಿಗೆಯಲ್ಲಿ ಈ ಹಬ್ಬ

ಬರುವದು. (ಹೋಳಿಹಬ್ಬವೆ) ಆ ದಿನ ನಗರದ ಸಕಲ ಸ್ತ್ರೀ ಪುರುಷರು ಸ್ಥಾನ-ಮಾನಗಳ ತಾರತಮ್ಯವಿಲ್ಲದೇ ಪರಸ್ಪರರ ಮೇಲೆ ಬಣ್ಣದ ನೀರನ್ನು ಉಗ್ಗುತ್ತಾರೆ ಮೋರೆಗೆ ಬಣ್ಣ ಬಳೆಯುತ್ತಾರೆ. ಈ ಸಮಾರಂಭದಲ್ಲಿ ರಾಜನು ಸ್ವತಃ ತನ್ನ ಸಕಲ ರಾಜಪರಿವಾರ ಸ್ತ್ರೀ ಪರಿವಾರದೊಂದಿಗೆ ಜನತೆಯಲ್ಲಿ ಒಂದಾಗಿ ಕೂಡಿಕೊಂಡು ಬಣ್ಣದ ನೀರನ್ನು ಉಗ್ಗುತ್ತಾ, ಉಗ್ಗಿಸಿಕೊಳ್ಳುತ್ತಾ ಸಾಗುತ್ತಾ, ಚೀರಾಡುತ್ತಾ ಆನಂದಿಸುತ್ತಾನೆ, ಅದರಂತೆ ದೀಪಾವಳೀ, ಮಹಾನವಮಿ ಹಬ್ಬವು ಅತ್ಯಂತ ವಿಜೃಂಭಣೆಯಿಂದ ಆಚರಿಸಲ್ಪಡುತ್ತದೆ"

ಇದೇ ವೇಳೆಗೆ ಪರ್ಶಿಯಾದಿಂದ ಬಂದಂಥ ಅಬ್ದುಲ ರಜಾಕ ಎಂಬ ಪ್ರವಾಸಿಯು ವಿಜಯನಗರದ ಬಗ್ಗೆ ಹೀಗೆ ಬರೆಯುತ್ತಾನೆ : ಈ ಪಟ್ಟಣದ ಸೌಂದರ್ಯವನ್ನು ನೋಡಲು ಎರಡು ಕಣ್ಣುಗಳು ಸಾಕಾಗುವದಿಲ್ಲ. ಜಗತ್ತಿನಲ್ಲಿ ಎಲ್ಲಿಯೂ ಕೇಳದ ಸಿಗದಂಥ ಮಧುರವಾದ ಗಾಯನ ಮತ್ತು ವಾದನಗಳು ಇಲ್ಲಿ ಇವೆ. ಈ ನಗರಕ್ಕೆ ಏಳು ಸುತ್ತಿನ ಗೋಡೆಗಳು ಗಗನ ಚುಂಬಿತವಾಗಿ ಎದ್ದು ನಿಂತಿವೆ. ಇವುಗಳ ನಡುವೆ ಏಳು ಆಳವಾದ ನೀರಿನಿಂದ ತುಂಬಿದ ಕೊಳ್ಳಗಳಿವೆ. ಎಲ್ಲಕ್ಕೂ ಹೊರಗಿನ ಕೋಟೆಯ ಗೋಡೆಯೆಂದರೆ ೬ ರಿಂದ ೮ ಫೂಟು ಎತ್ತರವಾದ ಕಲ್ಲು-ಬಂಡೆಗಳಿಂದ ಸಿದ್ಧವಾಗಿದೆ. ಅವುಗಳ ಮಧ್ಯದಿಂದ ಮನುಷ್ಯನು ಕೂಡ ಹಾದುಹೋಗಲಾರ, ಈ ರೀತಿ ೬೦ ಮೈಲು ಸುತ್ತಳತೆಯಲ್ಲಿ ನಿಲ್ಲಿಸಿದ್ದಾರೆ. ಹೊಸಬರಿಗೆ ವಿಜಯನಗರವನ್ನು ಪ್ರವೇಶಿಸುವ ಮಾರ್ಗವೇ ಗೊತ್ತಾಗುದಿಲ್ಲ. ೧ನೇ ಗೋಡೆಗೂ ೨ನೇ ಗೋಡೆಗೂ ನಡುವೆ ತೋಟಗಳೂ ಉದ್ಯಾನಗಳೂ ವಿಹಾರ ಸ್ಥಳಗಳೂ ಇರುವವಲ್ಲದೇ ಕಬ್ಬು ಬತ್ತ ಮೊದಲಾದ ಗದ್ದೆಗಳು ವಿಪುಲವಾಗಿರುವವು. ೨ನೇ ಗೋಡೆಗೂ ೩ನೇ ಗೋಡೆಗೂ ನಡುವೆ ಮನೆಗಳೂ, ಬೀದಿಗಳೂ ಇರುವವು. ಬೀದಿಗಳ ಎರಡು ಮಗ್ಗಲಿಗೆ ಅಂಗಡಿಗಳಿರುವವು.

"೩ನೇ ಗೋಡೆಗೂ ೪ನೇ ಗೋಡೆಗೂ ನಡುವೆ ಸರದಾರರ, ಸಿರಿವಂತರ. ಸೇನಾಧಿಪತಿಗಳ, ಅಮಾತ್ಯರುಗಳ ಪ್ರಸಾದಗಳು ಕಂಗೊಳಿಸುವವು. ೪ನೇ ೫ನೇ ಮತ್ತು ೬ನೇ ಗೋಡೆಗಳ ಮಧ್ಯದಲ್ಲಿ ರಾಜದರಬಾರ, ಸರ

ಕಾರಿ ಕಚೇರಿ, ರಾಜನ ಆಪ್ತೇಷ್ಟರ ನಿವಾಸ ಧನಕನಕಗಳ ಕೊಠಡಿಗಳೂ ಇರುವವು. ೭ನೇ ಗೋಡೆಯ ಒಳಗೆ ರಾಜನ ಅರಮನೆ ರಾಣೀವಾಸ ರಾಜ ರಾಣಿಯರ ದೂತಿಯರ ವಸತಿ ಗೃಹಗಳು ಸ್ನಾನಗೃಹಗಳು ಮೊದಲಾವುಗಳಿರುವವು. ಇಲ್ಲಿ ಗುಲಾಬೀ ಹೂಗಳು ವಿಪುಲವಾಗಿವೆ. ಬಹಿರಂಗವಾಗಿಯೇ ಇಲ್ಲಿ ಮುತ್ತುರತ್ನ ಹಾಗೂ ವಜ್ರಗಳನ್ನೂ ಮಾರುತ್ತಾರೆ. ಇವುಗಳ ರಾಶಿಯನ್ನೇ ಹಾಕಿಕೊಂಡು ಬೀದಿಯಲ್ಲಿ ಮಾರಲು ಕುಳಿತಿರುತ್ತಾರೆ" ಎಂದು ಬಣ್ಣಿಸಿದ್ದಾನೆ.

---

## ೫. ಸಂಗಮವಂಶದ ಕೊನೆ

(೧೪೪೯ ರಿಂದ ೧೪೯೦)

೨ನೇ ದೇವರಾಯನ ತರುವಾಯ ಪಟ್ಟಕ್ಕೆ ಬಂದವರ ಬಗ್ಗೆ ಅವರು ನಡೆದ ರಾಜ್ಯಾಡಳಿತದ ಬಗ್ಗೆ ಯಾವದೊಂದು ನಿರ್ದಿಷ್ಟವಾದ ಸಂಗತಿಯು ಗೊತ್ತಾಗಿಲ್ಲ. ಆದರೂ ೨ನೇ ದೇವರಾಯನು ೧೪೪೪ರಲ್ಲಿ ಕಾಲವಾದಬಳಿಕ ೩ನೇ ದೇವರಾಯನೆಂಬುವವನು ೧೪೪೪ರಿಂದ ೧೪೪೯ರ ವರೆಗೆ ರಾಜನಾಗಿದ್ದನೆಂದು ಓರ್ವ ಇತಿಹಾಸಕಾರನು ಹೇಳುತ್ತಾನೆ. ಆದರೆ ಶಿಲಾಲೇಖನಗಳಿಂದ ೨ನೇ ದೇವರಾಯನಿಗೆ ಇರ್ವರು ಗಂಡುಮಕ್ಕಳಿದ್ದರೆಂದು ಗೊತ್ತಾಗುವದು. ಒಬ್ಬನು ಮಲ್ಲಿಕಾರ್ಜುನ ಇನ್ನೊಬ್ಬನು ವಿರೂಪಾಕ್ಷ ಎಂದು ಮಲ್ಲಿಕಾರ್ಜುನನ ಬಗ್ಗೆ ೧೪೫೨-೫೩ ಮತ್ತು ೧೪೬೪—೬೫ ಇಸ್ವಿ ಹಾಕಿದ ಶಿಲಾಲೇಖಗಳು ಕಾಂಜೀವರದಲ್ಲಿ ದೊರೆಯುವವು. ಅಂದಬಳಿಕ ಅಷ್ಟು ಕಾಲದವರೆಗೆ ಇವನು ಆಳರಬೇಕೆಂದು ಗೊತ್ತಾಗುವದು. ವಿರೂಪಾಕ್ಷನ ಬಗ್ಗೆ ೧೪೭೦ರಲ್ಲಿ ಶಿಲಾಲೇಖವಿದೆ. ಮಲ್ಲಿಕಾರ್ಜುನನಿಗೆ ಇರ್ವರು ಮಕ್ಕಳಿದ್ದಿರಬೇಕು. ರಾಜಶೇಖರ (ಮೊದಲನೆಯನನು) ೨ನೇ ವಿರೂಪಾಕ್ಷನೆಂಬ

ಮತ್ತೊಬ್ಬ ೨ನೇ ವಿರೂಪಾಕ್ಷನ ಬಗ್ಗೆ ೧೪೮೩ರಲ್ಲಿ ಶಿಲಾಲೇಖನ ಸಿಕ್ಕಿದೆ. ರಾಜಶೇಖನ ಬಗ್ಗೆ ೧೪೮೩-೮೭ ರಲ್ಲಿ ಒಂದು ಶಿಲಾಲೇಖ ಸಿಕ್ಕಿದೆ ರಾಜಶೇಖರನು ೩ ವರುಷ ರಾಜ್ಯವಾಳಿದನೆಂದು ಇದರಿಂದ ತಿಳಿಯುವದು. ಇವನ ತರುವಾಯ ಆಕ್ರಮಣಕಾರನಾದ ನರಸಿಂಹನು ೧೪೯೦ರಲ್ಲಿ ವಿಜಯನಗರದ ಸಿಂಹಾಸನಾಧಪತಿಯಾದನು.

ಆದರೆ ಅಬ್ದುಲ್ಲ ರಜಾಕನಹೇಳಿಕೆಯ ಪ್ರಕಾರ ೨ನೇ ದೇವರಾಯನಿಗೆ ಚಿಕ್ಕ (ಚಿನ್ನ) ರಾಯನೆಂಬ ಓರ್ವಮಗನಿದ್ದನು. ಚಿನ್ನರಾಯನ ತರುವಾಯ ಅವನ ಮಗನು (ಹೆಸರು ಗೊತ್ತಿಲ್ಲ) ಪಟ್ಟಕ್ಕೆ ಬಂದನು. ಇವನ ಮಗನು ವಿರೂಪಾಕ್ಷನು. ವಿರೂಪಾಕ್ಷನನ್ನು ಅವನ ಹಿರಿಯ ಮಗನೇ ಇರಿದು ಕೊಂದನು. ಅವನನ್ನು ಅವನ ತಮ್ಮನಾದ ಪೆದ್ದರಾಯನು ಸಂಹರಿಸಿ ಪಟ್ಟವೇರಿ ಈ ಪೆದ್ದರಾಯನಿಂದ ಬಲತ್ಕಾರದಿಂದ ನರಸಿಂಹನು ರಾಜ್ಯವನ್ನು ಕಸಿದುಕೊಂಡನೆಂದೂ ಗೊತ್ತಾಗುವದು.

ಅದೇನೇ ಇದ್ದರೂ ಈ ನಾಲ್ವತ್ತು ವರುಷಗಳಲ್ಲಿ ಸರಕಾರವು ಒಬ್ಬರ ಕೈಯಿಂದ ಮತ್ತೊಬ್ಬರ ಕೈಗೆ ಸರಕಾರವೇ ಅಂತರಿಸಲ್ಪಟ್ಟಿತು. ಸಂಗಮ ವಂಶದವರ ರಾಜ್ಯಾಡಳಿತಕ್ಕಾಗಿ ಪ್ರಜೆಗಳು ಬೇಸತ್ತಿದ್ದರು. ರಾಜ್ಯದಲ್ಲಿ ಅತೃಪ್ತಿ, ಅರಾಜಕತೆ, ತಿರಸ್ಕಾರ ದ್ವೇಷಗಳು ಕಾರಸ್ಥಾನಗಳ ಬಹಳ ಬೆಳೆದಿದ್ದವು. ಇದರ ಲಾಭವನ್ನು ಯೋಧನಾದ ನರಸಿಂಹನು ಪಡೆದು ಎಲ್ಲರನ್ನೂ ತಳ್ಳಿ ತಾನು ಪಟ್ಟವನ್ನು ಆಕ್ರಮಿಸಿದನು. ಸಂಗಮ ವಂಶಾಭಿಮಾನಿಗಳನ್ನು ರಕ್ತಸಂಬಂಧಿಕರನ್ನೂ ಒಬ್ಬರನ್ನೂ ಬಿಡದೇ ಯಮಸದನಕ್ಕೆ ಕಳುಹಿಸಿದನು.

ಇತ್ತ ಬಹಮನೀ ರಾಜ್ಯದಲ್ಲಿ ಕೂಡ ಅರಾಜಕತೆಯುಂಟಾಗಿತ್ತು. ಕಲಬುರ್ಗಿಯಲ್ಲಿಯೇ ರಾಜಮನೆತನದಲ್ಲಿ ಜಗಳಗಳು ಕಾದಾಟಗಳೂ ನಡೆದವು, ಅಲ್ಲಾವುದ್ದೀನನು ನಿಸ್ಸತ್ವನೂ ಅಸಹಾಯಕನೂ ಆದನು. ೧೪೫೮ ಫೆಬ್ರುವರಿ ೩ನೇ ತಾರೀಖಿನ ದಿವಸ ಸತ್ತನು. ಅವನ ಮಗನಾದ ಹುಮಾ

ಯೂನನು ಪಟ್ಟವನ್ನಾಕ್ರಮಿಸಿದನು, ಇವನು ಅತ್ಯಂತ ನೀಚನೂ ಚಾಂಡಾಲನೂ ಪೆರವರನ್ನು ಹಿಂಸಿಸಿ ಖಡ್ಗದಿಂದ ಸೀಳಿಸುತ್ತಾ ಅದನ್ನು ನೋಡಿ ಸಂತೋಷಪಡುವವನೂ ಆಗಿದ್ದನು. ಇವನು ತೆಲುಗು ರಾಜ್ಯಕ್ಕೆ ದಾಳಿಹೂಡಿ ದೇವರಕೊಂಡವೆಂಬುದನ್ನು ಸ್ವಾಧೀನಪಡಿಸಿಕೊಂಡನು. ಇವನು ೧೪೬೧ ಸಪ್ಟಂಬರ ೫ನೇ ತಾರೀಖಿನ ದಿವಸ ಸತ್ತನು. ಅಂದು ಬಹಮನೀರಾಜ್ಯದ ಸಕಲ ಪ್ರಜೆಗಳಿಗೂ ಈ ವಾರ್ತೆಯು ಪರಮ ಸಂತೋಷವನ್ನಿತ್ತಿತು. ಈ ಕಾಲಕ್ಕೆ ಮಲ್ಲಿಕಾರ್ಜುನನು ವಿಜಯನಗರದ ರಾಜನಾಗಿದ್ದನು.

ಹುಮಾಯೂನನ ತರುವಾಯ ಅವನ ಮಗ ನಿಜಾಮುಶಹ ಎಂಟು ವರುಷದ ಬಾಲಕನು ಪಟ್ಟವೇರಿದ ಕೆಲವೇ ಕಾಲದ ನಂತರ ಅವನ ತಮ್ಮ ಮಹಮ್ಮದಶಹನು ೧೪೬೩ ಜುಲೈ ೩೦ನೇ ದಿವಸ ಪಟ್ಟಕ್ಕೆ ಕುಳಿತನು. ೧೪೬೩ರಿಂದ ೬೮ರ ವರೆಗಿನ ಕಾಲದಲ್ಲಿ ವಿಜಯನಗರದ ಪಟ್ಟದ ಮೇಲೆ ರಾಜಶೇಖರನೋ ಅಥವಾ ೧ನೇ ವಿರುಪಾಕ್ಷನೋ ಇರಬೇಕೆಂದು ಓರ್ವ ಸಂಶೋಧಕರು ಬರೆಯುತ್ತಾರೆ. ಮಹಮ್ಮದಶಹನ ಮಹಾಮಂತ್ರಿಯಾದ ಮಹಮ್ಮೂದಗವಾನ ಎಂಬವನು ವಿಜಯನಗರದವರ ವಿರುದ್ಧ ಪಶ್ಚಿಮಕ್ಕೆ ದಾಳೀಹೂಡಿ ಗೋವಾ ಮತ್ತು ಅದರ ಸುತ್ತುಮುತ್ತಲಿನ ಪ್ರದೇಶವನ್ನು ಆಕ್ರಮಿಸಿಬಿಟ್ಟನು.

ಗೋವಾ ಬಹುದಿವಸಗಳಿಂದ ವಿಜಯನಗರದವರ ಸ್ವಾಧೀನದಲ್ಲಿಯೇ ಇತ್ತು. ಅಲ್ಲಿರುವವರೆಲ್ಲರೂ ಬಹು ಸಂಖ್ಯೆಯಲ್ಲಿ ಮುಸಲ್ಮಾನರಿದ್ದರು. ಅವರು ಪರದೇಶಗಳಿಂದ ಶ್ರೇಷ್ಠ ತಳಿಯ ಕುದುರೆಗಳನ್ನು ತರಿಸಿ ರಾಯನಿಗೆ ಮಾರುತ್ತಿದ್ದರು. ಆದರೆ ಅವರು ೧೪೬೯ರಲ್ಲಿ ಕುದುರೆಗಳನ್ನು ಕೇವಲ ಮುಸಲ್ಮಾನರಿಗೇ ಮಾರತೊಡಗಿದರು. ಇದರಿಂದ ಸಿಟ್ಟಿಗೆದ್ದ ರಾಯನು ಅವರನ್ನೆಲ್ಲ ಸಂಹರಿಸಲು ಆಜ್ಞೆ ವಿಧಿಸಿದನು. ಈ ಸಂದರ್ಭದಲ್ಲಿ ಗೋವಾದಲ್ಲಿಯ ೧೦ ಸಾವಿರಕ್ಕಿಂತ ಹೆಚ್ಚು ಮುಸ್ಲಿಮರು ಪ್ರಾಣ ಕಳೆದುಕೊಳ್ಳಬೇಕಾಯಿತು. ಇದರ ಸೇಡನ್ನು ತೀರಿಸಿಕೊಳ್ಳಲು ಮಹಮೂದಗವಾನನು ದಂಡಯಾತ್ರೆ ಕೈಕೊಂಡಿದ್ದನು. ಆದರೆ ಗೋವಾ ಪ್ರಾಂತವು

ತುಸು ಕಾಲದಲ್ಲಿಯೇ ಹಿಂದೂ ಜನರಿಗೂ ಉಳಿಯಲಿಲ್ಲ, ಮುಸ್ಲಿಮರಿಗೂ ದಕ್ಕಲಿಲ್ಲ. ಪೋರ್ತುಗೀಜ ಪ್ರಾಂತವಾಗಿ ಪರಿವರ್ತಿಸಿತು. ಗೋವಾ ಮುಸ್ಲಿಮರ ಕಗ್ಗೊಲೆಯು ವಿರುಪಾಕ್ಷನ ಆಳಿಕೆಯಲ್ಲಿ ೧೪೭೫ರಲ್ಲಿ ಜರುಗಿತೆಂದು ಪೂರ್ಜಾಜ ಎಂಬವನು ಬರೆಯುತ್ತಾನೆ.

ಬಹಮನೀ ಸೈನ್ಯದಲ್ಲಿ ಯುಸುಫ ಅಲಿಖಾನನೆಂಬ ಓರ್ವ ಗುಲಾಮನಿದ್ದನು. ಅವನು ತನ್ನ ಸ್ವಪರಾಕ್ರಮದಿಂದಲೂ ಯುಕ್ತಿ ಪ್ರಯುಕ್ತಿಗಳಿಂದಲೂ ಸೈನಿಕರನ್ನು ತನ್ನೆಡೆಗೆ ಸೆಳೆದುಕೊಂಡು ಬಹಮನೀ ರಾಜನನ್ನು ತಿರಸ್ಕರಿಸಿ ತಾನೇ ಸ್ವತಂತ್ರ ಸುಲ್ತಾನನೆಂದು ಸಾರಿದನು. ಬಿಜಾಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆದಿಲ್‌ಶಹ ಎಂಬ ಬಿರುದಿತ್ತೊಟ್ಟು ಇ. ಸ. ೧೪೭೦ರಲ್ಲಿ ಸುಲ್ತಾನನಾಗಿಬಿಟ್ಟನು. ಇವನು ಓಡಿಸಾದ ಅರಸನಿಂದ ಕೋಂಡಬೀಡವನ್ನು ರಾಜಮಹೇಂದ್ರಿಯನ್ನು ಸ್ವಾಧೀನಪಡಿಸಿಕೊಂಡನು

ಈ ವೇಳೆಗೆ ಬೆಳಗಾವಿ ಕೋಟೆಯ ನಾಯಕನಾದ ವಿಕ್ರಮನು ವಿಜಯನಗರದವರ ಪ್ರೇರಣೆಯ ಮೇರೆಗೆ ಗೋವಾವನ್ನು ಮುತ್ತಿದನು. ಆದರೆ ಅದು ಸಾಧ್ಯವಾಗಲಿಲ್ಲ. (೧೪೭೩)

ಇ. ಸ. ೧೪೭೫ರಲ್ಲಿ ದಕ್ಷಿಣದಲ್ಲಿ ಮಹಾ ಬರಗಾಲಬಿದ್ದಿತು. ಜನರು ತೃಪ್ತರಾಗಿ ಕೊಂಡಪಲ್ಲಿಯ ಗವ್ಹರ್ನರನಾದ ಮಹಮ್ಮದಖಾನನನ್ನು ಕೊಂದು ಓರಿಸಾದ ರಾಜನನ್ನು ಸಹಾಯಕ್ಕೆ ಕರೆದರು. ಓರಿಸಾದ ರಾಜನು ಬಂದನು. ರಾಜಮಹೇಂದ್ರಿಯನ್ನು ಮುತ್ತಿದನು. ಆಗ ಆ ರಾಜ್ಯವು ನಿಜಾಮ ಉಲ್ಮುಲ್ಕನ ಸ್ವಾಧೀನದಲ್ಲಿತ್ತು. ಮುಹಮ್ಮದಶಹ ಸ್ವತಃ ಸೈನ್ಯಸಮೇತನಾಗಿ ಬಂದು ಓರಿಸಾ ರಾಜನನ್ನು ಓಡಿಸಿದನಲ್ಲದೇ ಅವನ ರಾಜ್ಯವನ್ನು ಹೊಕ್ಕನು. ವಾಡಿಕೆಯಂತೆ ಸುಲಿಗೆಯನ್ನು ಹೇರಳವಾಗಿ ಮಾಡಿದ್ದಲ್ಲದೆ ಕೊಳ್ಳೆ ಕೊಡುವದೂ ಕೊಲ್ಲುವದೂ ಅಗಣಿತವಾಯಿತು. ಬ್ರಾಹ್ಮಣರು ಪೂಜಿಸುತ್ತಿರುವ ಗುಡಿಯನ್ನು ನೆಲಸಮಮಾಡಿ ಅಲ್ಲಿ ಮಸೂತಿಯನ್ನು ಕಟ್ಟಿಸಿ

ದನು. ಈ ರೀತಿ ತೆಲಂಗಾಣ ದೇಶದಲ್ಲಿ ೩ ವರುಷ ಕಾಲವಿದ್ದು ರಾಜಮಹೇಂದ್ರಿಯಲ್ಲಿಯೇ ಅವನು ವಾಸವಾಗಿದ್ದನು. ಕೊನೆಗೆ ಅದು ವಿಜಯನಗರದ ನರಸಿಂಹರಾಯನ ಸ್ವಾಧೀನಕ್ಕೆ ಬಿಡಲಾಯಿತು. ನರಸಿಂಹರಾಯನು ಮಹಾ ಬಲಾಢ್ಯ ರಾಜನಾಗಿದ್ದನೆಂದು ಪೂರ್ವ ಪಶ್ಚಿಮ ದಕ್ಷಿಣ ಸಮುದ್ರಗಳ ವರೆಗೆ ರಾಜ್ಯವನ್ನು ವಿಸ್ತರಿಸಿದ್ದನೆಂದು ಫಿರಿಶ್ತಹಾ ಎಂಬವನು ಬರೆಯುತ್ತಾನೆ.

ಮಹಮ್ಮದಶಹನು ಕೊಂಡಪಲ್ಲಿಯನ್ನು ಆಕ್ರಮಿಸಿ ರಾಜಮಹೇಂದ್ರದ ದಂಡಯಾತ್ರೆಗೈದನು. ಆಗ ಅದು ವಿಜಯನಗರದವರ ವಶದಲ್ಲಿತ್ತು ಹಿಂದೂ ಸೈನ್ಯವನ್ನು ಓಡಿಸಿ ಅದನ್ನು ಆಕ್ರಮಿಸಿದನು. (೧೪೮೦) ಅಲ್ಲಿಂದ ನರಸಿಂಹನ ಸ್ವಾಧೀನದಲ್ಲಿದ್ದ ಮಾಲೂರನ್ನು ಮುತ್ತಿದನು. ಅದನ್ನೂ ಅದರ ಸುತ್ತಲಿನ ಕರ್ನಾಟಕದ ಬಹುಭಾಗವನ್ನೂ ಸ್ವಾಧೀನಪಡಿಸಿಕೊಂಡನು. ಮಾಲೂರಿಂದ ಸುಮಾರು ೨೫ ಮೈಲು ದೂರದಲ್ಲಿ ಗುಂಜೀ ಎಂಬ ಗ್ರಾಮದಲ್ಲಿ ಒಂದು ಪುರಾತನ ದೇವಾಲಯವಿರುವದೆಂಬ ವಾರ್ತೆಯನ್ನು ಶಹಾನು ಕೇಳಿ ಅಲ್ಲಿಗೆ ಸೈನ್ಯ ಸಮೇತ ಹೋಗಿ ದೇವಾಲಯವನ್ನು ನಾಶಮಾಡಿ, ಅಲ್ಲಿದ್ದ ಹೇರಳವಾದ ಧನ-ಕನಕಗಳನ್ನು ಹೇರಿಕೊಂಡು ಮತ್ತೆ ಮೊದಲಿನ ಸ್ಥಳಕ್ಕೆ ಬಂದನು. ೧೪೮೦ ಮಾರ್ಚ ತಿಂಗಳ ೧೩ಕ್ಕೆ ಇದು ಜರುಗಿತು. ಅಲ್ಲಿಂದ ಮಚ್ಛಲೀಪಟ್ಟಣಕ್ಕೆ ದಾಳಿಯಿಟ್ಟು ಆದನ್ನು ಸುಲಿದು ಕೊಂಡಪಲ್ಲಿಗೆ ಹಿಂತಿರುಗಿದನು.

ಇ. ಸ. ೧೪೮೧ರಲ್ಲಿ ಅತ್ಯಂತ ಸ್ವಾಮಿಭಕ್ತನೂ, ಮಹಾಶೂರನೂ ಆದ ಮಹಮ್ಮೂದ ಗವಾನ ಎಂಬುವನನ್ನು ಮಹಮ್ಮದಶಹನು ಕಾರಣವಿಲ್ಲದೆ ಖಡ್ಗದಿಂದ ತುಂಡರಿಸಿ ಕೊಂದುಬಿಟ್ಟಿದ್ದಕ್ಕಾಗಿ ಇಡೀ ಸೈನ್ಯವೇ ಇವನ ಬಗ್ಗೆ ದ್ವೇಷಗೊಂಡಿತು. ಮುಂದೆ ಕೆಲವೇ ದಿವಸಗಳಲ್ಲಿ ಸೈನ್ಯಾಧಿಕಾರಿಗಳೆಲ್ಲರೂ ಸ್ವಾತಂತ್ರ್ಯ ಸಾರಿದರು. ಬಹಮನೀ ರಾಜ್ಯವು ಕೊನೆಗೊಂಡಿತು. ಐದು ಸ್ವತಂತ್ರ ರಾಜ್ಯಗಳು ತಲೆಯೆತ್ತಿದವು. ಅವುಗಳು ಈ ಪ್ರಕಾರ ಉಂಟಾದವು. ಬಿಜಾಪುರದಲ್ಲಿ ಆದಿಲಶಹ (ಇವನೇ ಐವರಲ್ಲಿ ಬಲಾಢ್ಯನು) ಅಹಮದಾಬಾದದಲ್ಲಿ ಬದರೀಶಹ, ಬಿರಾರದಲ್ಲಿ ಇಮಾದಶಹ, ಅಹಮ್ಮದ

ನಗರದಲ್ಲಿ ನಿಜಾಮಶಹ ಮತ್ತು ಗೋವಳಕೊಂಡದಲ್ಲಿ ಕುತುಬಶಹರೆಂಬು ವವರು ತಮ್ಮ ತಮ್ಮ ರಾಜ್ಯಗಳನ್ನು ಸ್ಥಾಪಿಸಿಕೊಂಡರು.

ಇದರಿಂದ ಮಹಮೂದಶಹನು ಅತ್ಯಂತ ಅವಮಾನಿತನಾಗಿ ದುಃಖಿಯಾಗಿ ಏಕಾಂತ ಜೀವನವನ್ನು ಸಾಗಿಸಿ ೧೫೧೭ ಡಿಸೆಂಬರ ೧೮ನೇ ದಿವಸ ತೀರಿದನು. ಅವನ ಹಿರಿಯ ಮಗನಾದ ಅಹಮ್ಮದನು ಪಟ್ಟವೇರಿದನು. ಎರಡು ವರುಷಗಳ ಆಳಿಕೆಯ ನಂತರ ಅಹಮ್ಮದನು ತೀರಿಕೊಂಡನು. ಅವನ ತರುವಾಯ ಅವನ ತಮ್ಮನಾದ ೩ನೇ ಅಲ್ಲಾವುದ್ದೀನನು ಪಟ್ಟಾಭಿಷಕ್ತನಾದನು. ಇವನನ್ನು ಓಡಿಸಿ ವಾಲಿಯೆಂಬವನು ಪಟ್ಟವೇರಿದನು. ೨ನೇ ಅಹಮ್ಮದನ ಮಗನಾದ ಕಲೀಮುಅಲ್ಲಾ ಎಂಬವನು ಇವನನ್ನು ಸೆರೆಯಲ್ಲಿ ಇಟ್ಟಂತೆ ಮಾಡಿ ತಾನೇ ರಾಜ್ಯಸೂತ್ರ ವಹಿಸಿದ್ದನು. ಆಯಿತು ಇವನು ಸತ್ತ ಕೂಡಲೇ ಬಹಮನೀ ವಂಶವೂ ನಿಂತುಹೋಯಿತು.

---

# ಸಾಳುವವಂಶ

## ೬. ನರಸಿಂಹರಾಯ (೧೪೯೦–೧೫೦೯)

ವಿರುಪಾಕ್ಷರಾಯನು ಅಶಕ್ತನೂ ಅಯೋಗ್ಯನೂ ಆದುದರಿಂದ ರಾಜ್ಯದ ಬಹುಭಾಗವು ಇವನ ಕೈಬಿಟ್ಟು ಹೋಯಿತು. ಗೋವಾ, ಚೌಳ, ದಬೋಲಿಗಳನ್ನು ಕಳೆದುಕೊಂಡನು. ಇವನು ಕ್ರೂರನೂ, ನೀಚನೂ, ನಿರ್ದಯನೂ ಆಗಿದ್ದನು. ಸದಾಕಾಲ ಮದ್ಯಸೇವನೆ ಮತ್ತು ಸ್ತ್ರೀಲೋಲುಪನಾಗಿ ಉಗ್ರ

ಗಾಮಿಯೆಂದು ಪ್ರಖ್ಯಾತನಾಗಿದ್ದನು. ಇದರಿಂದ ಬೇಸತ್ತು ರಾಜ್ಯದ ಪ್ರಜೆಗಳೆಲ್ಲರೂ ಇವನ ವಿರುದ್ಧ ಬಂಡೆಬ್ಬಿಸತೊಡಗಿದರು. ಇದರ ಪರಿಣಾಮವಾಗಿ ಇವನ ಹಿರಿಯ ಮಗನೇ ಇವನನ್ನು ಸಂಹರಿಸಿದನು. ಇದರಿಂದ ದರಬಾರದ ಸರದಾರರೂ ಸೈನಿಕರೂ ಅಮಾತ್ಯರು ಮೊದಲ್ಗೊಂಡು ಪೆದ್ದರಾಯನನ್ನು ತಳ್ಳಿ ತಮ್ಮಲ್ಲಿಯ ಓರ್ವ ಯೋಧನನ್ನು ಸಾಳುವ ನರಸಿಂಹನನ್ನು ಪಟ್ಟಕ್ಕೆ ತಂದರು. ಈ ನರಸಿಂಹನು ಪೆದ್ದರಾಯನಿಗೆ ರಕ್ತ ಸಂಬಂಧಿಕನೂ ಆಗಬೇಕು.

ನರಸಿಂಹನು ಸ್ವತಃ ಪರಾಕ್ರಮಶಾಲಿಯೂ ಪ್ರಜಾಪ್ರಿಯನೂ ಆಗಿ ವೈಭವದಿಂದ ರಾಜ್ಯವಾಳಿದನು. ಇ. ಸ. ೧೪೮೦ರಲ್ಲಿ ಇವನಿಗೆ ಪಟ್ಟಗಟ್ಟಲ್ಪಟ್ಟಿತು. ಆಗಿನ ಕಾಲದಲ್ಲಿ ಇವನಷ್ಟು ಬಲಾಢ್ಯನಾದ ರಾಜನು ಇಡೀ ದಕ್ಷಿಣ ಹಿಂದುಸ್ಥಾನದಲ್ಲಿಯೇ ಯಾರೂ ಆಳಿದ್ದಿಲ್ಲವೆಂದು ಡಾ. ಬರ್ನೆಲ್ಲ ಎಂಬವನು ಬರೆಯುತ್ತಾನೆ. ಸಂಗಮ ವಂಶಕ್ಕೂ ಸಾಳುವ ವಂಶಕ್ಕೂ ಯಾವ ರೀತಿಯಾದ ಬಾಂಧವ್ಯವುಂಟಾಗಿತ್ತೆಂಬ ಬಗ್ಗೆ ಈ ವರೆಗೂ ಸಂಶೋಧನೆಯಾಗಿಲ್ಲ ಸಾಳುವಂಶದ ವೀರನಾದ ನರಸಿಂಹನು ಅಂತೂ ವಿಜಯನಗರದ ಸಿಂಹಾಸನಾಧಿಪತಿಯಾದದ್ದು ನಿಜವೆಂದು ಎಲ್ಲ ಇತಿಹಾಸಕಾರರೂ ಒಪ್ಪುತ್ತಾರ. ಇವನು ೧೪೮೬ರಲ್ಲಿ "ಮಹಾರಾಜ" ಎಂಬ ಬಿರುದನ್ನು ಧರಿಸಿದನು. ವಿಜಯನಗರದ ಹರಿದು ಹಂಚಿಹೋದ ಎಲ್ಲ ಪ್ರದೇಶವನ್ನು ತನ್ನ ಉದ್ದಂಡ ಪರಾಕ್ರಮದಿಂದ ನರಸಿಂಹರಾಯನು ಒಟ್ಟುಗೂಡಿಸಿ ಒಂದು ಘಟಕವನ್ನಾಗಿ ಮಾಡಿದನು, ಇವನ ಆಳಿಕೆಯಲ್ಲಿ ಮುಸಲ್ಮಾನರ ಪುಂಡಾಟಿಕೆಗಳೆಲ್ಲವನ್ನೂ ಸದೆಬಡೆಯಲಾಯಿತು.

ನರಸಿಂಹ ಮತ್ತು ವೀರನರಸಿಂಹರು ೧೫೦೯ರ ವರೆಗೆ ಆಳಿದರು. ಆಮೇಲೆ ಕೃಷ್ಣದೇವರಾಯನು ಪಟ್ಟವೇರಿದನು. ಅವನು ೧೫೩೦ರ ವರೆಗೆ ಆಳಿದನು. ಅವನ ತರುವಾಯ ಅಚ್ಯುತರಾಯನು ೧೫೪೨ರ ವರೆಗೆ ಆಳಿದನು. ಇವನ ತರುವಾಯ ಬಂದವರು ಸದಾಶಿವರಾಯನು. ಸದಾಶಿವನ ಮಹಾಮಂತ್ರಿಯಾದ ರಾಮರಾಯನು ಸರ್ವಾಧಿಕಾರವನ್ನು ತಾನೇ ವಹಿಸಿಕೊಂಡು, ಸದಾಶಿವರಾಯನನ್ನು ಕೇವಲ ಗೊಂಬೆಯಂತೆ ಕುಣಿಸುತ್ತಿದ್ದನು.

ತಿರುಮಲ ಮತ್ತು ವೆಂಕಟಾದ್ರಿ ಎಂಬವರು ರಾಮರಾಯನ ತಮ್ಮಂದಿರು. ಈ ಮೂವರು ಅಣ್ಣ-ತಮ್ಮಂದಿರು ವಿಜಯನಗರದ ರಾಜಸೂತ್ರಗಳನ್ನು ತಮ್ಮ ಕೈಯಲ್ಲಿ ಸಂಪೂರ್ಣವಾಗಿ ತೆಗೆದುಕೊಂಡು ಇ. ಸ. ೧೫೬೫ರ ವರೆಗೆ ತಾವೇ ರಾಜ್ಯವಾಳಿದರು. ಕೊನೆಗೆ ಇ. ಸ. ೧೫೬೫ರಲ್ಲಿ ಐದೂ ಮುಸಲ್ಮಾನ ರಾಜ್ಯಗಳು ಒಟ್ಟಾಗಿ ವಿಜಯನಗರದ ಮೇಲೆ ಏರಿ ಬಂದವು. ತಾಳಿಕೋಟಿ ಎಂಬ ಗ್ರಾಮದ ಮೈದಾನದಲ್ಲಿ ಭೀಕರ ಸಂಗ್ರಾಮವೆಸಗಿ, ಹಿಂದುಗಳು ಸಂಪೂರ್ಣವಾಗಿ ಪರಾಜಿತರಾದರು. ವಿಜಯನಗರವು ನೆಲಸಮ ವಾಯಿತು. ಹಿಂದೂ ರಾಜ್ಯದ ಸೂರ್ಯನು ಅಸ್ತಂಗತನಾದನು.

ನರಸಿಂಹರಾಯನು ವಿಜಯನಗರವನ್ನು ೪೪ ವರುಷ ಆಳಿ, ತೀರಿದನು. ಇವನ ತರುವಾಯದಲ್ಲಿ ಬರತಕ್ಕ ಇವನ ಈರ್ವರು ಗಂಡು ಮಕ್ಕಳು ಇನ್ನೂ ಬಾಲಕರಿದ್ದರು. ಆದುದರಿಂದ ರಾಜ್ಯದ ಸೂತ್ರವನ್ನೆಲ್ಲ ತನ್ನ ಪ್ರಧಾನ ಅಮಾತ್ಯ ನರಸನೆಂಬುವನ ಕೈಯಲ್ಲಿತ್ತು ಸತ್ತನು. ನರಸನು ತಾನೇ ಸಿಂಹಾಸನವನ್ನು ಆಕ್ರಮಿಸಿ ಸಾಯುವವರೆಗೆ ತಾನೇ ರಾಜನೆಂದು ಆಳಿದನು. ಇವನ ಮಗನಾದ ಭುಜಬಲರಾಯನು ನರಸನ ತರುವಾಯ ಪಟ್ಟವೇರಿದನು. ಆರು ವರ್ಷ ರಾಜ್ಯವಾಳಿದ ತರುವಾಯ ಇವನ ತಮ್ಮ ನಾದ ಕೃಷ್ಣದೇವರಾಯನು ಸಿಂಹಾಸನಾಧಿಪತಿಯಾದನು. ಅದು ೧೫೦೯ರಲ್ಲಿ.

ಬಿಜಾಪುರದಲ್ಲಿ ತಾನು ಸ್ವತಂತ್ರನೆಂದು ಸಾರಿದ (೧೪೮೪) ಆದಿಲ್ ಶಹನ ಚಟುವಟಿಕೆಯನ್ನು ಸಹಿಸದೇ ಅಹಮ್ಮದಾಬಾದ ಸುಲ್ತಾನನಾದ ಕಾಶೀಮ ಬರೀದನು ಆದಿಲ್‌ಶಹನನ್ನು ಬಗ್ಗುಬಡಿಯಲು ವಿಜಯನಗರದ ನರಸಿಂಹರಾಯನ ಸಹಾಯವನ್ನು ಯಾಚಿಸಿದನು. ಹಾಗೆ ಸಹಾಯ ವಿತ್ತರೆ ಮುದಗಲ್ಲ, ರಾಯಚೂರ ಕೋಟೆಗಳನ್ನು ಕೊಟ್ಟುಬಿಡುವದಾಗಿ ವಚನ ವಿತ್ತನು. ನರಸಿಂಹರಾಯನು ಪ್ರಚಂಡವಾದ ಸೈನ್ಯದೊಂದಿಗೆ ಬಿಜಾಪುರದ ವಿರುದ್ಧ ದಂಡಯಾತ್ರೆಯನ್ನು ಕೈಕೊಂಡು ತುಂಗಭದ್ರಾ ದಾಟಿಸಾಗಿದನು. ಮುದಗಲ್ಲ ರಾಯಚೂರ ಕೋಟೆಗಳನ್ನು ಸ್ವಾಧೀನಪಡಿಸಿಕೊಂಡದ್ದಲ್ಲದೇ

ಅವೆರಡರ ನಡುವಿನ ವಿಸ್ತಾರವಾದ ಪ್ರದೇಶವು ಕೂಡ ಹಿಂದೂ ಆಡಳಿತಕ್ಕೆ ಒಳಪಟ್ಟವು.

ಬಿಜಾಪುರದ ಆದಿಲಶಹನ ಆಳಿಕೆಯಲ್ಲಿ ಗೋವಾ ಪ್ರಾಂತವು ಮಾತ್ರ ಬಿಜಾಪುರದ ವಶಕ್ಕೆ ಹೋಯಿತು. ಪೋರ್ಚಗೀಜ ಸರದಾರನಾದ ಅಬ್ಬುಲ್ ಕರ್ಕನು ಗೋವೆಗೆ ೧೫೧೦ ಮಾರ್ಚ ತಿಂಗಳಲ್ಲಿ ಬಂದನು. ಅಹಮ್ಮದ ನಗರ ರಾಜ್ಯಸ್ಥಾಪಕನಾದ (೧೪೯೦ರಲ್ಲಿ) ಅಹಮ್ಮದನಾಯರುಮಶಹನು ಇ. ಸ. ೧೫೦೮ರಲ್ಲಿ ತೀರಿದನು. ಅವನ ತರುವಾಯ ಅವನ ಮಗ ಎಂಟು ವರುಷದ ಬಾಲಕನ ಬಹ್ರಾಸ್‌ಶಹನು ಪಟ್ಟವೇರಿದನು. ಯುಸೂಫ ಆದಿಲ್ಲ ಶಹನು ೧೫೧೧ರಲ್ಲಿ ಸತ್ತನು. ಇಸ್ಮಾಯಿಲ್ಲಶಹ (ಅವನ ಮಗ) ಬಿಜಾಪುರ ಪಟ್ಟವನ್ನೇರಿದನು. ಇ. ಸ. ೧೫೦೯ರಲ್ಲಿ ಕೃಷ್ಣದೇವರಾಯನು ವಿಜಯ ನಗರದ ರಾಜಾಧಿರಾಜನಾದನು. ವಿಜಾಪುರದವರಿಗೂ ವಿಜಯನಗರದವ ರಿಗೂ ಮೇಲಿಂದ ಮೇಲೆ ಕದನಗಳಾಗುತ್ತಿದ್ದವು. ಆದರೆ ರಾಯಚೂರ ಯುದ್ಧದಲ್ಲಿ ವಿಜಾಪೂರದವರು ಪೂರ್ಣ ಮೆತ್ತಗಾಗಿ ತಮ್ಮಷ್ಟಕ್ಕೆ ತಾವು ಇರತೊಡಗಿದರು.

ಈ ಕಾಲಕ್ಕೆ ಪೋರ್ಚುಗಾಲದಿಂಡ ಕ್ರಿಶ್ಚನ್ನರು ಹಿಂದುಸ್ಥಾನಕ್ಕೆ ಬಂದದ್ದು ಗೋವೆಯನ್ನು ಆಕ್ರಮಿಸಿದ್ದು ಕೆಲವರಂತೂ ವಿಜಯನಗರದಲ್ಲಿ ಸ್ಥಿರವಾಗಿ ನೆಲಸಿದ್ದು ಮನೋಹರವಾದ ವಿಷಯವಾಗಿದೆ.

## ಪೋರ್ಚುಗೀಜರ ಆಗಮನ

ಇ. ಸ. ೧೪೮೪ರ ಸುಮಾರಕ್ಕೆ ಪೋರ್ಚುಗಾಲವನ್ನು ಆಳುತ್ತಿದ್ದ ಕಿಂಗಜಾನ ಎಂಬವನು ಅತಿದೂರ ಪೂರ್ವದ ದೇಶಗಳು ಅತ್ಯಂತ ಸಿರಿವಂತ ವಿರುವವೆಂದು ಅಲ್ಲಿ ವ್ಯಾಪಾರೋದ್ಯೋಗ ಮಾಡಿದರೆ ಲಾಭವಾಗುವದೆಂದೂ ವಿಷಯಗ್ರಹಿಸಿ ಅಲ್ಲಿಗೆ ಕೆಲವರನ್ನು ಕಳಿಸಬೇಕೆಂಬ ವಿಚಾರದಿಂದ ಮೂರು ದೊಡ್ಡ ಹಡಗಗಳನ್ನು ಕಟ್ಟಿಸಲು ಪ್ರಾರಂಭಿಸಿದನು. ಆದರೆ ಅವನು ಬೇಗ ತೀರಿಕೊಂಡನು. ಇವನ ತರುವಾಯ ಪಟ್ಟಕ್ಕೆ ಬಂದಂಥ

ಡಾಂವ್ಯಾನ್ಸ್ಯವಲ್ಲ ಎಂಬವನು ಮೂರುಹಡಗುಗಳನ್ನು ಸಿದ್ಧಪಡಿಸಿ ವಾಸ್ಕೊಡಿಗಾಮಾ ಮತ್ತು ಅವನ ತಮ್ಮನಾದ ಪಾಲ್ ಎಂಬವನನ್ನೂ ವ್ಯಾಪಾರಕ್ಕಾಗಿ ಹಡಗುಗಳ ಸಹಿತವಾಗಿ ಕಳಿಸಿಕೊಟ್ಟನು. ಅವರು ಹೇರಳವಾದ ಸಾಮಗ್ರಿಗಳೊಡನೆ ಆಫ್ರಿಕಾ ಖಂಡವನ್ನು ಸುತ್ತರಿದು ಕೇಪ ಆಫ್ ಗ ಡ್‌ಹೋಪದ ಮೇಲಿಂದ ಹಿಂದುಸ್ತಾನಕ್ಕೆ ಬಂದರು. ಅವರು ಪೋರ್ಚುಗಾಲವನ್ನು ೧೪೯೭ ಜುಲೈ ೮ನೇ ತಾರೀಖಿನ ದಿವಸ ಬಿಟ್ಟರು. ಹಿಂದ ಸ್ಥಾನದ ಕಾಲಿಕತ್ತನ್ನು ೧೪೯೭ ಆಗಷ್ಟ ೨೬ಕ್ಕೆ ಬಂದು ಮುಟ್ಟಿದನು. (ಬರೋಜನು ಮೇ ೨೦ ಎಂದು ಹೇಳಿದ್ದಾನೆ)

ಆ ಕಾಲಕ್ಕೆ ಕಾಲಿಕತ್ತನ್ನು ಝಾಮೋರಿನ ಎಂಬವನು ಆಳುತ್ತಿದ್ದನು. ವಾಸ್ಕೋಡಿಗಾಮಾ ಮಂಡಲಿಯನ್ನು ಸ್ನೇಹದಿಂದಲೂ ಪ್ರೀತಿಯಿಂದಲೂ ಸ್ವಾಗತಿಸಿದರೂ ಕೂಡ ಅವರೀರ್ವರಲ್ಲಿ ಭಿನ್ನಾಭಿಪ್ರಾಯಗಳು ಬಹುಬೇಗ ಉಂಟಾದ್ದರಿಂದ ನಿಕಟ ಸಂಬಂಧವಾಗಲೀ ವ್ಯಾಪಾರಿ ಸಂಬಂಧವಾಗಲೀ ಬೆಳೆಯಲಿಲ್ಲ. ವಾಸ್ಕೋಡಿಗಾಮಾನು ಪೋರ್ಚುಗಾಲಕ್ಕೆ ಕೆಲವೇಕಾಲದ ನಂತರ ಹಿಂತಿರುಗಿದನು. ಇ. ಸ ೧೫೦೦ ಕ್ಯಾಬ್ರೆಲ್ಲ ಎಂಬವನು ದೊಡ್ಡ ಹಡಗಪಡೆಯೊಂದಿಗೆ ಹಿಂದುಸ್ತಾನಕ್ಕೆ ಬಂದು ಕಾಲೀಕತ್ತದ ರಾಜನೊಡನೇ ಸ್ನೇಹದಿಂದಿರುವದನ್ನು ಬಿಟ್ಟು ಜಗಳವನ್ನೇ ತೆಗೆದು ಹೊಡೆದಾಟ ಪ್ರಾರಂಭಿಸಿದನು. ಅವನು ಸಹ ತಿರುಗಿದನು. ಇ. ಸ. ೧೫೦೪ ಅಕ್ಟೋಬರ ೨೯ರಲ್ಲಿ ವಾಸ್ಕೋಡಿಗಾಮಾನು ಪುನಃ ಕಾಲೀಕತ್ತಕ್ಕೆ ತುಸು ಸೈನ್ಯದೊಡನೇ ಬಂದವನೇ ಬಾಂಬು ಗುಂಡುಗಳನ್ನು ನಾಗರಿಕರ ಮೇಲೆ ಎಸೆಯತೊಡಗಿದನು. ಕೈಗೆ ಸಿಕ್ಕವರನ್ನು ನಿರ್ದಯದಿಂದ ಕೊಲ್ಲುತ್ತಾ ಸಾಗಿದನು. ಒಂದೇದಿವಸ ಎಂಟುನೂರು ನಿರಪರಾಧಿನಾಗರಿಕರನ್ನು ಕೊಂದು ಸಮುದ್ರದಲ್ಲಿ ಎಸೆಯಿಸಿದನು. ಕೋಚೀನದ ರಾಜನು ಪೋರ್ಚುಗೀಜರಿಗೆ ಎಲ್ಲ ಸವಲತ್ತು ಮತ್ತು ಅನಕೂಲತೆಗಳನ್ನು ಕೊಟ್ಟರೂ ಸಹ ನೀಚರಾದ ಈ ಜನರು ಹಿಂದೂ ಜನತನ್ನು ಹಿಂಸಿಸಿ ದೇಶವನ್ನು ಆಕ್ರಮಿಸಿದರು.

ಇ. ಸ. ೧೫೦೫ ಹಿಂದುಸ್ಥಾನದ ಭೂಮಿಗೆ ವ್ಹಾಯಿಸರಾಯನೆಂದು ಪೋರ್ಚುಗಾಲದಿಂದ ನೇಮಕನಾದ ಅಲ್ಮೇಡಾ ಎಂಬವನು ೧೫ ನೂರು

ಪೋರ್ಚುಗೀಜ ಸೈನಿಕರೊಡನೆ ಹಿಂದುಸ್ಥಾನದಲ್ಲಿಳಿದುಯುದ್ಧ ಮಾಡತೊಡ ಗಿದನು. ಹೊನ್ನಾವರವನ್ನು ಹಿಡಿದುಕೊಂಡನು. ಆದರೆ ಪ್ರಬಲನಾದ ನರಸಿಂಹರಾಯನು ಸಿಟ್ಟಿಗೆದ್ದರೆ ತನ್ನ ಉಳಿಗಾಲವಿಲ್ಲವೆಂದು ನೆನೆಸಿ ಅದನ್ನು ಅಲ್ಲಿಗೇ ನಿಲ್ಲಿಸಿದನು. ತಾನು ಹಿಂದೂ ಜನರೊಂದಿಗೆ ಕಾದಲು ಬಂದಿಲ್ಲ ವೆಂದೂ ಶಾಂತರೀತಿಯಿಂದಲೂ ಪ್ರೀತಿಯಿಂದಲೂ ಇಲ್ಲಿ ವಾಸಿಸಿ ವ್ಯಾಪಾರ ಮಾಡುವೆನೆಂದೂ ಆವೇಶವನ್ನು ಹೊರಡಿಸಿ ಪ್ರಸಿದ್ಧಿಸಿದನು. ಭಟಕಳದಲ್ಲಿ ತನ್ನ ವ್ಯಾಪಾರಕ್ಕಾಗಿ ಮತ್ತು ಸಾಮಗ್ರಿ ರಕ್ಷಣೆಗಾಗಿ ಒಂದು ಕೋಟೆಯನ್ನು ಕಟ್ಟಲು ನರಸಿಂಹರಾಯನ ಪರವಾನಿಗೆಯನ್ನು ಕೇಳಿದನು. ಆದರೆ ಅದು ದೊರೆಯಲಿಲ್ಲ.

ಪೋರ್ಚುಗೀಜರ ಪ್ರಜೆಯಾದ ವರ್ತಮಾ ಎಂಬವನು ವಿಜಯನಗ ರಕ್ಕೆ ದರ್ಶನವನ್ನಿತ್ತು ಅದನ್ನು ಈ ಪ್ರಕಾರ ಬಣ್ಣಿಸಿದ್ದಾನೆ: ಇದು ಬಹು ವಿಶಾಲವಾದ ನಗರವು ಇದರ ಸುತ್ತಲೂ ಭದ್ರವಾದ ದಪ್ಪವಾದ ಎತ್ತರವಾದ ಕೋಟೆ ಗೋಡೆಗಳಿರುತ್ತವೆ. ಈ ನಗರದ ವ್ಯಾಸವು ೭ಮೈಲು ಇರುವದು ಇಲ್ಲಿಯ ನಾಗರಿಕರು ಅತ್ಯಂತ ಸಿರಿವಂತರಿರುವರು. ಹವೆಯು ಸರ್ವೋ ತ್ಕೃಷ್ಟವಿದೆ. ಸೃಷ್ಟಿಸೌಂದರ್ಯವು ಅವರ್ಣನೀಯವಾಗಿದೆ. ರಾಜನಲ್ಲಿ ೪೦ ಸಾವಿರ ಕುದುರೆ ಮತ್ತು ಕುದುರೆ ಸವಾರರೂ ೪ ನೂರು ಆನೆಗಳೂ ಸದಾ ಸಿದ್ಧವಾಗಿರುವವು. ಒಂದೊಂದು ಆನೆಯು ಆರಾರು ಯೋಧರನ್ನು ಒಯ್ಯ ಬಲ್ಲದು. ಯೋಧರು ಉದ್ದವಾದ ತೀಕ್ಷ್ಣವಾದ ಖಡ್ಗವನ್ನು ಟೊಂಕಕ್ಕೆ ನೇತುಬಿಟ್ಟಿರುತ್ತಾರೆ. ರಾಜನು ಅತ್ಯಮೂಲ್ಯವಾದ ವಜ್ರ ವೈಢೂರ್ಯ ಮೊದ ಲಾದ ಸಕಲ ರತ್ನಗಳಿಂದ ಕೆತ್ತಿದ ಬಂಗಾರದ ಕಿರೀಟವನ್ನು ಧರಿಸಿರುತ್ತಾನೆ ಅವನ ಸವಾರಿ ಮಾಡುತ್ತಿರುವ ಪಟ್ಟದ ಕುದುರೆಯು ಮತ್ತು ಅದಕ್ಕೆ ಅಲಂ ಕಾರ ಮಾಡಿದ ಆಭರಣಗಳ ಬೆಲೆಯು ನಮ್ಮಲ್ಲಿಯ (ಪೋರ್ಚುಗಾಲದ) ಅನೇಕ ಶಹರಗಳ ಬೆಲೆಯಷ್ಟು ಆಗುವದು.

ಇರಲಿ, ಪೋರ್ಚುಗೀಜರೊಡನೆ ನಡೆಸಿದ ಯುದ್ಧದಲ್ಲಿ ಕಾಲಿಕತ್ತವು ಪೂರ್ಣವಾಗಿ ನಾಶವಾಗಿ ಹೋಯಿತು. ಮುಂದೆ ಕಾಲಿಕತ್ತದ ಮುಸಲ್ಮಾ

ನರು ಪೋರ್ಚುಗೀಜ ವ್ಯಾಪಾರಸ್ಥರನ್ನು ಹಿಡಿದು ತುಂಡರಿಸಿಬಿಟ್ಟರು. ಇನ್ನು ಇಲ್ಲಿ ಇದ್ದು ಉಪಯೋಗವಿಲ್ಲವೆಂದು ಆ ಸ್ಥಳಬಿಟ್ಟು ಪೋರ್ಚುಗೀಜರು ದಕ್ಷಿಣ ಸಮುದ್ರದ ದಂಡೆಗುಂಟ ಸಾಗಿ ಬೇರೆ ಕಡೆಗೆ ಹೋದರು. ಇ. ಸ. ೧೫೦೩ನೇ ಮಾರ್ಚ ತಿಂಗಳಲ್ಲಿ ಪೋರ್ಚುಗೀಜರು ಪುನಃ ಕಾಲೀಕತ್ತನ್ನು ಮುತ್ತಿ ರಾಜನ ಸೈನಿಕರನ್ನೆಲ್ಲ ನಿರ್ದಯದಿಂದ ಚಂಡಾಡಿದರು. ಅವನ ಚಿಕ್ಕ ಚಿಕ್ಕ ಬೋಟುಗಳನ್ನೆಲ್ಲವನ್ನೂ ಮುರಿದು ಹಾಕಿದರು. ಇದರಿಂದ ತ್ರಸ್ತನಾದ ರಾಜನು ಮರುವರುಷವೇ ಪೋರ್ತುಗೀಜರ ವಶದಲ್ಲಿದ್ದ ಕನ್ನೂರನ್ನು ಮುತ್ತಿ ಅಲ್ಲಿಯ ಅವರ ಸರಕುಗಳನ್ನೆಲ್ಲ ವಶದಲ್ಲಿ ಮಾಡಿಕೊಳ್ಳುವದರಲ್ಲಿದ್ದನು. ಆದರೆ ವೇಳೆಗೆ ಪೋರ್ಚುಗಾಲದಿಂದ ಹೊಸ ಸೈನ್ಯದೊಂದಿಗೆ ಟ್ರಿಷ್ಟನ್ನು ಡಿ. ರುನ್ಹಾ ಎಂಬವನು ಬಂದಿಳಿದದ್ದರಿಂದ ಅದು ಉಳಿದುಕೊಂಡಿತು. ೧೫೦೭ರಲ್ಲಿ ಅಲ್ಮೈಡಾನು ಮತ್ತೆ ಹೊಸ ಸೈನ್ಯದೊಂದಿಗೆ ಇಳಿದು ಕಾಲಿಕತ್ತಕ್ಕೆ ಮುತ್ತಿಗೆ ಹಾಕಿ ತುಸು ಮಟ್ಟಿಗೆ ಯಶ ದೊರೆಸಿದನು. ೧೫೦೯ರಲ್ಲಿ ಪುನಃ ಅಬುಲ್‌ಕರ್ಕನು ಹಿಂದೂ ಪೋರ್ಚುಗೀಜ ವಸಾಹತಿನ ಗವ್ಹರ್ನರನಾಗಿ ಬಂದನು. ಇದೇ ಕಾಲಕ್ಕೆ ವಿಜಯನಗರದ ಸಿಂಹಾಸನವನ್ನು ಶ್ರೀ ಕೃಷ್ಣದೇವರಾಯನು ಏರಿದನು.

---

## ೭. ಕೃಷ್ಣದೇವರಾಯ (೧೫೦೯ ರಿಂದ ೧೫೩೦)

ಕೃಷ್ಣದೇವರಾಯನು ಪಟ್ಟಕ್ಕೆ ಬಂದ ಕೆಲವೇ ಕಾಲದಲ್ಲಿ ಪಂಪಾಪತಿ ದೇವಾಲಯದಲ್ಲಿ ಒಂದು ಸಭಾಮಂಟಪವನ್ನೂ ದೇವಾಲಯಕ್ಕೆ ಒಂದು ಮನೋಹರವಾದ ಮತ್ತು ಉನ್ನತವಾದ ಗೋಪುರವನ್ನೂ ಕಟ್ಟಿಸಿದನು ಅ

ರುವ ಒಂದು ಶಿಲಾಲೇಖದಲ್ಲಿ ಇವೆರಡೂ ಸಿದ್ಧವಾಗಿದ್ದು ಶಾ. ಶ. ೧೪೩೧ನೇ ಮಾಘಮಾಸ ಚತುರ್ದಶೀ ದಿವಸವೆಂದು ಉಲ್ಲೇಖವಾಗಿದೆ. ಇದೇ ಕಾಲಕ್ಕೆ ಅಂದರೆ ಇ. ಸ. ೧೫೦೯ನೇ ಎಪ್ರಿಲ್ ೨೨ನೇ ತಾರೀಖಿನ ದಿವಸ ೮ನೇ ಹೆನ್ರಿಯು ಇಂಗ್ಲಂಡದ ಸಿಂಹಾಸನವನ್ನು ಏರಿದನು. ಇವೆರಡೂ ರಾಜರೂ ಅತ್ಯಂತ ಪರಾಕ್ರಮಶಾಲಿಗಳಾಗಿದ್ದರು. ಇವರಿಬ್ಬರ ಕಾಲದಲ್ಲಿಯೂ ರಾಜ್ಯವು ಮಹಾಬಲಾಢ್ಯವೂ ವೈಭವಯುಕ್ತವಾದವುಗಳೂ ಆಗಿ ಮೆರೆದವೆಂಬುದು ಇತಿಹಾಸದಲ್ಲಿಯೂ ವಿಚಿತ್ರವಾದ ಸಂದರ್ಭಗಳು.

ಇ. ಸ. ೧೫೨೦ರಲ್ಲಿ ಪಾಯಸ್ ಎಂಬ ಪ್ರವಾಸಿಯು ಸ್ವತಃ ಕೃಷ್ಣದೇವರಾಯನನ್ನೂ ಅವನ ದರಬಾರವನ್ನೂ ಕಣ್ಣಾರೆ ಕಂಡು ವರ್ಣಿಸಿದ್ದಾನೆ. ಕೃಷ್ಣದೇವರಾಯನು ಮಹಾ ಪ್ರಭಾವಶಾಲಿಯೂ ಅತ್ಯಂತ ಶೂರನೂ ವ್ಯವಹಾರ ಮತ್ತು ರಾಜಕಾರಣ ಚತುರನೂ ಇದ್ದನು. ಇವನು ಕೇವಲ ಅಮಾತ್ಯರ ಕೈಗೊಂಬೆಯಾಗಿರಲಿಲ್ಲ. ತನ್ನ ರಾಜತಂತ್ರದಿಂದ ಸ್ವಯಂಪ್ರಭುತ್ವವನ್ನು ನಡೆಸಿದ ವೀರಾಧಿವೀರನಿವ. ಇವನು ರಾಜನೆಂದರೆ ನಿಜವಾದ ರಾಜನು. ವ್ಯಾಯಾಮ ಮತ್ತು ಅಂಗಸಾಧನಗಳಿಂದ ಅವನ ದೇಹವು ಕಲ್ಲಿನಂತಾಗಿದ್ದಿತು. ಆನೆಯಷ್ಟು ದೇಹಸಾಮರ್ಥ್ಯವನ್ನು ತಾರುಣ್ಯದಲ್ಲಿ ಬೆಳೆಸಿಕೊಂಡಿದ್ದನು ಅರುಣೋದಯದಲ್ಲಿಯೇ ಹಾಸಿಗೆಯಿಂದ ಎದ್ದು ಅಂಗಸಾಧನೆಯನ್ನು ಮಾಡುತ್ತಿದ್ದನು. ಕುದುರೆ ಸವಾರಿನಲ್ಲಿ ಅಸಮಾನನಾಗಿದ್ದನು ಮೊಗದ ಮೇಲಿನ ರಾಜವರ್ಚಸ್ಸಿದ್ದೆ, ಎದುರಿಗೆ ಬಂದವರೆಲ್ಲರೂ ತಲೆಬಾಗುತ್ತಿದ್ದರು. ಖಡ್ಗಯುದ್ಧದಲ್ಲಿ ಅಸಮಾನ ನೈಪುಣ್ಯವನ್ನು ಪಡೆದಿದ್ದನು. ಸೇನಾಸಾಗರವನ್ನು ತಾನೇ ಸಾಗಿಸುವ ಅಧಿಪತಿಯಾಗಿದ್ದನು. ಆದರೆ ಅತ್ಯಂತ ಅಂತಃಕರುಣಿಯೂ, ವಿಶಾಲ ಹೃದಯುವೂ ಉದಾರನೂ ಆಗಿದ್ದನು. ಸರ್ವರಿಂದಲೂ ಮಾನಿತನಾಗಿ ಸರ್ವರ ಪ್ರೀತಿಗೂ ಪಾತ್ರನಾಗಿ ಸರ್ವಗುಣ ಪರಿಪೂರ್ಣನಾಗಿ ಶೋಭಿಸುತ್ತಿದ್ದನೆಂದು ಪಾಯಸ್ ಬರೆಯುತ್ತಾನೆ.

ಪ್ರಬಲನೂ ಸರ್ವತ್ರದಲ್ಲಿ ಜಯಶೀಲನೂ ಆಗುತ್ತಲೇ ಸಾಗಿದ್ದರಿಂದ ಕೃಷ್ಣದೇವರಾಯನು ಅತ್ಯಂತ ಹಠಸ್ವಭಾವನವನೂ ಮನೋವೃತ್ತನೂ

ಸೊಕ್ಕಿನವನೂ ಆಗಿ ಮೆರೆದನು. ಮುಸಲ್ಮಾನರನ್ನು ಸೋಲಿಸುತ್ತಲೇಸಾಗುತ್ತಿದ್ದನು, ಸೋತ ಮುಸಲ್ಮಾನ ರಾಜರು ಕೃಷ್ಣದೇವರಾಯನ ಪಾದಕ್ಕೆ ಶಿರವಿಟ್ಟು ನಮಸ್ಕರಿಸಿದರೆ ಅವನನ್ನು ಕ್ಷಮಿಸಿಬಿಡುತ್ತಿದ್ದನು. ಬಿಜಾಪುರದ ಆದಿಲಶಹನಿಂದಲೂ ಒಮ್ಮೆ ರಾಯನು ತನ್ನ ಪಾದಕ್ಕೆ ಅವನ ತಲೆ ಇಡಿಸಿ ನಮಸ್ಕಾರ ಸ್ವೀಕರಿಸಿ ಕ್ಷಮಿಸಿದ್ದನು. ಇಂಥ ಅತ್ಯಂತ ಹೀನವಾದ ಅಪಮಾನದ ಬೆಂಕಿಯಿಂದ ಮುಸಲ್ಮಾನರ ಕುದಿಯುತ್ತಿದ್ದ ಹೃದಯಗಳೇ ನಾಲ್ವತ್ತು ವರುಷಗಳಲ್ಲಿ ವಿಜಯನಗರದ ಪತನಕ್ಕೆ ಕಾರಣವಾಯಿತು. ಏಕೆಂದರೆ ಕೃಷ್ಣದೇವರಾಯನ ತರುವಾಯ ಬಂದ ರಾಜರುಗಳು ಅವನ ಸದ್ಗುಣ ಸಾಮರ್ಥ್ಯವನ್ನು ಹೋಲದೇ ಹಳೆಸ್ವಭಾವ, ಮದ, ಸೊಕ್ಕುಗಳನ್ನು ಮಾತ್ರ ಸ್ವೀಕರಿಸಿ ಉದ್ಧಟತನದಿಂದ ವರ್ತಿಸಿದರು. ಇಡೀ ದಕ್ಷಿಣ ಹಿಂದುಸ್ಥಾನವನ್ನು ಕೃಷ್ಣದೇವರಾಯನು ಪಾದಾಕ್ರಾಂತ ಮಾಡಿಕೊಂಡು ಬಿಟ್ಟಿದ್ದನು. ಶ್ರೀರಂಗಪಟ್ಟಣ, ಬಂಕಾಪೂರ, ಗೆರೆಸೊಪ್ಪಾ, ಕಾಲಿಕತ್ತ, ಭಟಕಳ ಮತ್ತು ಬಾರ್ಕೂರರಾಜರು ಕೃಷ್ಣದೇವರಾಯನ ಪಾದಧೂಳಿಯನ್ನು ತಮ್ಮ ಶಿರದಲ್ಲಿ ಧರಿಸಿಕೊಂಡು ಸುಖವಾಗಿ ಬಾಳಿದ್ದರು.

ಆಗಿನ ಕಾಲಕ್ಕೆ ಬಂಕಾಪೂರವು ಅತ್ಯಂತ ಬಲಾಢ್ಯವಾದ ಕೋಟೆಯಾಗಿತ್ತು. ಅದನ್ನು ಓರ್ವ ಮರಾಠಾ ನಾಯಕನು ಆಳುತ್ತಿದ್ದನು. ಇಡೀ ಕರ್ನಾಟಕ ದೇಶದಲ್ಲಿಯೇ ಅದು ಹೆಸರುವಾಸಿಯಾಗಿತ್ತು. ಧಾರವಾಡದಿಂದ ದಕ್ಷಿಣಕ್ಕೆ ४೦ ಮೈಲು ದೂರದಲ್ಲಿ ಅದು ಇದ್ದು ಹೊನ್ನಾವರದಿಂದ ವಿಜಯನಗರಕ್ಕೆ ಸಾಗಿದ ನೇರವಾದ ಹೆದ್ದಾರಿಯಲ್ಲಿ ಬಂಕಾಪೂರ ಕೋಟೆಯು ಮೆರೆಯುತ್ತಿದ್ದಿತು. ಸೈನ್ಯ ಸಾಗಿಸುವ ಹೆದ್ದಾರಿಯು ಭಟಕಳದಿಂದ ಹೊರಟು ಹೊನ್ನಾವರ ಮಾರ್ಗವಾಗಿ ಸಾಗಿ ಬಂಕಾಪುರಕ್ಕೆ ಬಂದು ಅಲ್ಲಿಂದ ಬನವಾಸಿ ರಾಣೇಬೆನ್ನೂರ ಮೇಲೆ ಹಾಯ್ದು ದೊಡ್ಡ ಮೈದಾನದಾಟಿ ಹೊಸಪೇಟೆಯಿಂದ ವಿಜಯನಗರಕ್ಕೆ ಸಾಗುತ್ತಿತ್ತು. ಇ. ಸ. ೮೪೮ ರಿಂದ ೧೫೭೩ರ ವರೆಗೆ ಬಂಕಾಪುರವು ಹಿಂದೂ ರಾಜರ ಸ್ವಾಧೀನದಲ್ಲಿಯೇ ಇದ್ದಿತು. ೧೫೭೩ರಲ್ಲಿ ಬಿಜಾಪುರದ ಸುಲ್ತಾನನು ಬಂಕಾಪುರವನ್ನು ಸ್ವಾಧೀನಪಡಿಸಿಕೊಂಡನು. ಅಲ್ಲಿರುವ ಸುಂದರವೂ ಸಿರಿವಂತವೂ ಆದ ದೇವಾಲಯವನ್ನು

ನಾಶಮಾಡಿ ನೆಲಸಮ ಮಾಡಿಬಿಟ್ಟನು. ಅಂದಿನಿಂದ ಬಂಕಾಪುರವು ಬಿಜಾಪುರದವರ ವಶದಲ್ಲಿಯೇ ಇತ್ತು. ಈಗ ಅದನ್ನು ಕೃಷ್ಣದೇವರಾಯನು ಪುನಃ ಸ್ವಾಧೀನಪಡಿಸಿಕೊಂಡು ಹಿಂದೂ ನಾಯಕನೊಬ್ಬನನ್ನು ಆಡಳಿತಗಾರನನ್ನಾಗಿ ನೇಮಿಸಿದನು.

ಕೃಷ್ಣದೇವರಾಯನು ಸಾಳುವ ತಿಮ್ಮನನ್ನು ತನ್ನ ಮುಖ್ಯಮಂತ್ರಿಯನ್ನಾಗಿ ನೇಮಿಸಿಕೊಂಡನು. ತನ್ನ ಮೂವರು ತಮ್ಮಂದಿರನ್ನೂ ತನ್ನ ತಂಗಿಯ ಮಗನನ್ನೂ ಚಂದ್ರಗಿರಿ ಕೋಟೆಗೆ ಕಳಿಸಿಕೊಟ್ಟನು. ಚಂದ್ರಗಿರಿ ಕೋಟೆಯು ವಿಜಯನಗರದಿಂದ ೨೫೦ ಮೈಲು ದೂರದಲ್ಲಿ ಆಗ್ನೇಯ ದಿಕ್ಕಿನಲ್ಲಿದೆ. ಚಂದ್ರಗಿರಿಯಲ್ಲಿ ಭವ್ಯವಾದ ಸೈನ್ಯವನ್ನಿಟ್ಟು ರಾಜ್ಯವನ್ನು ಕಾಪಾಡಿಕೊಂಡು ಹೋಗುವದಕ್ಕೆ ಅವರನ್ನು ಅಲ್ಲಿಗೆ ಕಳಿಸಿದನು. ತಾನು ಮಾತ್ರ ರಾಜಧಾನಿಯಲ್ಲಿಯೇ ಉಳಿದನು.

ಅಬುಲ್‌ಕರ್ಕನು ವಿಜಯನಗರಕ್ಕೆ ತನ್ನ ವಿಶೇಷದೂತನಾದ ಫ್ರಾಂಕ ಲೂಯಿಃ ಎಂಬವನನ್ನು ಕಳಿಸಿ ಸಂದೇಶವನ್ನು ಅರುಹಿದ್ದನು. ಕಾಲಿಕತ್ತದ ಝಾಮೋರೀನ್ ತನಗೆ ತ್ರಾಸು ಬಹಳವಾಗಿದೆಯೆಂದೂ ಅದಕ್ಕಾಗಿ ರಾಯನು ಸೈನ್ಯದೊಂದಿಗೆ ಕಾಲಿಕತ್ತನ್ನು ಭೂಮಿಯ ಮೇಲೆ ಮುತ್ತಬೇಕೆಂದೂ ಅದೇ ವೇಳೆಗೆ ತಾನು ಪೋರ್ಚುಗೀಜ ಸೈನ್ಯದೊಂದಿಗೆ ಸಮುದ್ರದಿಂದ ಮುತ್ತುವೆನೆಂದೂ ಸಹಾಯ ಕೋರಿದನು. ತಾನು ಹಿಂದೂ ಜನರ ಮಿತ್ರನೆಂದೂ ಮುಸಲ್ಮಾನರನ್ನು ಸಂಹರಿಸುವದೇ ತನ್ನ ಇಚ್ಛೆಯೆಂದೂ ಎತ್ತಿತೋರಿಸಿ ಸಹಾಯ ನೀಡಿದಕ್ಕೆ ಪ್ರತಿಫಲವೆಂದು ಇನ್ನುಮುಂದೆ ಅರಬಸ್ಥಾನದ ಕುದುರೆಗಳನ್ನೆಲ್ಲ ವಿಜಯನಗರಕ್ಕೆ ಮಾರುವದಾಗಿಯೂ ಬಿಜಾಪೂರ ಅಥವಾ ಮತ್ತಾವುದೇ ಮುಸ್ಲಿಮರಿಗೆ ಕುದುರೆಗಳನ್ನು ಮಾರುವದಿಲ್ಲವೆಂದು ವಚನ ಹೇಳಿಕಳಿಸಿದ್ದನು. ಆದರೆ ಕೃಷ್ಣದೇವರಾಯನು ಈ ನೀಚ ಪೋರ್ಚುಗೀಜರ ಮಾತಿಗೆ ಮರುಳಾಗುವಂಥವನಾಗಿರಲಿಲ್ಲ. ಲೂಯಿಯು ಬಂದದಾರಿಗೆ ಸುಂಕವಿಲ್ಲದೇ ಹಿಂತಿರುಗಿದನು.

ಬಿಜಾಪೂರದ ಅಲಿಆದಿಲಶಹನ ವಶದಲ್ಲಿ ಆಗ ಉಳಿದಿದ್ದ ಗೋವಾದ ಅಬುಲ್‌ಕರ್ಕನು ದಂಡಯಾತ್ರೆ ಕೈಕೊಂಡು ಅದನ್ನು ಸ್ವಾಧೀನಪಡಿಸಿಕೊಂಡನು. ಇ. ಸ. ೧೫೧೦ ಮಾರ್ಚ ತಿಂಗಳಲ್ಲಿ ಅಬುಲ್‌ಕರ್ಕನು ಅತ್ಯಂತ ವೈಭವದಿಂದ ಗೋವೆಯನ್ನು ಪ್ರವೇಶಿಸಿದನು. ಆಗ ಮತ್ತೊಮ್ಮೆ ಮತ್ತೊಬ್ಬ ದೂತನಾದ ಗಾಸ್ಪರ್ ಚನೋಕಾನನ್ನು ವಿಜಯನಗರಕ್ಕೆ ಅಬುಲ್‌ಕರ್ಕನು ಕಳುಹಿಸಿ ಭಟಕಳ ಗೆಲ್ಲುವದಕ್ಕಾಗಿ ಸಹಾಯವನ್ನು ಯಾಚಿಸಿದನು. ಕೃಷ್ಣದೇವರಾಯನು ಚನೋಕಾನನ್ನು ಮರ್ಯಾದೆಯಿಂದ ಕಂಡನು ಆದರೆ ಯಾವ ತರಹದ ಸಹಾಯ ನೀಡಲೂ ಸಾಧ್ಯವಿಲ್ಲವೆಂದು ಹೇಳಿಕಳುಹಿಸಿದನು. ಏಕೆಂದರೆ ಅದೇ ತುಸುಕಾಲದ ಪೂರ್ವದಲ್ಲಿ ಅಲಿಆದಿಲಶನ ಕೂಡ ಕೃಷ್ಣದೇವರಾಯ ಶಾಂತಿ ಒಪ್ಪಂದವನ್ನು ಮಾಡಿಕೊಂಡಿದ್ದನು. ಗೋವೆಯನ್ನು ಅಲಿಆದೀಲಶಹನು ಪುನಃ ಪಡೆಯುವದಕ್ಕಾಗಿಯೇ ಈ ಶಾಂತಿ ಒಪ್ಪಂದವು ಇದ್ದಿರಬೇಕೆಂದು ಗೊತ್ತಾಗುವದು.

ಅದರಂತೆ ಬಿಜಾಪುರದವರು ಮೇ ತಿಂಗಳಲ್ಲಿಯೇ ಗೋವೆಯನ್ನು ಮುತ್ತಿದರು. ಜಯ ದೊರಕಿಸಲು ಅಖಂಡವಾದ ಪ್ರಯತ್ನವನ್ನು ಮಾಡಬೇಕಾಯಿತು. ಅಬುಲ್‌ಕರ್ಕನು ಗೋವೆಯಲ್ಲಿದ್ದ ೧೫೦ ಪ್ರಮುಖ ಮುಸಲ್ಮಾನರನ್ನು ಸಂಹರಿಸಿ ಗೋವೆಯನ್ನು ಬಿಟ್ಟು ತೆರಳಿದನು. ರಸುಲಖಾನನೆಂಬವನನ್ನು ಗೋವೆಯ ಆಡಳಿತ ನೋಡಲು ಇಟ್ಟು ಖಾನನು ಬಿಜಾಪುರಕ್ಕೆ ತೆರಳಿದನು. ಆದರೆ ಬಿಜಾಪುರದ ಮನೆತನದಲ್ಲಿ ಅಂತಃಕಲಹವು ಉತ್ಪನ್ನವಾದುದರಿಂದ ಇಸ್ಮಾಯಿಲ ಆದಿಲಶಹನ ಲಕ್ಷ್ಯವೆಲ್ಲವೂ ಆಕಡೆಗೆ ಸೆಳೆಯಲ್ಪಟ್ಟಿತು. ಇದೇ ಸಂದರ್ಭದಲ್ಲಿ ಮತ್ತೆ ಪೋರ್ಚುಗೀಜರು ಗೋವೆಯನ್ನು ಮುತ್ತಿ ವಶಪಡಿಸಿಕೊಂಡರು. ಆಗ ಅವರ ಕೈಗೆ ಸಿಕ್ಕ ಒಟ್ಟು ೬ ಸಾವಿರ ಮುಸಲ್ಮಾನರನ್ನು (ಬಾಲಕರು ವೃದ್ಧರು ಸ್ತ್ರೀಯರು ಯೋಧರು ಸಹಿತ) ಒಬ್ಬರನ್ನು ಬಿಡದೆ ಕೊಂದು ರಕ್ತದ ಕಾಲುವೆ ಹರಿಸಿ ಅಬುಲ್‌ಕರ್ಕನು ತೃಪ್ತನಾದನು. ೧೫೧೨ರಲ್ಲಿ ರಸುಲಖಾನನು ಕೊನೆಯ ಪ್ರಯತ್ನವೆಂದು ಅತ್ಯಂತ ಸಾಹಸದಿಂದ ಪೋರ್ಚುಗೀಜರ ವಿರುದ್ಧ ಹೋರಾಡಿದರೂ ಸೋತು ಹಿಂತಿರುಗಬೇಕಾಯಿತು.

ಗೋವಾ ಪ್ರದೇಶವನ್ನು ಸ್ವಾಧೀನಪಡಿಸಿಕೊಂಡದ್ದಕ್ಕಾಗಿ ಬಂಕಾಪುರದ ನಾಯಕನು ಅಬುಲ್‌ಕರ್ಕನಿಗೆ ಧನ್ಯವಾದಗಳನ್ನು ಅರ್ಪಿಸಿ ತನಗೆ ಅರಬಸ್ಥಾನದಿಂದ ಪ್ರತಿವರುಷ ೩೦೦ ಕುದುರೆಗಳನ್ನು ತರಿಸಿಕೊಡಲು ಬೇಡಿಕೊಂಡಿದ್ದನು. ಬಂಕಾಪುರವು ವಿಜಯನಗರಕ್ಕೆ ಹೋಗುವ ಮಾರ್ಗದಲ್ಲಿದ್ದುದರಿಂದ ಈ ನಾಯಕನ ಸ್ಥಾನ ಮಹತ್ವವನ್ನು ಅರಿತು ಅಬುಲ್‌ಕರ್ಕನು ವಿನಂತಿಯನ್ನು ಮಾನ್ಯಮಾಡಿದನು.

ಆದರೆ ಕೃಷ್ಣದೇವರಾಯನಿಗೆ ಕುದುರೆಗಳು ಬೇಕಾಗಿದ್ದವು. ಬಿಜಾಪುರದವರ ಸಂಗಡ ಯುದ್ಧಹೂಡಲು ಕುದುರೆ ಸವಾರರ ಆಗತ್ಯವು ಬಹಳವಾಗಿದ್ದಿತು. ಆದ್ದರಿಂದ ಅವುಗಳನ್ನು ಹೇಗಾದರೂ ಮಾಡಿ ದೊರಕಿಸಲು ಯುಕ್ತಿಯನ್ನು ಹೂಡಿದನು. ಅಬುಲ್‌ಕರ್ಕನಿಗೆ ಒಂದು ಪತ್ರವನ್ನು ಬರೆದನು : "ನಾನು ಈಗ ಮುಸಲ್ಮಾನರ ಕೂಡ ದಂಡಯಾತ್ರೆಯನ್ನು ಕೈಕೊಳ್ಳಬೇಕಾಗಿದೆ. ಆದ್ದರಿಂದ ನನಗೆ ನೀವು ಅರಬಸ್ತಾನದಿಂದ ತಂದ ಎಲ್ಲ ಕುದುರೆಗಳನ್ನು ಮಾರಬೇಕು. ಮತ್ತಾರಿಗೂ ಕೊಡಬಾರದು. ನಾನು ನಿಮಗೆ ಪ್ರತಿ ವರುಷ ೨೦ ಸಾವಿರ ಮೊಹರುಗಳನ್ನು ಕೊಡುತ್ತೇನೆ" ಎಂದು ಈ ಸುದ್ದಿಯ ಆದಿಲ್‌ಶಹನ ಕಿವಿಗೆ ಮುಟ್ಟಿತು. ಅವನು ಪತ್ರ ಬರೆಯುವದಕ್ಕಿಂತ ವಿಶೇಷ ದೂತನನ್ನೇ ಗೋವೆಗೆ ಕಳಿಸಿಕೊಟ್ಟನು.

ರಾಜಕಾರಣದಲ್ಲಿ ಅಬುಲ್‌ಕರ್ಕನಿಗೆ ಒಂದು ಸ್ಥಾನ ಸಿಕ್ಕದ್ದರಿಂದ ವ್ಯಾಪಾರದಿಂದ ಲಾಭ ಪಡೆಯಬೇಕೆಂದು ಯೋಜಿಸಿದನು. ಕೃಷ್ಣದೇವರಾಯನು ೩೦ ಸಾವಿರ ಮೊಹರುಗಳನ್ನು ಕೊಡುವುದಾದರೆ ಎಲ್ಲ ಕುದುರೆಗಳನ್ನು ಅವನಿಗೆ ಕೊಡುವದಾಗಬೇಕೆಂದೂ ಅವನ ದೂತರೇ ಗೋವೆಗೆ ಬಂದು ಕುದುರೆಗಳನ್ನು ಒಯ್ಯಬೇಕೆಂದೂ, ಯುದ್ಧವು ಸಂಭವಿಸಿದಾಗ ವೆಚ್ಚವನ್ನು ವಹಿಸುವಂತಿದ್ದರೆ ಪೋರ್ತುಗೀಜ ಸೈನ್ಯವನ್ನು ಸಹ ಮುಸ್ಲಿಮರ ವಿರುದ್ಧ ಕಳಿಸುವದಾಗಿಯೂ ತಿಳಿಸಿದನು. ಇತ್ತ ಆದಿಲ್‌ಶಹನಿಗೆ "ಗೋವೆಯ ಸುತ್ತಲಿನ ಬಹುಭಾಗವನ್ನು ಪೋರ್ತುಗೀಜರ ವಶಕ್ಕೆ ಬಿಟ್ಟುಕೊಟ್ಟರೆ ನಿಮಗೆ ಕುದುರೆಗಳನ್ನು ಮಾರುವೆನು" ಎಂದು ಬಂದ ದೂತ

ನಿಂದ ಹೇಳಿಕಳಿಸಿದನು. ಆದರೆ ಈ ವ್ಯವಹಾರವು ಕೊನೆಗೊಳ್ಳುವ ಪೂ
ದಲ್ಲಿಯೇ ಅಬುಲ್‌ಕರ್ಣನು ಸತ್ತನು.

ಬಬೋಸಾ ಎಂಬುವವನು ಕೃಷ್ಣದೇವರಾಯನ ಕಾಲದ ವಿಜಯನ
ವನ್ನು ಬಹು ರಮ್ಯವಾಗಿ ಬಣ್ಣಿಸಿದ್ದಾನೆ. ವಿಜಯನಗರ ರಾಜ್ಯವು ಇ
ಯಾಗಿಯೇ ಶ್ರೀಮಂತ ರಾಜ್ಯವು. ಇಲ್ಲಿ ದೊಡ್ಡ ದೊಡ್ಡ ರಮ್ಯವ
ಶಹರಗಳು ವಿಪುಲವಾಗಿದೆ. ಪಶ್ಚಿಮ ಸಮುದ್ರ ಬಂದರವಾದ ಭಟಕಳದಿ
ಪರದೇಶಗಳೊಡನೆ ವಿಜಯನಗರದವರು ವ್ಯಾಪಾರ ಮಾಡುತ್ತಾರೆ. ಕಬ್ಬ
ಮಸಾಲಿ ಸಾಮಾನು, ಔಷಧಗಳು ಮುತ್ತು ಮತ್ತು ಮುಖ್ಯವಾಗಿ ಕುದು
ಗಳೇ ಮೊದಲಾದವುಗಳು ಪರದೇಶಗಳಿಂದ ದೊಡ್ಡ ಪ್ರಮಾಣದಲ್ಲಿ ಬರುತ್
ಇತ್ತಿತ್ತಲಾಗಿ ಕೃಷ್ಣದೇವರಾಯನು ಮುತ್ತುಗಳನ್ನು ಕುದುರೆಗಳನ
ಗೋವೆಯಿಂದ ಪಡೆಯುತ್ತಿದ್ದಾನೆ. ಭಟಕಳದ ಸರದಾರನು ರಾಯ
ತಂಗಿಯ ಮಗನು ಆದರೆ ತಾನೇ ರಾಜನೆಂಬುವಷ್ಟರ ಮಟ್ಟಿಗೆ ವೈಭವದಿ
ಬಾಳುತ್ತಿದ್ದಾನೆ.

ಸ್ವತಃ ರಾಜನು ರಾಜಧಾನಿಯಲ್ಲಿಯೇ ಇರುತ್ತಾನೆ. ಅವನ ಅರ
ನೆಗೆ ಸಮಾನವಾದ ಕಟ್ಟಡಗಳು ಎಲ್ಲಿಯೂ ನೋಡಲು ಸಿಗುವದಿಲ್ಲ. ರಾ
ಸರ್ವ ಸೇವೆಗಳನ್ನು ಮಾಡಲು ಸ್ತ್ರೀಯರೇ ಇರುವರು. ಅವರಿಗೆ ಪ್ರತ್ಯೇ
ವಾಗಿ ವಾಸಿಸಲು ಅರಮನೆಯ ಆವಾರದಲ್ಲಿಯೇ ಮನೆಗಳಿವೆ. ಸರದಾರ
ಸೇನಾಪತಿಗಳೂ, ಮಂತ್ರಿಗಳೂ ರಾಜವಂಶಿಕರೂ ಅದ್ಭುತ ರಮ್ಯವ
ಭವನಗಳನ್ನು ಕಟ್ಟಿಸಿಕೊಂಡು ವಾಸಿಸುತ್ತಾರೆ ಎಂದು ಬರೆದಿದ್ದಾನೆ.

ಕೃಷ್ಣದೇವರಾಯನು (ಈಗಿನ ಮೈಸೂರ ಪ್ರಾಂತದಲ್ಲಿಯ) ಉ
ತ್ತೂರ ಗಂಗರಾಯನಿಂದ ಕಪ್ಪ-ಕಾಣಿಕೆಗಳನ್ನು ವಸೂಲ ಮಾಡತೊ
ದನು. ಶಿವಸಮುದ್ರ ಮತ್ತು ಶ್ರೀರಂಗಪಟ್ಟಣಗಳೆಂಬ ಎರಡು ಭದ್ರ
ಕೋಟೆಗಳನ್ನು ತನ್ನ ಸ್ವಾಧೀನದಲ್ಲಿರಿಸಿಕೊಂಡನು. ಆಮೇಲೆ ಇ.ಸ.೧೫
ರಲ್ಲಿ ಓರಿಸ್ಸಾ ರಾಜನ ವಶದಲ್ಲಿದ್ದ (ಈಗಿನ ನೆಲ್ಲೂರ ಜಿಲ್ಲೆಯಲ್ಲಿಯ) ಉದ

ಗಿರಿಯೆಂಬ ದುರ್ಗದಭದ್ರವಾದ ಕೋಟೆಯನ್ನು ಸ್ವಾಧೀನಪಡಿಸಿಕೊಂಡನು ಯುದ್ಧದಲ್ಲಿ ಜಯಶೀಲನಾಗಿ ಅಲ್ಲಿರುವ ಸುಂದರ ಕೃಷ್ಣನ ಮೂರ್ತಿಯನ್ನು ವಿಜಯನಗರಕ್ಕೆ ತಂದು ಸ್ಥಾಪಿಸಿ, ದೇವಾಲಯವನ್ನು ಕಟ್ಟಿಸಿದನು. ಪೂಜೆಯ ವ್ಯವಸ್ಥೆ ಮಾಡಿ ಪೂಜಾರಿಗೆ ಉಂಬಳಿ ಹಾಕಿಕೊಟ್ಟನು. ಅದೇ ವೇಳೆಯಲ್ಲಿ ಅರಮನೆಯ ಆವಾರದಲ್ಲಿಯೇ ಹಜಾರರಾಮ ದೇವರ ಗುಡಿಯನ್ನು ಕಟ್ಟಿಸಿದನು.

ಉದಯಗಿರಿಯ ಮುತ್ತಿಗೆಯಲ್ಲಿ ಓಡಿಸ್ಸಾದ ರಾಜನ ಸೋದರತ್ತೆ (ಪರಮ ಸುಂದರಿಯರ ಸ್ತ್ರೀ ರತ್ನ)ಯನ್ನು ವಿಜಯನಗರಕ್ಕೆ ಕರೆದೊಯ್ದು ಬಿಟ್ಟನು. ಓರಿಸ್ಸಾದ ಸ್ವಾಧೀನದಲ್ಲಿದ್ದ ಮತ್ತೊಂದು ಭದ್ರವಾದ ಕೋಟೆ ಕೊಂಡವೀಡಕ್ಕೆ ಮುತ್ತಿಗೆ ಹಾಕಿದನು. ಆಗ ಸ್ವತಃ ಓರಿಸ್ಸಾದ ರಾಜನೇ ರಣರಂಗಕ್ಕೆ ಬಂದನು. ಘನಘೋರ ಯುದ್ಧವು ಜರುಗಿತು. ಅದರಲ್ಲಿ ಓರಿಸ್ಸಾದ ರಾಜನು ಸೋತನು. ದುರ್ಗವು ಕೃಷ್ಣದೇವರಾಯನ ವಶವಾಯಿತು. ರಾಯನು ಸಾಳುವ ತಿಮ್ಮನನ್ನು ಈ ಪ್ರದೇಶದ ಗವರ್ನರನೆಂದು ನೇಮಿಸಿ ವಾಯುವ್ಯ ದಿಕ್ಕಿಗೆ ದಿಗ್ವಿಜಯಾರ್ಥವಾಗಿ ತೆರಳಿದನು. ಇ.ಸ. ೧೫೧೫ ಜೂನ ೨೩ನೇ ತಾರೀಖು ಶನಿವಾರವಾಗಿತ್ತು.

ಕೃಷ್ಣದೇವರಾಯನು ಕೊಂಡಪಲ್ಲಿಗೆ ಮುತ್ತಿಗೆ ಹಾಕಿದನು. ಮೂರು ತಿಂಗಳವರೆಗೆ ಅವ್ಯಾಹತವಾಗಿ ಸಾಗಿದ ಈ ಮುತ್ತಿಗೆಯಿಂದ ಕೋಟೆಯು ವಶವಾಯಿತು. ಅಲ್ಲಿ ವಾಸವಾಗಿದ್ದ ಓರಿಸ್ಸಾದ ಮಹಾರಾಣಿಯನ್ನು ಯುವ ರಾಜಕುಮಾರನನ್ನು ಸೆರೆಹಿಡಿದು ಅವರು ಸಹಿತವಾಗಿ ರಾಯನು ರಾಜ ಮಹೇಂದ್ರಿಗೆ ಸಾಗಿ ಅದನ್ನು ಕೈವಶಮಾಡಿಕೊಂಡು ಅಲ್ಲಿ ಆರು ತಿಂಗಳು ಕಾಲ ವಾಸಿಸಿದನು. ಓರಿಸ್ಸಾದ ರಾಜ ಶರಣಾಗತನಾಗಿ ಒಪ್ಪಂದ ಮಾಡಿಕೊಂಡು ತನ್ನ ಮಗಳನ್ನು ರಾಯನಿಗೆ ವಿಧಿಪೂರ್ವಕವಾಗಿ ಅರ್ಪಿಸಿ ಅವನನ್ನು ಅಳಿಯನನ್ನಾಗಿ ಮಾಡಿಕೊಂಡನು. ಅಂತೂ ಪೂರ್ವ ಕರಾವಳಿಯ ಎಲ್ಲ ಪ್ರಾಂತಗಳಲ್ಲಿಯೂ ವಿಜಯನಗನದ ಆಡಳಿತಕ್ಕೆ ಒಳಪಟ್ಟಂತಾಯಿತು.

ಕೃಷ್ಣದೇವರಾಯನು ತನ್ನ ವಿಶಾಲವಾದ ರಾಜ್ಯವನ್ನು ಅನೇಕ ಪ್ರಾಂತಗಳನ್ನಾಗಿ ವಿಭಾಗಿಸಿದನು. ಒದೊಂದು ಪ್ರಾಂತಕ್ಕೆ ಒಬ್ಬೊಬ್ಬ ನಾಯಕನನ್ನು ನಿಯಮಿಸಿದನು. ಇವರಿಗೆ ಸಹಾಯಕ್ಕಾಗಿ ಕುದುರೆ, ಆನೆ, ಕಾಲಾಳುಗಳು ಅವಶ್ಯಬಿದ್ದರೆ ಕೇಂದ್ರದಿಂದ ಕಳಿಸಲ್ಪಡುತ್ತಿದ್ದವು. ಆದರೆ ಈ ನಾಯಕರು ಕೃಷ್ಣದೇವರಾಯನಿಗೆ ಅಧೀನರಾಗಿರಬೇಕು. ಪ್ರತಿವರುಷವೂ ತಪ್ಪದೇ ಉತ್ಪನ್ನದಲ್ಲಿ ಇಂತಿಷ್ಟು ಭಾಗವನ್ನು ತಂದು ಅರ್ಪಿಸಬೇಕು. ಇಡೀ ರಾಜ್ಯ ಒಂದೇ ಘಟಕವೆಂದು ತಿಳಿದು ಎಲ್ಲ ನಾಯಕರೂ ರಕ್ಷಿಸಬೇಕು. ಇದಕ್ಕೆ ತಪ್ಪಿದ ನಾಯಕನನ್ನು ಕೂಡಲೇ ತೆಗೆದೊಗೆದು ಹೊಸಬನನ್ನು ನೇಮಿಸುತ್ತಿದ್ದನು. ಈ ರೀತಿ ಶಾಂತತೆಯನ್ನು ಕಾಯ್ದುಕೊಂಡು ರಾಜ್ಯ ಪರಿಪಾಲನೆ ಮಾಡತೊಡಗಿದನು. ಈ ಶಾಂತಿ ಕಾಲದಲ್ಲಿ ಅಂದರೆ ಇ.ಸ. ೧೫೧೬ ರಿಂದ ೧೫೨೦ನೇ ಇಸ್ವಿಯವರೆಗೆ ಕೃಷ್ಣದೇವರಾಯನು ಅದ್ಭುತವಾದ ಯುದ್ಧ ತಯಾರಿಯನ್ನು ವಿಶಾಲವಾದ ಕ್ಷೇತ್ರದಲ್ಲಿ ಮಾಡಿದನು. ಒಮ್ಮೆ ಮುಸ್ಲಿಮರನ್ನು ಎದುರಿಸಿ ತಮ್ಮ ಮತ್ತು ಮುಸ್ಲಿಮರ ಈ ವರೆಗಿನ ಬಡೆದಾಟದ ಪ್ರದೇಶವಾದ ಕೃಷ್ಣಾ-ತುಂಗಭದ್ರಾ ನಡುವಿನ ಪ್ರದೇಶವನ್ನು ಆಕ್ರಮಿಸಿ ಬಿಡಬೇಕು. ಅತ್ಯಂತ ಆಯಕಟ್ಟಿನ ಸ್ಥಳದಲ್ಲಿದ್ದ ರಾಯಚೂರ ಕೋಟೆ ಸಹಿತ ಎಲ್ಲವೂ ಹಿಂದೂ ಆಡಳಿತದಲ್ಲಿ ಬರಬೇಕೆಂಬುದೇ ಅವನ ಮಹತ್ವಾಕಾಂಕ್ಷೆಯಾಗಿದ್ದಿತು. ಇದನ್ನು ಮುಂದಿನ ಪ್ರಕರಣದಲ್ಲಿ ವಿವರಿಸುವೆವು.

---

# ಕೃಷ್ಣದೇವರಾಯನ ಆಳಿಕೆಯ ಕೊನೆ
## (೧೫೨೦ ರಿಂದ ೧೫೩೦)

ರಾಯಚೂರ ಕೋಟೆಯ ಬಗ್ಗೆ ಮಹಾತ್ವಾಕಾಂಕ್ಷೆಯನ್ನು ಪಡೆದಿದ್ದ ಮತ್ತು ಮೊದಲಿನಿಂದಲೂ ಹಿಂದೂ ಮುಸ್ಲಿಮ ರಾಜರ ಹಠಕ್ಕೆ ಒಳಗಾದ ಪ್ರದೇಶವು ಇದನ್ನು ಒಮ್ಮೆ ನಿಶ್ಚಯಾತ್ಮಕವಾದ ಯುದ್ಧದಿಂದ ತನ್ನಸ್ವಾಧೀನ ಪಡಿಸಿಕೊಂಡು ಬಿಡಬೇಕೆಂದು ಕೃಷ್ಣದೇವರಾಯನು ನಿಶ್ಚಯಿಸಿದನು. ತನ್ನಲ್ಲಿಯ ಸರ್ವ ಸೈನಿಕ ಸಾಮರ್ಥ್ಯವನ್ನು ಕೇಂದ್ರಿಕರಿಸಿಕೊಂಡು ಅಲ್ಲಿ ಆದಿಲಶಹನನ್ನು ಎದುರಿಸಲು ಈಶಾನ್ಯ ದಿಕ್ಕಿಗೆ ಹೊರಟರು. ಬಹುಶಃ ಅವನು ಫೆಬ್ರುವರಿ ಅಥವಾ ಮಾರ್ಚ ತಿಂಗಳಲ್ಲಿ ಹೊರಟಿರಬೇಕು. ಹವೆಯು ಸ್ವಚ್ಛವಾಗಿ ಅನುಕೂಲವಾಗಿತ್ತು. ಬೇಸಿಗೆಯು ತನ್ನ ಪ್ರಖರತೆಯನ್ನು ತೋರಿಸಲು ಹಾತೊರೆಯುತ್ತಿತ್ತು. ಹತ್ತಿ ಪೈರು ಬಂದ ರೈತರು ಮನೆ ತುಂಬಿಕೊಂಡಿದ್ದರಿಂದ ಬೈಲು ಪ್ರದೇಶದಲ್ಲಿ ಸೈನ್ಯ, ತುಬಾಕಿ ತೋಫು ಆನೆ ಕುದುರೆಗಳನ್ನು ಸಾಗಿಸಲು ಅನುಕೂಲವಾಗಿತ್ತು. ಈ ದೊಡ್ಡ ಸೈನ್ಯವು ೧೦ ದೊಡ್ಡ ವಿಭಾಗಗಳಾಗಿ ಸಾಗಿದ್ದಿತು. ಇನ್ನೂ ಹೆಚ್ಚಿನ ಸೈನ್ಯವು ರಾಯ ಚೂರನ್ನು ತಲಪುವದರೊಳಗಾಗಿ ಕೂಡಿಕೊಳ್ಳತಕ್ಕವಿದ್ದವು.

ಕೋಟೆಯ ಪೂರ್ವ ದಿಕ್ಕಿಗೆ ರಾಯನು ಠಾಣೆ ಹೂಡಿ ಲಗ್ಗೆ ಇಟ್ಟನು. ಆದಿಲಶಹನೂ ಸೈನ್ಯಸಮೇತನಾಗಿ ಬಂದು ಕೃಷ್ಣಾ ನದಿಯ ಉತ್ತರ ದಿಕ್ಕಿಗೆ ಠಾಣೆ ಹೊಡೆದನು. ಅವನಲ್ಲಿ ೧ ಲಕ್ಷ ೪೦ ಸಾವಿರ ಕುದುರೆ ಸವಾರರೂ ಅಸಂಖ್ಯ ಕಾಲಾಳುಗಳೂ ಇದ್ದರು. ಅಲ್ಲಿ ಕೆಲವು ದಿವಸ ವಿಶ್ರಾಂತಿ ಪಡೆದು ಆದಿಲ್‌ಶಹನು ನದಿಯನ್ನು ದಾಟಿ ರಾಯಚೂರ ಕೋಟೆಗೆ ಒಂಭತ್ತು ಮೈಲುಗಳ ಒಳಗಾಗಿ ಬಂದು ಠಾಣೆ ಹೂಡಿದನು, ಇ. ಸ. ೧೫೨೦ ಮೇ ೧೯ ನೇ ತಾರೀಖು ರವಿವಾರ ಮುಂಜಾನೆ ಪರಸ್ಪರರಲ್ಲಿ ಯುದ್ಧವು ಪ್ರಾರಂಭ ವಾಯಿತು ಕೃಷ್ಣದೇವರಾಯನು ಅತ್ಯಂತ ಸಾಹಸದಿಂದ ತನ್ನ ಸೈನ್ಯದ ಎರಡು ಗುಂಪುಗಳನ್ನೂ ಮುಂದಕ್ಕೆ ಒತ್ತುತ್ತ ಭೀಕರವಾಗಿ ಕಾದಿದನು.

ಮುಸಲ್ಮಾನರು ಕಂಗೆಟ್ಟು ತಮ್ಮ ಠಾಣೆಯವರೆಗೆ] ಹಿಂತಿರುಗಿ ಓಡಿದರು. ಶಹನು ತನ್ನ ಸೈನ್ಯವನ್ನು ಬಹಳ ಅಗಲವಾಗಿ ಹರವಿದ್ದದರಿಂದ ನಡುವಿನ ಸ್ಥಳದ ಬಲವು ಕುಸಿದಿದ್ದಿತು. ಆದ್ದರಿಂದ ಹಿಂದುಗಳು ಮುನ್ನುಗ್ಗಿದರು ಆದರೆ ತೋಪಿನ ಹೊಡೆತವನ್ನು ಮುಸ್ಲಿಮರು ಪ್ರಾರಂಭಿಸಿದ್ದರಿಂದ ಹಿಂದೂ ಸೈನ್ಯಕ್ಕೆ ಬಹಳ ಹಾನಿಯಾಯಿತು. ಹಿಂದೂ ಸೈನ್ಯವು ಕಂಗೆಟ್ಟು ಹಿಂತಿರುಗಿ ಓಡತೊಡಗಿತು. ಮುಸಲ್ಮಾನರು ೧|| ಮೈಲುಗಳ ವರೆಗೆ ಅವರನ್ನು ಬೆನ್ನಟ್ಟಿದರು.

ಇದನ್ನು ಕಂಡು ರಾಯನು ಸ್ವತಃ ಕುದುರೆಯನ್ನೇರಿ ತನ್ನ ವಿಶ್ವಾಸಿಕ ಸರದಾರರಿಂದ ಆವೃತನಾಗಿ ಹೊಸ ಸೈನ್ಯದ ಗುಂಪನ್ನು ತೆಗೆದುಕೊಂಡು "ಸಾಯಬೇಕು ಇಲ್ಲವೇ ಬದುಕಿರಬೇಕು" ಎಂಬ ದೃಢ ನಿರ್ಧಾರದಿಂದ ಸಾಗಿದನು. ಚದುರಿ ಹಿಂತಿರುಗಿದ್ದ ತನ್ನ ಸೈನ್ಯಕ್ಕೆಲ್ಲ ಹೊಸ ಹುರುಪನ್ನು ಕೊಟ್ಟನು. ಎಲ್ಲರೂ ಒಟ್ಟಿಗೆ ಮುಸ್ಲಿಮರನ್ನು ಸದೆಬಡೆಯತೊಡಗಿದನು. ತಾತ್ಪೂರ್ತಿಕ ಯಶಸ್ಸಿನಿಂದ ಮೈಮರೆತ ಮುಸ್ಲಿಮ ಸೈನ್ಯವು ಚದುರಿ ಹೋಗಿತ್ತು. ಒಟ್ಟುಗೂಡುವದು ಅದಕ್ಕೆ ಸಾಧ್ಯವಿರಲಿಲ್ಲ. ಹಿಂದೂ ಸೈನಿಕರು ಮುಸ್ಲಿಮ ಸೈನ್ಯದ ಬಹುಭಾಗವನ್ನು ನಾಶಮಾಡಿದರು. ಮುಸ್ಲಿಮರು ತಿರುಗಿ ಓಡಿದರು. ನದಿಯನ್ನು ಮುಟ್ಟಿದರೂ ರಾಯನ ಸೈನಿಕರು ಬೆನ್ನಟ್ಟಿದರು. ಅಸಂಖ್ಯ ಮುಸ್ಲಿಮರು ಯುದ್ಧದಲ್ಲಿ ಸತ್ತರು. ಬಹಳ ಸ್ವಲ್ಪ ಸೈನಿಕರು ನದಿಯನ್ನು ಈಸಿ ಪಾರಾದರು. ರಾಯನು ಈ ಯುದ್ಧವನ್ನು ಸಂಪೂರ್ಣವಾಗಿ ಗೆದ್ದನು.

ಕೃಷ್ಣದೇವರಾಯನು ನದಿಯನ್ನು ದಾಟಿ ಸೈನಿಕರೊಡನೆ ಆದಿಲ್ಲಶಹನ ಠಾಣೆಯನ್ನು ಹೊಕ್ಕನು. ಶಹನು ಜೀವರಕ್ಷಣಾರ್ಥವಾಗಿ ಅಸದಖಾನನ ಸಹಾಯದಿಂದ ಠಾಣೆಯಿಂದ ಪಾರಾಗಿ ಓಡಿಹೋಗಿ, ಆನೆಯ ಮೇಲೇರಿ ಅರಣ್ಯದೊಳಗಿಂದ ಪಾರಾಗಿ ಬಿಜಾಪುರವನ್ನು ಸೇರಿಕೊಂಡನು. ಆದಿಲ್ ಶಹನ ಸೇನಾಪತಿಯಾದ ಸಲಾಬತ್‌ಖಾನನೆಂಬವವನು ೫೦೦ ಪೋರ್ಚುಗೀಜ ಸೈನಿಕರಿಂದೊಡಗೂಡಿ ರಾಯನ ಠಾಣೆಯನ್ನು ಮುತ್ತಿದನು. ಈ ಸೈನ್ಯವು

ತೀರ ಚಿಕ್ಕದಿದ್ದರೂ ಅಸಾಧ್ಯವಾದ ಕೌಶಲ್ಯದಿಂದ ಮುಂದುವರಿಯುತ್ತ ಹಿಂದು ಸೈನಿಕರಲ್ಲಿ ಅಸಂಖ್ಯಾತರನ್ನು ಸಂಹರಿಸುತ್ತ ಸಾಗಿತು. ಇನ್ನೇನು ರಾಯನನ್ನು ಸ್ವತಃ ಮುತ್ತುವದರಲ್ಲಿತ್ತು. ಅಷ್ಟರದಲ್ಲಿ ಹಿಂದು ಸೈನಿಕರು ಇವರನ್ನು ಮುತ್ತಿ ಎಲ್ಲರನ್ನು ಸೆರೆಹಿಡಿದು ಬಂದೀವಾಸಕ್ಕೆ ಕಳಿಸಿದರು.

ಎರಡೂ ಸೈನ್ಯದಲ್ಲಿ ಹಾನಿಯು ವಿಪರೀತವಾಯಿತು. ಆದರೆ ಯುದ್ಧವು ನಿರ್ಣಾಯಕವಾಯಿತು. ಕೃಷ್ಣದೇವರಾಯನ ಯುದ್ಧದ ಹೊಡೆತಕ್ಕೆ ಮುಸಲ್ಮಾನರು ಹಣ್ಣಾದರು. ನಿಸ್ಸತ್ವರಾದರು. ರಾಯನು ಜೀವಂತವಿರುವವರೆಗೆ ಯಾವನೂ ವಿಜಯನಗರದ ಮೇಲೆ ಕೈಮಾಡಲು ಮುಂದೆ ಬರಲಿಲ್ಲ. ಇರಲಿ, ಯುದ್ಧದಲ್ಲಿ ಜಯಹೊಂದಿ ರಾಯನು ರಾಯಚೂರ ಕೋಟೆಗೆ ಬಂದನು. ಕೆಲವೇ ದಿವಸಗಳಲ್ಲಿ ಕೋಟೆಯು ಕೈವಶವಾಯಿತು. ಇಲ್ಲಿಯೂ ಮುಸ್ಲಿಮರು ಹತರಾದರು. ಶಸ್ತ್ರಾಗಾರದ ಅಧಿಕಾರಿಯು ಶರಣಾಗನಾದನು. ರಾಯಚೂರ ಕೋಟೆಯನ್ನು ವಶಪಡಿಸಿಕೊಳ್ಳುವಲ್ಲಿ ಪೋರ್ಚುಗೀಜ ಸೈನಿಕರ ಸಹಾಯವೂ, ಯುಕ್ತಿಗಳೂ ಅವರ ಪಾಶ್ಚಾತ್ಯ ಶಸ್ತ್ರಾಸ್ತ್ರಗಳ ಉಪಯೋಗವೂ ಬಹಳ ರೀತಿಯಿಂದ ಆದವೆಂದು ಕಂಡು ಬರುತ್ತಿದೆ-

ಇದೇ ಕಾರಣಕ್ಕಾಗಿ ಮುಂದೆ ಕೆಲವೇ ದಿವಸಗಳಲ್ಲಿ ಒಂದು ಮಹಾನವಮೀ ಉತ್ಸವ ಕಾಲದಲ್ಲಿ ಪೋರ್ಚುಗೀಜ ಸರದಾರರಿಗೆಲ್ಲ ಕೃಷ್ಣದೇವರಾಯನು ಅದ್ಭುತವಾದ ಮಾನ-ಮರ್ಯಾದೆಗಳನ್ನು ಮಾಡಿದನೆಂದೂ ಅವನ ಕಾಲದಲ್ಲಿ ಪೋರ್ಚುಗೀಜರನ್ನು ಅತ್ಯಂತ ಕಾರುಣ್ಯದಿಂದ ನಡೆಸಿಕೊಂಡನೆಂದೂ ಉಲ್ಲೇಖವಿದೆ.

ಇನ್ನು ಈ ರಾಯಚೂರ ಕೋಟೆಯನ್ನು ಅದರ ಸುತ್ತುಮುತ್ತಲಿನ ಪ್ರಾಂತವನ್ನೂ ಸ್ವಾಧೀನಪಡಿಸಿಕೊಳ್ಳಲು ಕೃಷ್ಣದೇವರಾಯನು ತೆಗೆದುಕೊಂಡ ಸೈನ್ಯ ಸಾಗರವು ಈ ಪ್ರಕಾರವಿದ್ದಿತು: ೭ ಲಕ್ಷ ೩ ಸಾವಿರ ಕಾಲಾಳುಗಳು ೩೨ ಸಾವಿರದಾ ೬ ನೂರು ಕುದುರೆ ಸವಾರರೂ ೫೫೧ ಆನೆಗಳೂ,

ಇದಲ್ಲದೇ ರಾಣಿ ಹೊಡೆಯುವ ಸೇವಕ ಸೇವಕಿಯರು, ವ್ಯಾಪಾರಸ್ಥರ ನರ್ತಕಿಯರು, ಗಾಯಕಿಯರು ವಾದ ಬಾರಿಸುವವರು ಮೊದಲಾದ ಅಸಂಖ್ಯಾತರಿದ್ದರೆಂದು ನ್ಯೂನಿಜ್ಞ ಎಂಬವನು ಬರೆಯುತ್ತಾನೆ. ಈ ( ಯಾತ್ರೆಗೆ ಯಾರೂ ಆಶ್ಚರ್ಯಪಡುವ ಕಾರಣವಿಲ್ಲವೆಂದೂ ಪ್ರಸಂಗ ಬಂ ರಾಯನು ೨ ಮಿಲಿಯನ್ ಅಂದರೆ ೨೦೦ಕೋಟಿ ಸೈನಿಕರನ್ನೂ ಸಹ ಕ ಸಬಲ್ಲನೆಂದೂ ಪಾಯಸ್ ಎಂಬುವವನು ಬರೆಯುತ್ತಾನೆ.

ವಿಜಯನಗರದಲ್ಲಿಯ ಸಿರಿವಂತಿಕೆಯು ಜಗತ್ತಿನಲ್ಲಿ ಯಾವ ದೇ ಲ್ಲಿಯೂ ಕಾಣಲು ಸಾಧ್ಯವಿಲ್ಲವೆಂದೂ ಅಲ್ಲಿಯ ಯಾವಾಗಲೂ ( ೧ ಕಾಲಾಳುಗಳು ಸಾವಿರ ಆನೆಗಳೂ ೩೦ ಸಾವಿರ ಕುದುರೆ ಸವಾರರೂ ಸಿದ್ಧ ಗಿರುವರೆಂದು ಅಬ್ದುಲ ರಜಾಕನು ಬರೆಯುತ್ತಾನೆ. ಕೃಷ್ಣದೇವರಾಯ ಕೇವಲ ಬೇಟೆಯಾಡಲು ಹೋದರೆ ಅವನೊಡನೆ ೧೦ ಸಾವಿರ ಕುದ ಸವಾರರೂ ೫ ಲಕ್ಷ ಕಾಲಾಳುಗಳೂ ೨ ನೂರು ಆನೆಗಳೂ ಇರುವವೆ ಉಲ್ಲೇಖವಿದೆ. ವಿಜಯನಗರದ ಕಾಲಾಳುಗಳ ಕೈಯಲ್ಲಿ ಖಡ್ಗ ಢಾಲು ರಡೇ ಇರುವವೆಂದೂ ಅವರು ಬತ್ತಲೆಯಾಗಿದ್ದು ಕೇವಲ ಮಾನ ಮುಚ್ಚ ಚಡ್ಡಿಯೊಂದನ್ನೇ ಧರಿಸಿರುವರೆಂದೂ ಫಿರಿಸ್ತಹಾನು ಬರೆಯುತ್ತಾನೆ.

ಅಲೆಗ್ಝಾಂಡರ ದಿ ಗ್ರೇಟನು ಕ್ರಿ. ಪೂರ್ವದ ೩೨೦ ರಲ್ಲಿ ಹಿಂದು ನದ ಮಗಧ ದೇಶಕ್ಕೆ ಮುತ್ತಿಗೆ ಹಾಕಿದಾಗ ಕ್ವಿಂಟಸ್ ಕೇರ್ಟಿಸ್ ಎ ವವನು "ಕಡಿಮೆಯಾಗಿ ಲೆಕ್ಕ ಹಿಡಿದರೂ ಮಗಧಾಧಿಪತಿಯ ಸೈನ್ಯ ೬ ಲಕ್ಷ ಕಾಲಾಳುಗಳಿಂದಲೂ ೩೦ ಸಾವಿರ ಕುದುರೆ ಸವಾರರಿಂದ ೯ ಸಾವಿರ ಆನೆಗಳಿಂದಲೂ ಕೂಡಿದ್ದಿತೆಂದು ಬರೆಯುತ್ತಾನೆ. ವಿಜಯನಗರದ ರಾಜ್ಯವನ್ನು ೨ ನೂರು ಭಾಗಗಳನ್ನಾಗಿ ಮಾಡಿ ಎ ನೂರು ಸರದಾರರ ಕೈಯಲ್ಲಿ ಇಡೀ ರಾಜ್ಯದ ಆಡಳಿತವು ಹಂಚಲ್ಪಟ್ಟಿ ಅಂಥ ಸರದಾರರಲ್ಲಿ ೧೦ ಮಂದಿಯಲ್ಲಿ ಒಟ್ಟು ೧೦ ಸಾವಿರ ಕುದುರೆ ಸ ರರೂ ೧೭೦೧೭೦೦ ಕಾಲಾಳುಗಳೂ ೬೩೩ಆನೆಗಳೂ ಇದ್ದವೆಂದು ನ್ಯೂನಿಜ್ಞ ಹೇಳಿ "೨ನೂರು ಸರದಾರರದಲ್ಲಿ ಎಷ್ಟು ಸೈನ್ಯ, ಆನೆಕುದುರೆಗಳಿರಬಹು

ಆವುಗಳ ಪೋಷಣೆಯು ಖರ್ಚೆಷ್ಟು ಅವರ ಸಿವಂತಿಕೆಯೆಷ್ಟು ಎಂಬ ವೊದಲಾದವುಗಳನ್ನು ಓದುಗರೇ ಲೆಕ್ಕ ಹಾಕಬೇಕೆಂದು ಹೇಳಿದ್ದಾನೆ. ಹುಟ್ಟು ದರಿದ್ರರಾದ(ಈಗಿನವರಾದ)ನವುಗೆ ನಮ್ಮ ಪೂರ್ವಜರ ಜೀವನದ ಅಂತಸ್ತಿನ ಕಲ್ಪನೆ ಕೂಡ ಮಾಡಲು ಅಸಮರ್ಥರಾಗಿದ್ದೇವೆ.

ಇರಲಿ ಈ ವಿಜಯದ ಪರಿಣಾಮವು ಒಳ್ಳೆಯದಾಗಲಿಲ್ಲ. ಬಿಜಾಪುರದ ಆದಿಲಶಹನಂತೂ ವಿಜಯನಗರದ ಮೇಲೆ ಇನ್ನು ದಂಡೆತ್ತಿ ಬಂದರೆ ಅನರ್ಥವು ತನಗೆ ಕಟ್ಟಿಟ್ಟಿದ್ದೆಂದು ನಿಶ್ಚಯಿಸಿಬಿಟ್ಟನು. ಆದುದರಿಂದ ತನ್ನ ಸುತ್ತಲಿನ ಮುಸಲ್ಮಾನ ರಾಜ್ಯಗಳೊಡನೆ ಸ್ನೇಹಬೆಳೆಸಿ ಸುಖದಿಂದಿರಬೇಕೆಂದು ನೆನೆದನು. ಎಲ್ಲ ಮುಸಲ್ಮಾನರೂ ಒಟ್ಟಾದರೆ ಮಾತ್ರ ಹಿಂದುಗಳನ್ನು ಬಗ್ಗುಬಡಿಯಬಹುದೆಂದು ಐದೂ ಮಂದಿ ಸುಲ್ತಾನರು ಯೋಚಿಸಿದರು. ವಿಜಯನಗರವರು ಈ ವಿಜಯದಿಂದ ಅತ್ಯಂತ ಉನ್ಮತ್ತರಾದರು. ಸೊಕ್ಕಿನಿಂದ ಎಲ್ಲರನ್ನೂ ದುರ್ಲಕ್ಷಿಸತೊಡಗಿದರು. ಇದೇ ಮುಂದೆ ಅವರನ್ನು ಮಣ್ಣುಮುಕ್ಕಿಸಿತು. ಗೋವೆಯು ಸಹ ವಿಜಯನಗರವು ಗೆದ್ದರೆ ಅದೂ ಗೆದ್ದಂತ್ತಿತ್ತು. ಸೋತರೆ ಅದೂ ಸೋತಂತೆ ಆಗುತ್ತಿತ್ತು. ಏಕೆಂದರೆ ಪೋರ್ತುಗೀಜರು ಯಾವಾಗಲೂ ತಮ್ಮ ವ್ಯಾಪಾರ ಸಂಬಂಧವನ್ನು ಹಿಂದುಗಳೊಡನೆ ಮಾತ್ರ ಇಟ್ಟುಕೊಂಡಿದ್ದರು. ಮೂಲದಿಂದಲೂ ದ್ವೇಷಿಸುತ್ತಲಿದ್ದ ಮುಸಲ್ಮಾನರೊಡನೆ ವೈರವನ್ನೇ ಸಾಧಿಸುತ್ತಿದರು. ವಿಜಯನಗರವು ವೈಭವಯುತವೂ ಸಿರಿಸಂಪತ್ತಿನಿಂದ ಸಮೃದ್ಧವೂ ಆಗಿದ್ದು ಕೊಂಡಷ್ಟು ಗೋವೆಯ ಪೋರ್ತುಗೀಜರು ವ್ಯವಹಾರವನ್ನು ಒಳ್ಳೇ ಲಾಭದಾಯಕವಾಗಿ ಸಾಗಿಸುತ್ತ ತೃಪ್ತರಾಗಿ ಬಾಳಿದ್ದರು. ಆದುದರಿಂದ ರಾಯಚೂರ ವಿಜಯದಿಂದ ಗೋವೆಯ ಪೋರ್ತುಗೀಜರೂ ಅತ್ಯಂತ ಹರ್ಷಿತರಾದರು.

ಕೃಷ್ಣದೇವರಾಯನು ಅತ್ಯಂತ ವಿಜೃಂಭಣೆಯಿಂದ ಶುಭಮುಹೂರ್ತದಲ್ಲಿ ರಾಯಚೂರ ಕೋಟೆಯನ್ನು ಪ್ರವೇಶಿಸಿದನು. ಕೋಟೆಯ ನಾಯಕನನ್ನು ಅತ್ಯಂತ ಅಂತಃಕರುಣೆಯಿಂದ ನಡೆಸಿಕೊಂಡನು. ಉಳಿದ ನಾಲ್ವರು ಮುಸಲ್ಮಾನ ಶಹರು ಕೃಷ್ಣದೇವರಾಯನ ವಿಜಯವನ್ನು

ಕೇಳಿ ತಮ್ಮ ಪ್ರತಿನಿಧಿಗಳನ್ನು ಕಳಿಸಿದರು. ಆದರೆ ಅವರಿಗೆಲ್ಲ ಉ
ಮತ್ತು ಅವಮಾನಕರವಾದ ಉತ್ತರವನ್ನು ಕೊಟ್ಟು ಕಳಿಸಿಬಿಟ್ಟ
ರಾಯನು ಆ ಮೇಲೆ ವಿಜಯನಗರಕ್ಕೆ ಬಂದು ಒಂದು ದೊಡ್ಡ ಸಮಾ
ವನ್ನೂ ದರಬಾರವನ್ನೂ ನೆರೆಸಿದನು. ಸೋತುಹೋದಂಥ ಆದಿಲಶಹ
ಶಾಂತಿದೂತನೊಬ್ಬನು ರಾಯನನ್ನು ಕಾಣಲು ಬಂದನು. ಅವನಿಗೆ ಯ
ಯಾವ ಮಾನ ತೋರಿಸದೆ ಇದ್ದುಬಿಟ್ಟರು.

ಕೊನೆಗೆ ಒಂದು ತಿಂಗಳ ತರುವಾಯ ರಾಯನು ಅವನನ್ನು
ಬಾರಕ್ಕೆ ಬರಮಾಡಿಕೊಂಡನು. ಆದಿಲಶಹನು ತನಗೆ ಮಾಂಡಲೀಕ
ಉಳಿಯಬೇಕೆಂದೂ ಆದರಂತೆ ವಿಜಯನಗರದ ದರಬಾರಕ್ಕೆ ಬ
ರಾಯನ ಪಾದಗಳ ಮೇಲೆ ಶಿರವನ್ನಿಟ್ಟು ನಮಸ್ಕರಿಸಬೇಕೆಂದೂ ಹ
ಮಾಡಿದರೆ ಈಗ ಗೆದ್ದುಕೊಂಡ ಕೋಟೆ ಮತ್ತು ಭೂಮಿಯನ್ನು ವಾ
ಕೊಡುವೆನೆಂದು ಕೃಷ್ಣದೇವರಾಯನು ಹೇಳಿಕಳಿಸಿದನು. ಆದಿಲಶ
ತನ್ನ ಆಜ್ಞೆಯನ್ನು ಪಾಲಿಸುವನೆಂದು ರಾಯನು ತಿಳಿದಿದ್ದನು.
ಅತ್ಯಂತ ಹೇಯವಾದ ಮತ್ತು ಸಾವಿಗಿಂತಲೂ ಅಸಹನೀಯವಾದ ಅ
ನಕರವಾದ ಆಜ್ಞೆಯು ಈ ಮುಸಲ್ಮಾನರ ಮೇಲೆಯೂ ಅದೇ ಜ
ಹೊಂದಿದ ಉಳಿದ ನಾಲ್ವರ ಮೇಲೆಯೂ ಎಂಥ ಭೀಕರವಾದ ಪರಿ
ವನ್ನು ಉಂಟು ಮಾಡಬಹುದು ಎಂಬುದನ್ನು ಕೂಡ ವಿಚಾರಿಸಲು ರಾ
ಮನವು ಸಿದ್ಧವಾಗಲಿಲ್ಲ.

ಆಮೇಲೆ ಕೃಷ್ಣದೇವರಾಯನು ಪ್ರಚಂಡ ಸೈನ್ಯದೊಡನೆ ಬಿಜಾ
ವರೆಗೆ ಸಾಗಿದನು. ಸ್ವಾಮಿಘಾತುಕನೂ, ಕುತಂತ್ರಗಾರನೂ ಆದ
ಹನ ಸರದಾರರಲ್ಲಿ ಒಬ್ಬನಾದ ಅಸದಖಾನನೆಂಬವನ ಸಹಾಯದಿಂದ
ಪುರವನ್ನು ರಾಯನು ಹಿಡಿದುಕೊಂಡನು. ಅಸದಖಾನನ ವೈಯ
ಶತ್ರುವಾದ ಸಲಾಬತ್‌ಖಾನನ್ನು ಅಸದಖಾನನ ಪ್ರೀತ್ಯರ್ಥವಾಗಿ ರಾ
ಸಂಹರಿಸಿದನು. ರಾಯನು ಬಿಜಾಪುರದಲ್ಲಿ ಕೆಲದಿವಸ ಇದ್ದನು.
ಅತ್ಯಂತ ಹಾನಿಗೊಳಗಾಗಿ ಅಲ್ಲಿ ನಿಲ್ಲಲಾರದೆ ಹಿಂತಿರುಗಬೇಕಾ

ಹಾಗೆ ತಿರುಗುವಾಗ ಬಹಮನೀ ರಾಜ್ಯದ ಕೊನೆಯ ರಾಜನ ಮಕ್ಕಳನ್ನು ಆದಿಲಶಹನ ಸೆರೆಯಿಂದ ಬಿಡಿಸಿ ತನ್ನ ಜೊತೆಗೆ ಕರೆದುಕೊಂಡು ಬಂದನು ಮತ್ತು ಅವರಲ್ಲಿಯ ಹಿರಿಯನಿಗೆ ಪಟ್ಟಾಭಿಷೇಕ ಮಾಡಿ ದಕ್ಷಿಣದ ಸುಲ್ತಾನನೆಂದು ನಾಮಕರಣವನ್ನು ಮಾಡಿದನು. ಈ ಬಹಮನೀ ಹೊಸ ಸುಲ್ತಾನನಿಂದ ಈ ಐವರು ಸುಲ್ತಾನರನ್ನು ಮೆತ್ತಗೆ ಮಾಡಬೇಕೆಂದು ರಾಯನು ಎಣಿಸಿದನು. ಆದರೆ ಹಾಗೆ ಆಗದೇ ಐದೂ ಸುಲ್ತಾನರ ಹೃದಯವು ರಾಯನ ಬಗ್ಗೆ ಮತ್ತಿಷ್ಟು ರಾಗದ್ವೇಷಾದಿಗಳಿಂದ ಹೆಚ್ಚೆಚ್ಚು ಕುದಿಯತೊಡಗಿದವು.

ಕೃಷ್ಣದೇವರಾಯನಿಗೆ ಓರ್ವನೇ ಮಗನಿದ್ದನು. ಅವನಿನ್ನೂ ಯುವಕನಿದ್ದನು. ಅವನನ್ನೇ ಪಟ್ಟಾಧಿಕಾರಿಯನ್ನು ಮಾಡಬೇಕೆನ್ನುವ ಉತ್ಕಟೇಚ್ಛೆಯಿಂದ ಶಕ್ಯವಿದ್ದ ಎಲ್ಲ ರಾಜ್ಯಕಾರಭಾರಗಳನ್ನು ಅವನಿಗೆ ಬಿಟ್ಟುಕೊಟ್ಟು ಅವನಿಂದಲೇ ರಾಜ್ಯವನ್ನು ನಡೆಸುತ್ತಿದ್ದರು ಆದರೆ ಅವನು ವಿಷಪ್ರಯೋಗದಿಂದ ಮೃತನಾದದ್ದು ದೈವದ ದುರ್ವಿಪಾಕವು. ರಾಯನು ಅತ್ಯಂತ ನಿರಾಶನೂ ಪರಮ ದುಃಖಿಯೂ ಆದನು. ಕೂಡಲೇ ಅಶಕ್ತನಾಗಿ ಹಾಸಿಗೆ ಹಿಡಿದನು. ಆಗ ಪೋರ್ಚುಗೀಜರ ಸಹಾಯದಿಂದ ರಾಯನು ತನ್ನ ಮುಖ್ಯಮಂತ್ರಿಯಾದ ಸಾಳುವತಿಮ್ಮನನ್ನು ಅವನ ಕುಟುಂಬ ಸಹಿತಸೆರೆಹಿಡಿದನು ಅದರಲ್ಲಿ ಓರ್ವನು (ಸಾಳುವ ತಿಮ್ಮನ ಮಗನು) ತಪ್ಪಿಸಿಕೊಂಡು ಅರಣ್ಯದಲ್ಲಿ ಕಣ್ಮರೆಯಾಗಿ ಸೊಂಡೂರಲ್ಲಿ ಆಶ್ರಯ ಹೊಂದಿದನು. ಮಂತ್ರಿ ಸಾಳುವ ತಿಮ್ಮನೇ ತನ್ನ ಮಗನ ಮರಣಕ್ಕೆ ಕಾರಣನೆಂದು ತಿಳಿದು ಅವನನ್ನು ಸಹಿತ ಎಲ್ಲ ಕುಟುಂಬದವರ ಕಣ್ಣುಕಿತ್ತಿಸಿ ಸೆರೆಯಲ್ಲಿಟ್ಟನು.

ಇದೇ ವೇಳೆ ಸಾಧಿಸಿ ಬಿಜಾಪುರದ ಆದಿಲಶಹನು ಮತ್ತೆ ಸೈನ್ಯಸಮೇತನಾಗಿ ಕಳೆದುಕೊಂಡ ಪ್ರದೇಶ ಮತ್ತು ರಾಯಚೂರ ಕೋಟೆಯನ್ನು ತಿರುಗಿ ದೊರಕಿಸಲು ಬಂದನು. ಆಗ ರಾಯನು ಹಾಸಿಗೆ ಹಿಡಿದಿದ್ದರೂ ಸಹ ತಾನೇ ಸೈನ್ಯ ಸಾಗಿಸುತ್ತ ಎದುರಾದನು. ಇದನ್ನು ಕೇಳಿ ಯುದ್ಧರಂಗದಲ್ಲಿ ಕೂಡ ನಿಲ್ಲದೇ ಆದಿಲಶಹನು ಬಿಜಾಪುರಕ್ಕೆ ಸೈನ್ಯಸಮೇತ ಓಡಿಹೋದನು. ಈ ಸನ್ ೧೫೨೦ ರಲ್ಲಿ ಪೋರ್ಚುಗೀಜರಿಂದ ೬೦೦ ಕುದುರೆಗಳನ್ನು ಕೊಂಡುಕೊಂಡ

ನೆಂದು ಉಲ್ಲೇಖವಿದೆ. ಇದೇ ವೇಳೆಗೆ ಗೋವೆಗೆ ಒಂದು ಪತ್ರ ಬರೆದನು. ಆದಿಲಶಹನ ವಶದಲ್ಲಿದ್ದ ಬೆಳಗಾವಿ ಕೋಟೆ ಮುತ್ತಿಗೆ ಹಾಕಲು ತಾನು ಹೊರಡುವದಾಗಿಯೂ ಅದಕ್ಕಾಗಿ ತನಗೆ ಗೋವೆಯಿಂದ ಸೈನ್ಯ ಮದ್ದು ಗುಂಡುಗಳ ಸಹಾಯ ಕಳಿಸಬೇಕೆಂದೂ ತಿಳಿಸಿದ್ದನು. ಆದರೆ ಕೃಷ್ಣದೇವ ರಾಯನು ಹಾಸಿಗೆಯಿಂದ ಮೇಲಕ್ಕೇಳಲಿಲ್ಲ. ೧೫೩೦ರಲ್ಲಿ ತೀರಿದನು. ಆಗ ಅವನಿಗೆ ಸುಮಾರು ೪೫ ವರುಷ ವಯಸ್ಸಾಗಿರಬಹುದು.

ಇ. ಸ. ೧೫೩೩ರಲ್ಲಿ ಸಾಳುವ ತಿಮ್ಮನು ಗೋವಾ ಮತ್ತು ಸುತ್ತಲಿನ ಪ್ರಾಂತವನ್ನು ವಶಪಡಿಸಿಕೊಳ್ಳಲು ದಂಡಯಾತ್ರೆಯನ್ನು ಕೈಕೊಂಡನು. ಆದರೆ ಆಗ ಪೋರ್ಚುಗೀಜ ಗವ್ಹರ್ನರನಾದ ಡಿಮೆಲೋ ಎಂಬವನು ಸಾಳುವ ತಿಮ್ಮನನ್ನು ಹಿಂದಕ್ಕೆ ಓಡಿಸಿದನು. ೧೫೩೪ ಎಪ್ರಿಲ ತಿಂಗಳಲ್ಲಿ ಬಿಜಾಪುರದ ಸುಲ್ತಾನನು ದಂಡೆತ್ತಿಬಂದು ಇವೆಲ್ಲ ಪ್ರದೇಶಗಳನ್ನು ಕೈವಶ ಮಾಡಿಕೊಂಡು ಜಯಶೀಲನಾದನು. ರಾಯಚೂರ ಪತನದ ನಂತರ ಇಸ್ಮಾಯಿಲ ಆದಿಲಶಹನು ಅಹಮ್ಮದನಗರದ ಬಹ್ರಾನನಾಯಜಾಮಶಹ(೧೫೩೩) ನಿಗೆ ತನ್ನ ಓರ್ವ ತಂಗಿಯನ್ನು ಕೊಟ್ಟು ಲಗ್ನಮಾಡಿದನು. ೧೫೩೪ರಲ್ಲಿ ತನ್ನ ಇನ್ನೊಬ್ಬ ತಂಗಿಯನ್ನು ಬಿರಾರದ ಅಲ್ಲಾವುದ್ದೀನ ಉಮ್ಮದನಿಗೆ ಕೊಟ್ಟು ಆ ಮನೆತನದ ಶರೀರ ಸಂಬಂಧವನ್ನು ಬೆಳೆಸಿದನು. ನಂತರ ಆದಿಲಶಹನು ಬೀದರ ಅಮೀರಬರೀದ ಸುಲ್ತಾನನೊಡನೆ ಕಾದಿ ಅವನನ್ನು ಸಂಪೂರ್ಣವಾಗಿ ಸೋಲಿಸಿಬಿಟ್ಟನು. ಅವನನ್ನು ಸೆರೆಹಿಡಿದು ಬಿಜಾಪುರಕ್ಕೆ ತಂದನು. ಇದೇ ವೇಳೆಗೆ ಕೃಷ್ಣದೇವರಾಯನು ತೀರಿಕೊಂಡದ್ದರಿಂದ ವಿಜಯನಗರದಲ್ಲಿ ರಾಜಕೀಯ ಗೊಂದಲವೂ ಎದ್ದಿದ್ದರಿಂದ ರಾಯಚೂರ ಮತ್ತು ಮುದಗಲ್ಲ ಕೋಟೆಗಳನ್ನು ವಶಪಡಿಸಿಕೊಳ್ಳಲು ಆದಿಲಶಹನು ಪುನಃ ಯತ್ನಿಸಿದನು.

ಇದೇ ವೇಳೆಗೆ ದಿಲ್ಲಿಯನ್ನು ಆಕ್ರಮಿಸಿ (ಇ. ಸ. ೧೫೨೬) ಬಾಬರನು ಮೊಗಲ ಸಾಮ್ರಾಜ್ಯದ ಮೊದಲನೆಯ ಅಧಿಪತಿಯೆಂದು ಪಟ್ಟವೇರಿದನು. ೧೫೩೦ರಲ್ಲಿ ಬಾಬರನ ತರುವಾಯ ಹುಮಾಯೂನನು ಪಟ್ಟಕ್ಕೆ ಬಂದನು.

೧೫೫೬ರಲ್ಲಿ ಅಕಬರನು ಮೊಗಲ ಸಾಮ್ರಾಟನೂ ಶಹನಶಾನೆಂದು ಸಿಂಹಾಸನವನ್ನೇರಿದನು. ಇರಲಿ, ಕೃಷ್ಣದೇವರಾಯನ ತರುವಾಯ ವಿಜಯನಗರದ ಸಿಂಹಾಸನಕ್ಕೆ ಅಚ್ಯುತರಾಯನು ಬಂದನು.

ಕೃಷ್ಣದೇವರಾಯನು ಪಟ್ಟಕ್ಕೆ ಬಂದಕೂಡಲೇ ಪಂಪಾಪತಿ ದೇವಾಲಯದ ಗೋಪುರವನ್ನು ಕಟ್ಟಿಸಿದನು. ವಿಜಯನಗರ ಸಿಂಹಾಸನ ಸ್ಥಾಪನಾಚಾರ್ಯರಾದ ಮಾಧವಾಚಾರ್ಯ ವಿದ್ಯಾರಣ್ಯರ ಸ್ಮರಣಾರ್ಥವಾಗಿ ಹುಕ್ಕರಾಯನು ಕಟ್ಟಿಸಿದ ದೇವಾಲಯದ ದುರಸ್ತಿ ಕೆಲಸವನ್ನು ಬಹಳ ಆಸ್ಥೆಯಿಂದ ಮಾಡಿಸಿ ಪೂರ್ತಿ ಮಾಡಿಸಿದನು. ಇ ಸ ೧೫೧೩ರಲ್ಲಿ ಪೂರ್ವದಿಗ್ವಿಜಯದಿಂದ ಮರಳಿ ಬಂದು ಬಾಲಕ ಶ್ರೀ ಕೃಷ್ಣ ದೇವಾಲಯವನ್ನು ಕಟ್ಟಿಸಿದನು. ಅದೇ ವರುಷ ಹಜಾರ ರಾಮದೇವರ ಗುಡಿ ಕಟ್ಟಲು ಪ್ರಾರಂಭಿಸಿದನು. ಆದರೆ ಅದರಲ್ಲಿ ಮಾತ್ರಕ್ಕ ಕಲಾಕೌಶಲ್ಯದ ಕೆಲಸಗಳು ಸಾಮ್ರಾಜ್ಯದ ಕೊನೆಯ ಕಾಲ ಬಂದರೂ ಮುಗಿಯಲಿಲ್ಲವೆಂದು ಏ. ರ್‍ರೇ (*Rea*) ಸಾಹೇಬನು ಕರೆಯುತ್ತಾನೆ. ಇ. ಸ. ೧೫೨೧ರಲ್ಲಿ ಡ್ಯಾಮುಕಟ್ಟಿ ಕೊರಗಲ್ಲ ಮತ್ತು ಬಸವಣ್ಣ ಕಾಲುವೆಗಳನ್ನೂ ನಿರ್ಮಿಸಿ, ಒಣಗಿದ ನೆಲಕ್ಕೆಲ್ಲ ನೀರು ಹಾಯಿಸಿ ಅಲ್ಲಲ್ಲಿ ಸಾಗುವಳಿಯನ್ನು ಪ್ರಾರಂಭಿಸಿದನು. ಆದರಿಂದ ವಿಜಯನಗರದ ಸುತ್ತಲೂ ಫಲವತ್ತಾದ ಪ್ರದೇಶವು ನಿರ್ಮಾಣವಾಯಿತು.

ಇ. ಸ. ೧೫೨೦ರಲ್ಲಿ ಕೃಷ್ಣದೇವರಾಯನು ಇನ್ನೊಂದು ಮಹದೊಡ್ಡ ಕಾರ್ಯವನ್ನು ಕೈಕೊಂಡನು, ಗೋವೆಯ ಪೋರ್ಚುಗೀಜ ಇಂಜನಿಯರನಾದ ಜವಾ ವೊಡಿಲಾ ಪೊಂಟೆಯವನೇ ಬಂದು ಅದನ್ನು ನಿರ್ಮಿಸಿದನು. ಇದೊಂದು ಬಹುದೊಡ್ಡ ಸರೋವರದ ನಿರ್ಮಾಣ ಕಾರ್ಯವು. ಇದು ವಿಜಯನಗರಲ್ಲಿಯೇ ಸಿದ್ಧವಾಯಿತು. ಹೊಸಪೇಟೆಯ ನೈಋತ್ಯಕ್ಕಿರುವ ಸೊಂಡೂರ ಗುಡ್ಡಗಳಲ್ಲಿ ಪ್ರವೇಶಿಸಿ ಬರುವ ಕಾಲುವೆಯ ಉಗಮವಾಗಿ ಇರುವಂಥ (ಈಗ ಒಣಗಿ ಹೋದಂಥ)ದೇ ಆಗಿರಬೇಕೆಂದು ತೋರುವದು. ಈ ವಿಶಾಲವಾದ ಸರೋವರ ನೀರನ್ನು ಸಾಗುವಳಿಗಾಗಿಯೂ ಮತ್ತು ರಾಯನು ತನ್ನ ಸುಖಭೋಗಗಳಿಗಾಗಿ ನಿರ್ಮಿಸಿಕೊಂಡ ಹೊಸ ಪಟಣವಾದ

ನಾಗಲಾಪುರಕ್ಕೆ ನೀರಿನ ಸರಬರಾಜು ಮಾಡುವದಕ್ಕಾಗಿಯೂ ಉಪಯೋಗಿಸುತ್ತಿದ್ದನು. (ನಾಗಲಾಪುರವೇ ಹೊಸಪೇಟೆಯಾಗಿದೆ) ರಾಯನು ತನ್ನ ಅತ್ಯಂತ ಪ್ರೀತಿಗೆ ಪಾತ್ರಳಾದ ರಾಣಿ ನಾಗಲಾಂಬಿಕೆಗಾಗಿ ಈ ಪುರವನ್ನು ನಿರ್ಮಿಸಿದನೆಂದು ಇತಿಹಾಸವು ಹೇಳುವದು.

ತುಂಗಭದ್ರಾ ತೀರದಲ್ಲಿ ರಾಯನು ವಿಠಲ ದೇವಾಲಯವನ್ನು ಕಟ್ಟಿಸಿದನು. ಇದು ಅತ್ಯಂತ ಶೃಂಗಾರಮಯ, ಅರ್ಥಾಲಂಕಾರಮಯವಾಗಿ, ಭವ್ಯವಾಗಿ ಆಧುನಿಕ ಪದ್ಧತಿಯಲ್ಲಿ ನಿರ್ಮಾಣವಾಗಿದೆ. ಇದನ್ನು ಕೃಷ್ಣದೇವರಾಯನು ಪ್ರಾರಂಭಿಸಿದನು. ಅಚ್ಯುತರಾಯನ ತರುವಾಯ ಸದಾಶಿವರಾಯರುಗಳು ಕಟ್ಟಿಸಿದ ಕಾರ್ಯವನ್ನು ಮುಂದುವರಿಸಿದರು. ೧೫೬೫ನೇ ಇಸ್ವಿ ಬಂದರೂ ಇದು ಪೂರ್ತಿಯಾಗಿ ಮುಗಿಯಲಿಲ್ಲ. ಇ. ಸ. ೧೫೨೭ರಲ್ಲಿ ರಾಯನು ಒಂದೇ ಒಂದು ಕಲ್ಲುಬಂಡೆಯಲ್ಲಿ ಬೃಹದಾಕಾರದ ನರಸಿಂಹ ದೇವರನ್ನು ಕಡೆಸಿದನು. ಅದಕ್ಕೆ ಅನೇಕ ಭೂಮಿಗಳನ್ನು ಉಂಬಳಿ ಹಾಕಿ ಕೊಟ್ಟಿದ್ದನು. ೧೫೬೫ರ ಮುಸುಲರ ದಾಳಿಯಲ್ಲಿ ಅದು ಹೊಡೆದು ಹೋಗಿ ಇನ್ನೂ ಭವ್ಯಸ್ವರೂಪದಲ್ಲಿ ನಿಂತಿದೆ.

———

## ೯. ಅಚ್ಯುತರಾಯ

ಕೃಷ್ಣದೇವರಾಯನ ತರುವಾಯ ಅಚ್ಯುತರಾಯನು ಪಟ್ಟಕ್ಕೆಬಂದನು ರಾಜ್ಯದಲ್ಲಿಯ ಅನೇಕ ಅಂತಃಕಲಹಗಳ ಮೂಲಕ ಕೃಷ್ಣದೇವರಾಯನು ಅಚ್ಯುತರಾಯನನ್ನೂ ಅವನ ಇಬ್ಬರು ತಮ್ಮಂದಿರನ್ನೂ ತನ್ನ ತಂಗಿಯ ಮಗನನ್ನೂ ಚಂದ್ರಗಿರಿ ಕೋಟೆಗೆ ಮೊದಲು ಆಡಳಿತಕ್ಕಾಗಿ ಕಳಿಸಿ ಕೊನೆಗೆ

ಅಲ್ಲಿಯೇ ಬಂಧಿಸಿ ಇಟ್ಟಿದ್ದನು. ಆದರೆ ಮರಣದ ಕೊನೆಯ ಗಳಿಗೆಯಲ್ಲಿ ಅಚ್ಯುತನೇ ತನ್ನ ತರುವಾಯ ಪಟ್ಟಕ್ಕೆ ಬರಬೇಕೆಂದು ರಾಯನು ಉಸುರಿ ಸಿದ್ದನು. ಹೀಗೆ ಹೇಳಿದ್ದು ಒಂದು ರೀತಿಯಲ್ಲಿ ಆಶ್ಚರ್ಯದಾಯಕವೂ ಮತ್ತೊಂದು ರೀತಿಯಲ್ಲಿ ಹಿಂದೂ ರಾಜ್ಯದ ದುರ್ದೈವವೆಂದೂ ಹೇಳ ಬಹುದು. ಏಕೆಂದರೆ ಅಚ್ಯುತರಾಯನು ಹೇಡಿಯೂ ಅಂಜುಬುರುಕನೂ ಇದ್ದನು. ಇವನ ಕಾಲದಿಂದಲೇ ಅವನತಿಯು ಪ್ರಾರಂಭವಾಯಿತೆಂದು ಹೇಳಬಹುದು.

ಸಾಳುವ ತಿಮ್ಮನ ಆಪ್ತರಲ್ಲಿಯೇ ಒಬ್ಬನು ಇವನ ಮುಖ್ಯಮಂತ್ರಿ ಯಾದನು. ಅವನು ಮಹಾ ಪರಾಕ್ರಮಶಾಲಿಯೂ ಕರ್ತೃತ್ವಶಾಲಿಯೂ ಇದ್ದ ನೆಂದು ವರ್ಣಿತವಾಗಿದೆ. ಅಚ್ಯುತರಾಯನ ಆಳಿಕೆ ಪ್ರಾರಂಭವಾದೊಡನೇ ಬಿಜಾಪೂರ ಸುಲ್ತಾನನು ರಾಯಚೂರ ಮುದಗಲ್ಲ ಕೋಟೆಗಳಿಗೆ ಮುತ್ತಿಗೆ ಹಾಕಿದನು. ಮೂರು ತಿಂಗಳ ಅವ್ಯಾಹತ ಕದನದಿಂದ ಆವೆರಡೂ ಕೋಟೆ ಗಳು ಮುಸ್ಲಿಮರ ವಶವಾದವು. ಅಂತೂ ರಾಯಚೂರ ಮುದುಗಲ್ಲ ಕೋಟೆ ಗಳು ಮತ್ತು ಅವುಗಳ ಸುತ್ತಲಿನ ಪ್ರದೇಶವು ೧೭ ವರುಷ ಕಾಲ ವಿಜಯ ನಗರದ ವಶದಲ್ಲಿದ್ದು ಈಗ ಪುನಃ ಬಿಜಾಪುರದ ವಶಕ್ಕೆ ಹೋದವು. ಕಳೆದು ಕೊಂಡ ಪ್ರದೇಶಗಳನ್ನು ಪುನಃ ದೊರಕಿಸುವವರೆಗೆ ಮದ್ಯವನ್ನು ಸೇವಿಸುವ ದಿಲ್ಲವೆಂದು ಪ್ರತಿಜ್ಞೆ ಮಾಡಿದ ಆದಿಲ್‌ಶಹನು, ಕೃಷ್ಣದೇವರಾಯನು ಸತ್ತ ಸುದ್ದಿಯೂ ರಾಯಚೂರ ಮುದಗಲ್ಲ ಕೋಟೆಗಳುಕೈವಶವಾದ ವಾರ್ತೆಯೂ ಶಹನಿಗೆ ಅತ್ಯಂತ ಆನಂದವನ್ನು ನೀಡಿದವು. ಆಗ ಅವನು ದೊಡ್ಡ ಸಮಾ ರಂಭವನ್ನು ಏರ್ಪಡಿಸಿ ಸ್ವತಃ ಮದ್ಯದಲ್ಲಿ ತೇಲಾಡುವದಲ್ಲದೇ ತನ್ನ ಸರ ದಾರ ಸೈನಿಕ, ಮಂತ್ರಿ ಮೊದಲಾದ ಯಾವತ್ತರಿಗೂ ಮದ್ಯ ಮತ್ತು ಸ್ತ್ರೀ ಸುಖವನ್ನು ಯಥೇಚ್ಛವಾಗಿ ಭೋಗಿಸಲು ಅನುವುಮಾಡಿಕೊಟ್ಟನು. ತಾನೂ ಸ್ತ್ರೀ ಸುಖವನ್ನು ಭೋಗಿಸಿ ತೃಪ್ತನಾದನು.

ಇತ್ತ ಅಚ್ಯುತರಾಯನು ತನ್ನ ಕ್ರೂರ ಸ್ವಭಾವದಿಂದ ಎಲ್ಲ ಹಿತಚಿಂತ ಕರಾದ ಶೂರ ಸರದಾರರನ್ನು ಕಳೆದುಕೊಂಡನು. ದೇಶಕ್ಕೆ ದೇಶವೇ ಇವ

ನನ್ನು ಹೇಡಿಯೆಂದು ಜರಿದರು. ಇವನ ಅರಾಜಕತೆಯಿಂದ ವಿಜಯ ನಗರವು ಬಹಳ ಶಿಥಿಲವಾಯಿತು. ಇತ್ತ ಇಸ್ಮಾಯಿಲ್ ಆದಿಲ್‌ಶಹನು ರಾಯಚೂರ ಮುದಗಲ್ಲ ಕೋಟೆಯನ್ನು ಕೈವಶಮಾಡಿಕೊಂಡ ಉಬ್ಬಿನಲ್ಲಿ ತನ್ನ ಶತ್ರುವಾದ ಅಹಮದನಗರದ ಮೇಲೆ ದಾಳಿ ಮಾಡಿ (೧೫೩೨) ಜಯ ಶೀಲನಾದನು. ಆದರೆ ಇವನ ಇಬ್ಬರ ಷಡ್ಡಕರು ಒಂದು ಗೌಪ್ಯವಾದ ಒಪ್ಪಂದ ಮಾಡಿಕೊಂಡರು. ಮೂರು ವರುಷಗಳ ತರುವಾಯ ಇಸ್ಮಾಯಿ ಲನು ಗೋವಳಕೊಂಡದ ಕುತುಬಶಹನ ವಶದಲ್ಲಿಯ ಕೋಟೆಗೆ ಮುತ್ತಿಗೆ ಹಾಕಿದಾಗ ಜ್ವರಪೀಡಿತನಾಗಿ ಸತ್ತನು. ೧೫೩೪ ಅಗಷ್ಟ ೨೪ ಗುರುವಾರ ವಾಗಿತ್ತು.

ಇವನ ತರುವಾಯ ಮಾಲು ಎಂಬ ಇವನ ಮಗನು ಪಟ್ಟವೇರಿದನು. ಅಸದಖಾನನು ರಾಜ್ಯ ಪ್ರತಿನಿಧಿಯೆಂದು ನಿಯಮಿಸಲ್ಪಟ್ಟನು. ಆದರೆ ಅಸದಖಾನನಿಗೆ ಅಸಹನೀಯವಾದ ಅಪಮಾನಗಳನ್ನು ಮಾಡಿದ್ದರಿಂದ ಅವನು ಬೆಳಗಾವಿಗೆ ಹೊರಟುಹೋದನು. ಈ ಹೊಸ ಬಾದಶಹನು ಆರೇ ತಿಂಗಳ ಬಾಳಿದರೂ ತೀರ ಅಪ್ರೀಯವಾಗಿ ಹೋದನು. ೧೫೩೫ರಲ್ಲಿ ಇವನ ಅಜ್ಜಿಯೇ ಸ್ವತಃ ಮಾಲನ ಕಣ್ಣುಗಳನ್ನು ಕಿತ್ತಿಸಿ ಸಿಂಹಾಸನದಿಂದ ತಳ್ಳಿ ಅವನ ತಮ್ಮನಾದ ಇಬ್ರಾಹಿಮ ಆದಿಲ್‌ನನ್ನು ಪಟ್ಟಕ್ಕೆ ತಂದಳು.

ಈ ದುರ್ಬಲತೆಯ ಲಾಭಪಡೆದು ಗೋವೆಯ ಆಗಿನ ಗವ್ಹರ್ನರನಾದ ಡಿಕನ್ಹಾ ಎಂಬುವವನು ದೀವ (*Dieu*) ದಲ್ಲಿ ಒಂದು ಭದ್ರವಾದ ಕೋಟೆ ಯನ್ನು ಕಟ್ಟಿಸಿಕೊಂಡನು. ಸತತವಾಗಿ ಹತ್ತು ವರುಷಗಳವರೆಗೆ ಅಸದಖಾ ನನ ಸ್ವಾಧೀನದಲ್ಲಿದ್ದ ಗೋವೆಯ ಸುತ್ತುಮುತ್ತಲಿನ ಪ್ರದೇಶವನ್ನು ಗೆದ್ದು ಕೊಳ್ಳಲು ಸಾಗಿ ಯಶಸ್ವಿಯಾದನು. ಮೂರುಸಲ ಅಸದಖಾನನು ದಂಡೆತ್ತಿ ಬಂದರೂ ಗೋವೆ ಪ್ರದೇಶವು ಅವನಿಗೆ ಕೈವಶವಾಗಲಿಲ್ಲ. ನಾಲ್ಕನೆಯ ಸಲ ಪ್ರಚಂಡ ಸೇನಾಸಾಗರದೊಡನೆ ಪೋರ್ತುಗೀಜನು ಅಸದಖಾನನನ್ನು ಮುತ್ತಿ ದನು. ಆಗ ಹೊಸದಾಗಿ ಕಟ್ಟಿಸಿದ ಕೋಟೆಯನ್ನು ತೋಫಿನ ಹೊಡೆತದಿಂದ ತಾವೇ ನಾಶಗೊಳಿಸಿ ಪೋರ್ತುಗೀಜರು ಓಡಿಹೋದರು.

ಕೊಂಡವಾಡದ ನಾಯಕನು ಕಪ್ಪ ಕಾಣಿಕೆಗಳನ್ನು ಸಲ್ಲಿಸಲಿಲ್ಲವಾದ್ದರಿಂದ ಕುತುಂಬಶಹನು ದಂಡೆತ್ತಿಹೋಗಿ ಅದನ್ನು ವಶಪಡಿಸಿಕೊಂಡನು. (೧೫೩೬) ಈ ಭದ್ರವಾದ ಕೋಟೆಯಲ್ಲಿ ಇದರ ಜ್ಞಾಪಕಾರ್ಥವಾಗಿ ಒಂದು ವಿಜಯಸ್ತಂಭವನ್ನು ನಿಲ್ಲಿಸಿದನು. ಇ. ಸ. ೧೫೩೨ರ ಕಾಂಜೀವರದಲ್ಲಿಯ ಶಿಲಾಲೇಖನದಲ್ಲಿ ಅಚ್ಯುತರಾಯನ ರಾಜ್ಯವು ತಿನ್ನವೆಲ್ಲಿಯ ವರೆಗೆ ಹಿಂದೆ ಸರಿಯಿತೆಂದು ಹೇಳಿದೆ. ಆದರೆ ಇವನು ವಿಜಯಯಾತ್ರೆ ಕೈಕೊಂಡನೆಂದು ಎಲ್ಲಿಯೂ ಉಲ್ಲೇಖವಿಲ್ಲ. ಆದರೆ ಒಂದು ಅತ್ಯಂತ ಆಶ್ಚರ್ಯಕರವಾದ ಸಂಗತಿಯೆಂದರೆ ಇ. ಸ. ೧೫೩೬ರಲ್ಲಿ ಅಚ್ಯುತರಾಯನು ವಿಜಯನಗರದ ಪರಮಶತ್ರುವಾದ ಇಬ್ರಾಹಿಮ ಆದಿಲಶಹನಿಂದ ಸಹಾಯಯಾಚಿಸಿ ಅವನ ಸೈನ್ಯವನ್ನು ವಿಜಯನಗರಕ್ಕೆ ತರಿಸಿಕೊಂಡನು. ಇಷ್ಟು ನಾಚಿಕೆಗೇಡಿಯೂ ದುರ್ಬಲನೂ ಇವನಾಗಿ ಬಿಟ್ಟನೇ! ಎಂದು ಇತಿಹಾಸಕಾರರು ಉದ್ಗಾರ ತೆಗೆದಿದ್ದಾರೆ.

ಆದರೆ ಮುಸ್ಲಿಮ ಸೈನ್ಯವು ವಿಜಯನಗರಕ್ಕೆ ಬಂದದ್ದು ನಿಜ. ಏಕೆಂದರೆ ಹಿಂದೂ ಪ್ರಜೆಗಳು ಅಚ್ಯುತರಾಯನ ಬಗ್ಗೆ ಅನಾದರ ಕೋರಿದ್ದರಿಂದ ಅವನ ಆಜ್ಞೆಯನ್ನು ಇವರು ಪಾಲಿಸದಾದರು. ಶಹನಶಹನು ಸೈನ್ಯ ಸಮೇತವಾಗಿ ಬಂದನು. ಹಿಂದಕ್ಕೆ ಕೃಷ್ಣದೇವರಾಯನು ಬಿಜಾಪುರಕ್ಕೆ ಬಂದು ಹಾವಳಿ ಮಾಡಿದ್ದನ್ನು ಇವನು ಮರೆತಿದ್ದಿಲ್ಲ. ಅದರ ಸೇಡನ್ನು ತೀರಿಸಿಕೊಳ್ಳಲು ನಾಗಲಾಪುರವನ್ನು ಸಂಪೂರ್ಣ ನಾಶಮಾಡಿಬಿಟ್ಟನು. ಮುಸ್ಲಿಮ ಸೈನ್ಯವು ಉಠವಲ ಕಟ್ಟಿಗೆಯ ನೆವ ಮಾಡಿಕೊಂಡು ವಿಜಯನಗರದಲ್ಲಿಯ ಅರಮನೆಯ ಸುತ್ತಲಿನ ಸುಂದರವಾದ ಪ್ರಸಾದಗಳನ್ನೆಲ್ಲ ನೆಲಸಮ ಮಾಡಿಬಿಟ್ಟರು. ಇಬ್ರಾಮಶಹನಿಗೆ ಅಗಣಿತ ಧನರೂಪದ ಬಹುಮಾನವನ್ನು ಕೊಟ್ಟು ಅಚ್ಯುತರಾಯನು ಅವನನ್ನು ತಿರುಗಿ ಕಳಿಸಿದನು. ಕೃಷ್ಣದೇವರಾಯನ ಬಲಾಢ್ಯವಾದ ಮಂತ್ರಿಯಾದ ಸಾಳುವ ತಿಮ್ಮನು, ಮತ್ತು ಶಿವರಾಯನ ಈರ್ವರು ಮಕ್ಕಳ ಮರಣದ ತರುವಾಯ ಸುಮಾರು ನಾಲ್ವತ್ತು ವರುಷ ರಾಜ್ಯಸೂತ್ರಗಳನ್ನು ತಾನೇ ವಹಿಸಿ ರಾಜನಂತೆಯೇ

ಆಳಿದನು. ಈ ಉರ್ವರು ಮಕ್ಕಳಲ್ಲಿಯು ಚಿಕ್ಕವನನ್ನು ಇವನೇ ವಿಷಪ್ರಯೋಗದಿಂದ ಕೊಲ್ಲಿಸಿದ್ದನು. ಇರಲಿ, ಈ ನಾಲ್ವತ್ತು ವರುಷ ಕಾಲ ವಿಜಯನಗರದ ಸಮಸ್ತ ಸರಕಾರವೂ ಪ್ರಜೆಗಳೂ ಇವನ ಆಜ್ಞೆಯಂತೆಯೇ ನಡೆದುಕೊಂಡು ಅತ್ಯಂತ ವಿಧೇಯರಾಗಿ ನಡೆದರು. ಇವನ ತರುವಾಯ ಇವನ ಮಗನಾದ ರಾಮರಾಯನು ರಾಜ್ಯದ ಸೂತ್ರಗಳನ್ನು ನಿರ್ವಹಿಸಿಕೊಂಡನು.

"ರಾಮರಾಯನಿಗೆ ಇಬ್ಬರು ತಮ್ಮಂದಿರಿದ್ದರು. ಅವರಲ್ಲಿ ಒಬ್ಬನು ತಿರುಮಲ ಎಂಬವನು. ರಾಮರಾಯನು ಮತ್ತು ತಿರುಮಲರಾಯರು ಮೊದಲನೆಯ ನರಸಿಂಗರಾಯನ ಮಗನಾದ ಕೃಷ್ಣದೇವರಾಯನ ಉರ್ವರು ಹೆಣ್ಣುಮಕ್ಕಳನ್ನು ಲಗ್ನವಾದನು. ಈ ರೀತಿಯಾಗಿ ರಾಜವಂಶಕ್ಕೆ ರಾಮರಾಯನು ಸಂಬಂಧಿಕನಾದರು. ಅಚ್ಚುತರಾಯನು ಪಟ್ಟಕ್ಕೆ ಬಂದಕೂಡಲೇ ರಾಜಸಂಬಂಧಿಕರನ್ನೂ ಅವನ ಗಂಡು ಮಕ್ಕಳನ್ನೂ ಕೊಂದುಬಿಟ್ಟನು. ರಾಮರಾಯ ಮತ್ತು ತಿರುಮಲರಾಯರು ಅಚ್ಚುತರಾಯಗೆ ಭಾವಮೈದುನನಾಗಬೇಕು" ಹೀಗೆಂದು ನ್ಯೂನಿಜ್ಜನು ಬರೆಯುತ್ತಾನೆ.

ಹೀಗಿದ್ದುದರಿಂದ ರಾಮರಾಯನು ಸಿಂಹಾಸನವನ್ನು ತಾನೇ ಏರಿ ರಾಜನಾಗಿ ಬಿಡಬೇಕೆಂದು ಹವಣಿಸಿದನು. ಆದರೆ ಸ್ವಲ್ಪ ವಯಸ್ಕನೂ ಮಂದಮತಿ (ಅರೆಹುಚ್ಚನೆಂದು ಬ್ರಿಗ್ಸನು ಬರೆಯುತ್ತಾನೆ) ಆದ ಭೋಜತಿರಮಲನ ಪ್ರತಿನಿಧಿಯಾಗಿ ಆಳಬೇಕೆಂದು ರಾಜ್ಯದ ಸರದಾರರೂ ಅಮಾತ್ಯನೂ ರಾಮರಾಯನಿಗೆ ಒತ್ತಾಯಪಡಿಸಿದನು. ಆದರೆ ಅವರೆಲ್ಲರನ್ನೂ ಚಂಡಾಡಿ ದೊಡ್ಡ ಸೈನ್ಯದೊಂದಿಗೆ ರಾಮರಾಯನು ಮಲಬಾರದ ಮೇಲೆ ದಾಳಿ ಮಾಡಿ ಯಶಸ್ವಿಯಾದನು. ನಂತರ ವಿಜಯನಗರದ ದಕ್ಷಿಣದಲ್ಲಿದ್ದ ಜಮೀನದಾರರ ಮೇಲೆ ಹರಿಹಾಯ್ದನು. ಜಮೀನುದಾರರಲ್ಲಿಯೂ ಬಲಾಢ್ಯವಾದ ಸೈನ್ಯವಿದ್ದಿತು. ಆರು ತಿಂಗಳುಗಳ ವರೆಗೆ ಕಾದಿರುವ ರಾಯನನ್ನು ಸೈನ್ಯಸಮೇತವಾಗಿ ಓಡಿಸಿಬಿಟ್ಟರು.

ರಾಮರಾಯನು ವಿಜಯನಗರವನ್ನು ಬಿಟ್ಟು ಹೋಗುವಾಗ ಓರ್ವ ತನ್ನ ವಿಶ್ವಾಸಿ ಗುಲಾಮನನ್ನು ರಾಜಕೀಯ ಕಾರ್ಯಭಾರ ನೋಡಿಕೊಳ್ಳಲು ಇಟ್ಟುಹೋಗಿದ್ದನು. ಈ ಗುಲಾಮನು ಸರಕಾರದ ಅಮೂಲ್ಯವಾದ ಬೊಕ್ಕಸವನ್ನು ಕಂಡು ಇಲ್ಲಿ ತಾನು ಸರದಾರನಾಗಲು ಇಚ್ಛಿಸಿದನು. ಆದುದರಿಂದ ಭೋಜ ತಿರುಮಲನಲ್ಲಿ ವಿಶ್ವಾಸಹುಟ್ಟಿಸಿ ಸೆರೆಯಲ್ಲಿದ್ದ ಅಲ್ಪವಯ ಮಗುವನ್ನು ಮುಕ್ತಮಾಡಿದನು. ಅವನನ್ನು ಪಟ್ಟದ ಮೇಲಿರಿಸಿದನು. ಭೋಜ ತಿರುಮಲನ ಅಂತರಂಗಿತ ಮಿತ್ರನಾಗಿ ಈ ಗುಲಾಮನು ಸೈನ್ಯ ಸಂಗ್ರಹಿಸ ತೊಡಗಿದನು. ಈ ಸುದ್ದಿಯು ಅನೇಕ ಸ್ವಾಮಿಭಕ್ತ ಸರದಾರರಿಗೂ ವೀರರಿಗೂ ಗೊತ್ತಾಗಿ ಅಲ್ಪವಯ ಸಂರಕ್ಷಣದಾರನಾದ ಈ ಗುಲಾಮನ ಸೈನ್ಯದಲ್ಲಿ ಸ್ವಸಂತೋಷದಿಂದ ಬಂದು ಕೂಡಿಕೊಳ್ಳತೊಡಗಿದರು. ಇದರಿಂದ ಇವನದು ಬಹುದೊಡ್ಡ ಬಲಾಢ್ಯವಾದ ಸೇನೆಯು ಸಿದ್ಧವಾಯಿತು. ೩೦ ಸಾವಿರ ಕುದುರೆ ಸವಾರರೂ ಅಸಂಖ್ಯಾತ ಕಾಲಾಳುಗಳೂ ಗುಂಪುಗೂಡಿದರು. ಭೋಜ ತಿರುಮಲನು ಗೌಪ್ಯರೀತಿಯಿಂದ ಗುಲಾಮನ ಕೊಲೆಮಾಡಿಸಿ ಸೈನ್ಯಸಮೇತ ರಾಜ್ಯಸೂತ್ರಗಳನ್ನು ಸ್ವೀಕರಿಸಿದನು.

ಈ ಸುದ್ದಿ ಕೇಳಿ ರಾಮರಾಯನು ವಿಜಯನಗರಕ್ಕೆ ಧಾವಿಸಿದನು. ಆದರೆ ಅವನಿಗೆ ಅಲ್ಲಿ ಯಾವ ಸ್ಥಾನವೂ ಇರಲಿಲ್ಲ. ಅಲ್ಪವಯ ಸಂರಕ್ಷಣದಾರನಾದ ಭೋಜ ತಿರುಮಲನು ದಯೆತೋರಿ ರಾಮರಾಯನು ಅವನ ಮೂಲ ಪ್ರದೇಶವನ್ನು ಬಿಟ್ಟು ಅಲ್ಲಿ ಆಳುತ್ತ ಸ್ವಸ್ಥವಾಗಿರಲು ಕಳಿಸಿದನು. ಕೆಲವೇ ದಿವಸಗಳಲ್ಲಿ ತಿರುಮಲರಾಯನು ಅಲ್ಪವಯ ರಾಜನ ಕುತ್ತಿಗೆ ಹಿಚುಕಿ ಕೊಂದು ತಾನೇ ಪಟ್ಟವೇರಿದನು. ಸರದಾರರೂ ಅಮಾತ್ಯರೂ ಇವನ ಸ್ಥಾನವನ್ನು ಒಪ್ಪಿದರು. ಏಕೆಂದರೆ ಪಟ್ಟಕ್ಕೆ ತಿರುಮಲನೇ ಸಮೀಪದ ಸಂಬಂಧಿಕನಾಗಿದ್ದನು ಆದರೆ ತಿರುಮಲನು ಕ್ರೂರನೂ ಕಠೋರನೂ ಹಟಿಯೂ ಇದ್ದುದರಿಂದ ಇವನ ಆಳಿಕೆಯನ್ನು ಮಂತ್ರಿಗಳು ಸಹಿಸದೇ ರಾಮರಾಯನಿಗೆ ಇತ್ತ ಬರಲು ಔತಣವನ್ನಿತ್ತರು.

ರಾಮರಾಯನು ಬರುವನೆಂದು ತಿಳಿದ ತಿರುಮಲನಿಗ ಏನು ಮಾಡಬೇಕೆಂಬ ದೇ ಹೊಳೆಯದಾಯಿತು ರಾಮರಾಯನಲ್ಲಿ ಸೆರೆಯಾಳಾಗುವ

ದಕ್ಕಿಂತ ಬಿಜಾಪುರದವರ ಮಾಂಡಲೀಕನಾಗುವದು ಮೇಲೆಂದು ನೆನೆದನು. ಅದೇ ಪ್ರಕಾರವಾಗಿ ಇಬ್ರಾಹಿಮ ಆದಿಲಶಹನಲ್ಲಿ ಓರ್ವ ದೂತನನ್ನು ಕಳಿಸಿದನು. ಶಹನು ಸೈನ್ಯಸಮೇತವಾಗಿ ಈಗ ವಿಜಯನಗರಕ್ಕೆ ಬಂದು ತಿರುಮಲನನ್ನು ಉಳಿಸಬೇಕು. ಅಂದರೆ ವಿಜಯನಗರ ರಾಜ್ಯವು ಬಿಜಾಪುರಕ್ಕೆ ಮಾಂಡಲೀಕರೆಂದು ಒಪ್ಪಿ ಪ್ರತಿವರುಷ ಕಾಣಿಕೆ ಸಲ್ಲಿಸುವದು ಎಂದು ಹೇಳಿ ಕಳಿಸಿ ಅಮೂಲ್ಯವಾದ ನಜರಾಣಾ ಕಳಿಸಿಕೊಟ್ಟನು. ಈ ವಾರ್ತೆ ಕೇಳಿ ಶಹನು ಉಬ್ಬಿಹೋದನು. ಅಸದಖಾನನು ಇಬ್ರಾಹಿಮನಿಗೆ ಈ ಒಪ್ಪಂದವನ್ನು ಸ್ವೀಕರಿಸಲು ಉಪದೇಶಿಸಿದನು. ಕೂಡಲೇ ಇಬ್ರಾಹಿಮ ಆದಿಲಶಹನು ಪ್ರಚಂಡ ಸೈನ್ಯಸಮೇತ ವಿಜಯನಗರವನ್ನು ಪ್ರವೇಶಿಸಿ ಒಂದು ವಾರದ ವರೆಗೆ ಅಖಂಡವಾದ ವೈಭವದ ಆದರಾತಿಥ್ಯಗಳನ್ನು ಸ್ವೀಕರಿಸುತ್ತ ಸುಖದಿಂದಿದ್ದನು. ಇದು ೧೫೫೪ ಜೂನದಲ್ಲಿ ನಡೆಯಿತು.

ಇತ್ತ ರಾಮರಾಯನು ರಾಜ್ಯದ ಸರದಾರರೂ ಅಮಾತ್ಯರೂ ಇದನ್ನು ಕಂಡು ಸಂಕಟಪಡಹತ್ತಿದರು. ಆ ವೇಳೆಯಲ್ಲಿ ಬಲಪ್ರಯೋಗಕ್ಕಿಂತ ಯುಕ್ತಿಯೇ ಲೇಸೆಂದು ರಾಮರಾಯನು ತಿರುಮಲನಿಗೆ ಹೇಳಿಕಳಿಸಿದನು. "ನಾನು ವಿಜಯನಗರಕ್ಕೆ ಬರುವದಿಲ್ಲ. ಮೊದಲಿನಂತೆ ನನ್ನ ಚಿಕ್ಕ ಪ್ರದೇಶದಲ್ಲಿ ಉಳಿಯುವೆನು. ರಾಜ್ಯವನ್ನು ನೀನೇ ಆಳು ಶಹನನ್ನು ಬಿಜಾಪುರಕ್ಕೆ ಕಳಿಸು" ಎಂದು ತಿರುಮಲನು ಒಪ್ಪಂದದ ಪ್ರಕಾರ ಬಿಜಾಪುರದ ಮಾಂಡಲೀಕನಾದನು. ವಾರ್ಷಿಕ ಕಪ್ಪ ಕಾಣಿಕೆಯೆಂದು ಆಗಲೇ ಧನಕನಕವನ್ನು ಇಬ್ರಾಹಿಮ ಆದಿಲಶಹನಿಗೆ ಕೊಟ್ಟನು. (ಅದು ಸುಮಾರು ೨ ಮಿಲಿಯನ್ ಸ್ಟರ್ಲಿಂಗ ಆಗುವದೆಂದು ಪೋರ್ಚುಗೀಜ ಪ್ರವಾಸಿಯು ಬರೆಯುತ್ತಾನೆ.) ಆದಿಲಶಹನು ವಿಜಯನಗರದಿಂದ ಬಿಜಾಪುರಕ್ಕೆ ಹೊರಟನು. ಶಹನು ಇನ್ನೂ ಕೃಷ್ಣಾನದಿಯನ್ನು ದಾಟಲಿಲ್ಲ. ರಾಮರಾಯನು ತನ್ನ ಸಕಲ ಸೈನ್ಯದೊಂದಿಗೆ ವಿಜಯನಗರವನ್ನು ನುಗ್ಗಿದನು.

ಈ ತರದ ಅಪಮಾನ ಪರಿಮಾರ್ಜನೆಗಾಗಿ ತನ್ನನ್ನು ಕೊಂದೇಬಿಡುವರೆಂದು ಭೋಜತಿರುಮಲನು ತಿಳಿದನು. ಆದರೆ ಅವನಿಗೆ ಸಹಾಯಕರಾರೂ

ಉಳಿದಿದ್ದಿಲ್ಲ. ನಿರಾಶನಾಗಿ ಹುಚ್ಚನಂತಾದನು. ಅರಮನೆಯ ಆವಾರದ ಬಾಗಿಲವನ್ನು ಹಾಕಿಸಿಬಿಟ್ಟನು. ಅಲ್ಲಿದ್ದ ಎಲ್ಲ ಶ್ರೇಷ್ಠ ತಳಿಯ ಆನೆ, ಕುದುರೆಗಳ ಕಣ್ಣುಗಳನ್ನು ಕಿತ್ತಿಸಿ ಯುದ್ಧಕ್ಕೆ ನಿರುಪಯೋಗಿಯನ್ನಾಗಿ ಮಾಡಿದನು. ಅವುಗಳ ಬಾಲಗಳನ್ನು ಕತ್ತರಿಸಿಬಿಟ್ಟನು. ಅರಮನೆಯಲ್ಲಿಯ ವಜ್ರ ವೈಢೂರ್ಯ ಪುಷ್ಪರಾಗ ಪಚ್ಚೆ ಮೊದಲಾದ ಅತ್ಯಂತ ಬೆಲೆಬಾಳುವ ಹಳ ಕಲ್ಲುಗಳನ್ನು ಕುಟ್ಟಿಸಿ ಹಿಟ್ಟಿನಂತೆ ಮಾಡಿಸಿ ನೆಲಕ್ಕೆ ಚೆಲ್ಲಿಸಿಬಿಟ್ಟನು. ಆಮೇಲೆ ಒಂದು ಕಂಬಕ್ಕೆ ಖಡ್ಗವನ್ನು ಕಟ್ಟಿ ಅದಕ್ಕೆ ಜೋರಿನಿಂದ ಹಾಯ್ದು ಇರಿದುಕೊಂಡು ಸತ್ತನು. ಅರಮನೆಯ ಬಾಗಿಲುಗಳನ್ನು ಒಡೆದು ರಾಮರಾಯನು ಸೈನ್ಯಸಮೇತ ನುಗ್ಗಿದಾಗ ತಿರುಮಲನು ಸತ್ತು ಬಿದ್ದಿದ್ದನು.

ಪ್ರತಿಗಾಮಿಗಳಾರೂ ಇಲ್ಲದೇ ರಾಮರಾಯನು ವಿಜಯನಗರದ ರಾಜನೆಂದು ಸಾರಲ್ಪಟ್ಟನು. ಆದರೆ ಭೋಜ ತಿರುಮಲನ ಮರಣದ ವಾರ್ತೆಯನ್ನು ರಾಮರಾಯನು ವಿಜಯನಗರವನ್ನೂ ಆಕ್ರಮಿಸಿದ್ದನ್ನೂ ಕೇಳಿ ಇಬ್ರಾಹಿಮ ಆದಿಲಶಹನು ಅಸದಖಾನನ ನೇತೃತ್ವದಲ್ಲಿದೊಡ್ಡ ಸೈನ್ಯವನ್ನು ಕಳಿಸಿ ಆದವಾನಿ ಕೋಟೆಯನ್ನು ಕೈವಶಮಾಡಿಕೊಳ್ಳಲು ಹೇಳಿದನು. ಆದವಾನಿಯು ಯಾವಾಗಲೂ ವಿಜಯನಗರದವರದೇ ಆಗಿತ್ತು. ಇದನ್ನು ಕೇಳಿ ತನ್ನ ಚಿಕ್ಕ ತಮ್ಮನಾದ ವೆಂಕಟಾದ್ರಿಯನ್ನು ದೊಡ್ಡ ಸೈನ್ಯ ಸಹಿತವಾಗಿ ರಾಮರಾಯನು ಅಸದಖಾನನನ್ನು ಎದುರಿಸಲ ಕಳಿಸಿದನು. ಅಸದಖಾನನು ಸಹ ವೆಂಕಟಾದ್ರಿಯನ್ನು ಎದುರಿಸಿದನು. ಆದರೆ ವಿಜಯನಗರದ ಸೇನಾ ಸಾಗರಕ್ಕೆ ತಾನು ಈಡಲ್ಲವೆಂದು ತಿಳಿದು ಸುರಕ್ಷಿತವಾಗಿ ಹಿಂತಿರುಗಿ ಓಡಿದನು. ೧೪ ಮೈಲುಗಳ ವರೆಗೆ ವೆಂಕಟಾದ್ರಿಯು ಬೆನ್ನುಹತ್ತಿ ಅಸದಖಾನನ ಸರ್ವಸೈನ್ಯವನ್ನೂ ಓಡಿಸಿದನು. ಸ್ವಸ್ಥವಾಗಿ ತನ್ನ ಠಾಣೆಗೆ ಬಂದು ಸಕಲ ಸೈನ್ಯದೊಂದಿಗೆ ವಿಜಯೋನ್ಮಾದದಲ್ಲಿ ಲೋಲಾಡಿದನು.

ಇತ್ತ ಅಸದಖಾನನು ವೈರಿ ಸೈನ್ಯವು ತಿರುಗಿದ್ದರಿಂದ ತಾನೂ ಠಾಣೆ ಹೊಡೆದು ಅಲ್ಲಿಯೇ ನೆಲೆಸಿದನು. ಇವನಿಂದ ಎರಡೇ ಮೈಲು ದೂರದಲ್ಲಿ

ವೆಂಕಟಾದ್ರಿಯು ಠಾಣೆಯಿದ್ದಿತು. ರಾತ್ರಿಯಾಗುವವರೆಗೆ ಕಾದು ಅಸದಖಾನನು ೪ ಸಾವಿರ ಶ್ರೇಷ್ಠ ಕುದುರೆ ಸವಾರರೊಡನೆ ರಾತ್ರಿಯಲ್ಲಿ ವೆಂಕಟಾದ್ರಿಯ ಠಾಣೆಯನ್ನು ಮುತ್ತಿದನು. ವೆಂಕಟಾದ್ರಿಯು ಸಾವರಿಸಿಕೊಳ್ಳುವದರೊಳಗಾಗಿ ಅಸದಖಾನನು ಇವನ ಬಿಡಾರವನ್ನು ಹೊಕ್ಕು ಬಿಟ್ಟನು. ಪ್ರಾಣ ಉಳಿಸಿಕೊಳ್ಳಲು ವೆಂಕಟಾದ್ರಿಯು ಹೆಂಡಿರು ಮಕ್ಕಳು ಐಶ್ವರ್ಯ ಆನೆ ಕುದುರೆ ಎಲ್ಲವನ್ನೂ ಬಿಟ್ಟು ಓಡಿಹೋದನು. ಮರುದಿನ ತನ್ನ ಅಳಿದುಳಿದ ಸೈನ್ಯಸಮೇತ ಅಸದಖಾನನ್ನು ಮುತ್ತಿದರೆ ಹೆಂಡಿರು-ಮಕ್ಕಳಿಗೆ ಗಂಡಾಂತರವುಂಟೆಂದು ಬಗೆದು ಹಾಗೆ ಮಾಡದೆ ದೂರದಲ್ಲಿ ಠಾಣೆ ಹಾಕಿ, ನಡೆದ ಸಂಕಟ ವೃತ್ತಾಂತಗಳನ್ನೆಲ್ಲ ಬರೆದು ಅಣ್ಣನಾದ ರಾಮರಾಯನಿಗೆ ವೆಂಕಟಾದ್ರಿಯು ದೂತನಿಂದ ತಿಳಿಸಿ ಹೆಚ್ಚಿನ ಹಣ ಮತ್ತು ಸೈನ್ಯ ಕಳಿಸಲು ಕೇಳಿಕೊಂಡನು.

ಇದನ್ನು ಕೇಳಿ ಕೊನೆಯವರೆಗೂ ಯುದ್ಧಮಾಡಿ ಮುಸಲ್ಮಾನರನ್ನು ಓಡಿಸುವದಾಗಿ ರಾಮರಾಯನು ಬಹಿರಂಗವಾಗಿಯೇ ಜಾಹೀರುಪಡಿಸಿದನು. ಕೂಡಲೇ ತಮ್ಮನಿಗೆ ಅಪಾರ ಹಣವನ್ನೂ ಸೈನ್ಯವನ್ನೂ ಕಳಿಸಿದನು. ಆದರೆ ಗೌಪ್ಯವಾಗಿ ವೆಂಕಟಾದ್ರಿಗೆ ಪತ್ರ ಬರೆದನು. "ಬಿಜಾಪುರದ ಶಹಾ ಸ್ವಯಂ ಪ್ರೇರಣೆಯಿಂದ ಆದವಾನಿಯನ್ನು ಮುತ್ತಲು ಬಂದಿರುವನೆಂದು ನನಗೆ ಅನಿಸುವದಿಲ್ಲ. ಆದವಾನಿಯ ಸುತ್ತುಮುತ್ತಲಿನ ಜಹಗೀರದಾರರೇ ಯುದ್ಧ ಹೂಡಲು ಅವನನ್ನು ಆಮಂತ್ರಿಸಿರಬಹುದೆಂಬ ಸಂಶಯವು ನನಗೆ ಬರುತ್ತದೆ. ಹೀಗಿದ್ದರೆ ನಮ್ಮವರೇ ನಮಗೆ ವಿರೋಧವಾಗಿರುವದಾದರೆ ನಾವು ಜಯಶೀಲರಾಗುವದು ತುಸು ಕಠಿಣ. ಆದ್ದರಿಂದ ಈ ಪ್ರಸಂಗದಲ್ಲಿ ಅತ್ಯಂತ ಜಾಣತನದದಿಂದ ವರ್ತಿಸು. ಸದ್ಯಕ್ಕೆ ಅಸದಖಾನನೊಡನೆ ಒಪ್ಪಂದ ಮಾಡಿಕೋ, ಮೊದಲು ನಿನ್ನ ಹೆಂಡಿರು ಮಕ್ಕಳನ್ನು ಸೆರೆಯಿಂದ ಪಾರುಮಾಡು- ಆಮೇಲೆ ನೋಡೋಣ" ಎರಿದು ಬರೆದಿದ್ದನು. ವೆಂಕಟಾದ್ರಿಯು ಅಣ್ಣನು ಹೇಳಿದ ಪ್ರಕಾರ ನಡೆದನು. ಅಸದಖಾನನ ಮುಖಾಂತರ ಇಬ್ರಾಮ ಆದಿಲಶಹನೊಡನೆ ಒಪ್ಪಂದ ಮಾಡಿಕೊಂಡನು. ಈ ಒಪ್ಪಂ

ದಿಂದ ಈರ್ವರೂ ತೃಪ್ತರಾದರು. ಶಹನು ಅಸದಖಾನನೊಡನೆ ತನ್ನ ಸೈನ್ಯ ಸಮೇತ ಬಿಜಾಪೂರಕ್ಕೆ ಬಂದು.

ಸುಲ್ತಾನನು ಅಸದಖಾನನಿಗೆ ಅಖಂಡ ಮಾನ ಮರ್ಯಾದೆಗಳನ್ನು ಮಾಡಿ ದರಬಾರದಲ್ಲಿ ಅವನನ್ನು ಮೆರೆಸಿಬಿಟ್ಟನು. ಆದರೆ ಅಂತ:ಕಲಹಗಳುರಾಜಮಂದಿರದಲ್ಲಿಯೂ ಒಳಜಗಳಗಳು ರಾಜ್ಯದಲ್ಲಿಯೂ ಆಗ(೧೫೪೨) ಬಿಜಾಪುರದಲ್ಲಿ ಇಡೀ ವರುಷ ನಡೆದವು. ಅದೇ ವರುಷ ಅಚ್ಯುತರಾಯನು ಸತ್ತನು. ಅವನ ತರುವಾಯ ಅವನ ಹೆಸರಿಗೆ ಮಾತ್ರ ಸದಾಶಿವರಾಯನು ಪಟ್ಟವೇರಿದನು. ಆದರೆ ರಾಜ್ಯಸೂತ್ರಗಳೆಲ್ಲ ಸಂಪೂರ್ಣವಾಗಿ ಈ ಮೂವರು ಬಂಧುಗಳ (ರಾಮರಾಯ, ತಿರುಮಲ ಮತ್ತು ವೆಂಕಟಾದ್ರಿ) ಕೈಯಲ್ಲಿ ಇದ್ದವು.

ಇನ್ನು ಅಸದಖಾನನ ಬಗ್ಗೆ ಒಂದು ದೊಡ್ಡ ಪ್ರಕರಣವನ್ನೇ ಬರೆಯಬಹುದು. ಆದರೆ ವಿಜಯನಗರದ ಇತಿಹಾಸಕ್ಕೆ ಸಂಬಂಧಪಟ್ಟಷ್ಟೇ ಬರೆಯಲು ಈಗ ನಾವು ಹೊರಟಿದ್ದರಿಂದ ಅದಷ್ಟೇ ಭಾಗವನ್ನು ವಿವರಿಸುವೆವು. ಅಸದಖಾನನ ಹೆಸರು ಖುಸ್ರು ಎಂದು ಇವನು ತುರ್ಕಸ್ತಾನದ ಓರ್ವ ಬಡ ವ್ಯಕ್ತಿಯು. ಖುಸ್ರು ಸಾಮಾನ್ಯ ಸೈನಿಕನಾಗಿ ಇಸ್ಮಾಯಿಲ ಆದಿಲ್ಲಶಹನ ಸೈನ್ಯ ಸೇರಿದನು. ಸ್ವಸಾಮರ್ಥ್ಯದಿಂದಲೂ ಪರಾಕ್ರಮದಿಂದಲೂ ಮುಂದೆ ಬಂದನು. ೧೫೨೦ರಲ್ಲಿ ಬಿಜಾಪುರದ ಮುತ್ತಿಗೆಯ ಕಾಲದಲ್ಲಿ ಖುಸ್ರು ಅದ್ಭುತವಾದ ಪರಾಕ್ರಮ ತೋರಿಸಿ ಶಹನದೃಷ್ಟಿಗೆ ಪಾತ್ರನಾದನು. ಶಹನ ಸೋದರತ್ತೆಯ ಮಗನಾದ ದಿಲ್‌ಶಾದ ಆಗಾನ ಪೂರ್ಣ ಕೃಪಾಕಟಾಕ್ಷಕ್ಕೆ ಪಾತ್ರನಾದನು. ಈ ಮುತ್ತಿಗೆಯಲ್ಲಿ ವಿಜಯಶಾಲಿಯಾದ ಇಸ್ಮಾಯಿಲಶಹನು ಖುಸ್ರುನನ್ನು ಅಖಂಡವಾಗಿ ಆದರಿಸಿ "ಅಸದಖಾನ' ಎಂಬ ಬಿರುದನ್ನು ಕೊಟ್ಟನು ಆಗಿನಿಂದ ಖುಸ್ರು ಎಂಬ ಹೆಸರು ಸಂಪೂರ್ಣವಾಗಿ ಅಳಿದು ಅಸದಖಾನನೆಂದೇ ಪ್ರಸಿದ್ಧವಾಗಿಬಿಟ್ಟನು. ಶಹನು ಅಸದಖಾನನಿಗೆ ಫಲವತ್ತಾದ ಪ್ರದೇಶದಿಂದೊಡಗೂಡಿದ ಭದ್ರವಾದ ಬೆಳಗಾವ ಕೋಟೆಯನ್ನು ಜಹಗೀರ ಹಾಕಿಕೊಟ್ಟನು. ಅಸದಖಾನನು ಪ್ರಧಾನಾಮಾತ್ಯ ಪದಕ್ಕೂ ಮುಖ್ಯ ಸೇನಾಪ

ತಿಶ್ವಕ್ಕೂ ಏರಿಬಿಟ್ಟನು. ಕೊನೆಯುವರೆಗೂ ಅಖಂಡ ರಾಜಮರ್ಯಾದೆ ಯಿಂದಲೂ ಪೂರ್ಣಾಯುಷ್ಯದಿಂದಲೂ ಸುಖಿಸಿ ಇ. ಸ. ೧೫೪೯ರಲ್ಲಿ ಸತ್ತನು.

ಇಡೀ ದಕ್ಷಿಣ ಹಿಂದುಸ್ಥಾನದಲ್ಲಿ ಸರ್ವರಾಜರು ಶಹರುಗಳಿಂದ ಮಾನ ಮರ್ಯಾದೆಗಳನ್ನು ಕಾಣಿಕೆ ನಜರಾಣಾಗಳಿಂದಲೂ ವಂದಿತನಾಗಿ ಮೆರೆದ ನೆಂದು ಫಿರಿಸ್ತಿಹಾನು ಬರೆಯುತ್ತಾನೆ. ವಿಜಯನಗರದವರು ಕೂಡ ಇವನಿಗೆ ಮರ್ಯಾದೆ ಕೊಡುತ್ತಿದ್ದರಂತೆ ಕೇವಲ ತನ್ನ ಮನೆಗೆಲಸಕ್ಕೆ ಅಸದಖಾನ ನಲ್ಲಿ ೨೫೦ ಸೇವಕ ಸೇವಕಿಯರಿದ್ದರಂತೆ ಇವನಲ್ಲಿ ೬೦ ಅತಿ ದೊಡ್ಡ ಮನೆ ಗಳೂ ೧೫೦ ಸಣ್ಣ ಆನೆಗಳೂ ಅರಬಸ್ಥಾನಪರ್ಶಿಯಾ ದೇಶದ ೪೦೦ ಕುದುರೆ ಗಳು ಅಸಂಖ್ಯಾತವಾಗಿ ಇದ್ದವಂತೆ ಶಿರಿವಂತಿಕೆಯ ಲೆಕ್ಕವಂತೂ ಹತ್ತಲು ಸಾಧ್ಯವೇ ಇಲ್ಲವೆಂದು ಅವನೇ ಬರೆಯುತ್ತಾನೆ.

ಆದರೆ ಈ ಅಸದಖಾನನು ಅತ್ಯಂತ ನೀಚನಿದ್ದನು. ಕುಹಕತನದ ಲ್ಲಿಯೂ ಕುಯುಕ್ತಿಗಳಲ್ಲಿಯೂ ಸದಾ ತೊಡಗಿರುತ್ತಿದ್ದನು. ತನ್ನ ಆತ್ಮೋ ನ್ನತಿಯಾಗುವಂತಿದ್ದರೆ, ತನಗೆ ಅಖಂಡ ಧನಪ್ರಾಪ್ತಿಯಾಗುವಂತಿದ್ದರೆ ತನ್ನನ್ನು ಸಂಪೂರ್ಣವಾಗಿ ನಂಬಿದಮಿತ್ರನನ್ನು ಆದೇಕೆ ತನ್ನ ಸ್ವಾಮಿಯಾದ ಶಹನನ್ನು ಕೂಡ ಘಾತಿಸಲು ಹಿಂಜರಿಯದಂಥ ಮನೋವೃತ್ತಿಯುಳ್ಳವನಾ ಗಿದ್ದನು. ಇಂಥದನ್ನು ಸಾಧಿಸಿ ಜಯಶೀಲನಾಗಲೂ ಅವನು ತುಂಬಾ ಕುಶಲನಾಗಿದ್ದನು.

ಫೊಂಡಾ ಕೈವಶ ಮಾಡಿಕೊಂಡ ಬಳಿಕ ಮೂವರು ಹಿಂದೂ ಸರದಾ ರರು ಗೋವಾ ಸುತ್ತುಮುತ್ತಲಿನ ಪ್ರದೇಶವನ್ನು ವಶಮಾಡಿಕೊಳ್ಳಬೇಕೆಂದು ಎಣಿಕೆ ಹಾಕತೊಡಗಿದರು. ಅಲ್ಲಿಯ ನಿವಾಸಿಗಳು ಇದನ್ನರಿತು ಗೋವೆಯ ಗವ್ಹರ್ನರನಾದ ನೋಡಿಕನ್ಹಾಗೆ ಶರಣುಹೋಗಿ ತಮ್ಮನ್ನು ಈ ದಾಳಿ ಯಿಂದ ರಕ್ಷಿಸಲು ಬೇಡಿಕೊಂಡರು. ಆದರ ಕನ್ಹಾನಿಗೆ ಬಿಜಾಪುರ ಶಹನ ಸಂಗಡ ಯುದ್ಧವು ಬೇಕಾಗಿರಲಿಲ್ಲ. ಅದರಲ್ಲಿಯಂತೂ ಬೆಳಗಾವಿಯ

ಲ್ಲಿಯು ಅಸದಖಾನನನ್ನು ಕಂಡರೆ ಖನ್ನಾನು ಹೆದರಿ ಹಿಂಜರಿಯುತ್ತಿದ್ದನು. ಗೋವಾದ ಸುತ್ತುಮುತ್ತಲಿನ ಪ್ರದೇಶದಲ್ಲಿ ಏನೋ ಒಂದು ಚಟುವಟಿಕೆಯು ನಡೆದಿರುವದೆಂಬುದು ಅಸದಖಾನನಿಗೆ ತಿಳಿದುಬಂದಿತು. ಆದರೆ ತನ್ನ ಯಜಮಾನನಿಂದ ಸಂದೇಶ ಬರದ ವಿನಃ ಏನೂ ಮಾಡಬಾರದೆಂದು ಸ್ವಸ್ಥನಾಗಿ ಇದ್ದುಬಿಟ್ಟನು. ಈ ವೇಳೆಯಲ್ಲಿ ಬಿಜಾಪುರ ರಾಜ್ಯದ ಆಂತರಿಕ ಕಾರ್ಯಭಾರಗಳಲ್ಲಿ ಶಹನೊಡನೆ ಅನೇಕ ಭಿನ್ನಾಭಿಪ್ರಾಯಗಳೂ ಅಂತಃಕಲಹಗಳೂ ತಲೆದೋರಿದ್ದರಿಂದ ಕೆಲ ದಿವಸಗಳ ಮಟ್ಟಿಗೆ ಆದಿಲಶಹನು ಬಿಜಾಪುರದಿಂದ ಹೊರಗೆ ಉಳಿದಿದ್ದನು. ಆಗ ಶಹನು ಈಗಿನ ಪರಿಸ್ಥಿತಿಯಲ್ಲಿ ರಾಜ್ಯಕಾರ್ಯಭಾರವನ್ನು ಯಶಸ್ವಿಯಾಗಿ ಸಾಗಿಸಲು ಸಲಹೆ ಸಹಾಯ ಮೊದಲಾದವುಗಳಿಗಾಗಿ ಕೂಡಲೇ ಹೊರಟು ಬಂದು ತನ್ನನ್ನು ಕಾಣಬೇಕೆಂದು ಅಸದಖಾವನಿಗೆ ಪತ್ರಬರೆದು ಕಳಿಸಿದನು.

ಅಸದಖಾನನಿಗೆ ತನ್ನ ಯಜಮಾನನ ಬಗ್ಗೆ ಏನೋ ತುಸು ಸಂಶಯ ಬಂದಂತಾಯಿತು. ಅವನು ಅತ್ಯಂತ ಚಾತುರ್ಯದಿಂದಲೂ ನವರಸಭರಿತವಾದ ಕಲಾಯುಕ್ತವಾಗಿಯೂ ಶಹನಿಗೆ ಪತ್ರಬರೆದು ಕಳಿಸಿದನು. "ಜಗತ್ತಿನಲ್ಲಿ ಲೌಕಿಕವಾಗಿ ನಾನು ಮಾಡುವ ಸಕಲ ಕಾರ್ಯಗಳನ್ನೂ ಮಾಡಿಮುಗಿಸಿದ್ದೇನೆ ಇನ್ನು ಮಕ್ಕಾಯಾತ್ರೆ ಕೈಕೊಂಡು ನಾನು ಅಲ್ಲಿಯೇ ಸಾಯಬೇಕೆಂದಿದ್ದೇನೆ" ಎಂದು ತಿಳಿಸಿದನು. ಇದನ್ನು ಓದಿ ಆದಿಲಶಹನು ಸಿಟ್ಟಿನಿಂದ ಉರಿದುಬಿದ್ದನು. ಈ ಅಪಮಾನದ ಸೇಡನ್ನು ತೀರಿಸಿಕೊಳ್ಳದೇ ಬಿಡುವದಿಲ್ಲವೆಂದು ಪ್ರತಿಜ್ಞೆ ಮಾಡಿದನು. ಇದು ಅಸದನಿಗೆ ಗೊತ್ತಾಯಿತು ಇಸ್ಮಾಯಿಲ ಶಹನ ಲಕ್ಷ್ಯವನ್ನು ಬೇರೆಕಡೆಗೆ ತಿರುಗಿಸಬೇಕೆಂದು ಅಸದನು ಇನ್ನೊಂದು ಯುಕ್ತಿಯನ್ನು ಹೂಡಿದನು.

ಕೂಡಲೇ ಖನ್ನಾನಿಗೊಂದು ಪತ್ರ ಬರೆದು ಕಳಿಸಿದನು. "ನನ್ನ ಯಜಮಾನನಾದ ಇಸ್ಮಾಯಿಲಶಹನು ವಿಜಯನಗರದ ರಾಯನ ಆರ್ಭಟೆಗೆ ಮೆತ್ತಗಾಗಿದ್ದಾನೆ. ಈಗ ಅವನು ತನ್ನ ರಾಜ್ಯವನ್ನಾಳಲು ಸಹ ಅಸಮರ್ಥ

ನಾಗಿದ್ದಾನೆ. ಇದೇ ಸಮಯದಲ್ಲಿ ನೀನು ಗೋವೆಯ ಸುತ್ತು ಮುತ್ತಲಿನ ಪ್ರದೇಶವನ್ನು ಸ್ವಾಧೀನಪಡಿಸಿಕೊಳ್ಳಬಹುದು. ವೈರತ್ವವನ್ನು ಮರೆತುಬಿಡು. ನಾನು ಇಂದಿನಿಂದ ನಿಮ್ಮ ಮಿತ್ರ. ನೀವು ಆ ಪ್ರದೇಶವನ್ನು ಕೈವಶಮಾಡಿಕೊಳ್ಳುವಾಗ ನಾನು ಏನೂ ಅರಿಯದಂತೆ ಸ್ವಸ್ಥವಾಗಿರುವೆನು" ಎಂದು ಬರೆದನು. ಇದು ಜರುಗಿದ ವೇಳೆಯು ರಾಯಚೂರ ಮುದಗಲ್ಲ ಕೋಟೆಗಳನ್ನು ವಿಜಯನಗರದವರು ಸ್ವಾಧೀನಪಡಿಸಿಕೊಂಡ ಕೆಲವೇ ಕಾಲದಲ್ಲಿಯದೆಂಬುದು ಮಾತ್ರ ಓದುಗರು ಲಕ್ಷ್ಯದಲ್ಲಿಡಬೇಕು.

ಡಿ. ಫಿಗೆರೆಡೋ ಎಂಬ ಶೂರನೂ, ಧೀರನೂ ಮತ್ತು ಕೃಷ್ಣದೇವರಾಯನ ವಿಶ್ವಾಸಿಕ ಗೆಳೆಯನೆಂದು ಅನಿಸಿಕೊಳ್ಳುವವನೂ ಅಸದಖಾನನಿಗೆ ಬೇಕಾದವನೂ ಆಗಿದ್ದರಿಂದ ಅವನನ್ನೇ ಖನ್ನಾನು ಬೆಳಗಾವಿಗೆ ಕಳಿಸಿಕೊಟ್ಟನು. ಅಸದ ಮತ್ತು ಫಿಗೆರೆಡೋರೆ ನಡುವೆ ಮಾತುಕತೆಗಳಾದವು. ಆಗ ಅಸದಖಾನನು ನುಡಿದನು. "ನನ್ನ ಯಜಮಾನನು ಚಂಚಲ ಮನಸ್ಕನೂ ವಿಚಿತ್ರ ಸ್ವಭಾವದವನೂ ಇರುವನು. ಅವನು ನನ್ನನ್ನು ಯಾವ ವೇಳೆಗೆ ಎಂಥ ಪೇಚಿನಲ್ಲಿ ತಂದಾನೆಂಬುದರ ನಿಯಮವಿಲ್ಲ. ಆದ್ದರಿಂದ ನಾನು ಅವನ ಜೊತೆಯಲ್ಲಿರುವದಕ್ಕಿಂತ ಪೋರ್ಚುಗೀಜರ ಮಿತ್ರನಾಗಿ ಇರುವದು ಒಳ್ಳೇದೆಂದು ತಿಳಿಯುತ್ತೇನೆ. ಗೋವೆಯ ಸುತ್ತುಮುತ್ತಲಿನ ಪ್ರದೇಶವು ನಿಮ್ಮದೆಂದು ಒಪ್ಪಿ ಒಪ್ಪಂದಕ್ಕೆ ಸಹಿ ಹಾಕುವೆನು ಮತ್ತೇನು!" ಎಂದನು.

ಇದಾದಕೂಡಲೇ ಅಸದಖಾನನು ವಿಜಯನಗರದ ರಾಯನೊಡನೆ ಸಂಧಾನ ಬೆಳೆಸತೊಡಗಿದನು. ಸನಿಯದಲ್ಲಿಯ ಜರುಗಲಿರುವ ಮಹಾನವಮೀ ಉತ್ಸವಕ್ಕೆ ಬರಲು ಅಸದಖಾನನಿಗೆ ರಾಯನಿಂದ ಔತಣವು ಹೋಯಿತು. ಅಸದಖಾನನು ಸಂತೋಷದಿಂದ ಬೆಳಗಾವಿಯಿಂದ ವಿಜಯನಗರಕ್ಕೆ ಹೊರಟನು. ಆಗ ತನ್ನ ಸಂಗಡ ೧೫ ಸಾವಿರ ಸೈನಿಕರನ್ನೂ ೫ ನೂರು ಆನೆಗಳನ್ನೂ ಕರೆದೊಯ್ದನು. ಗೋವೆಗೊಂದು ಪತ್ರವನ್ನು ಬರೆದು "ಫಿಗೆರೆಡೋನನ್ನು ವಿಜಯನಗರಕ್ಕೆ ಕಳಿಸಿರಿ. ನನ್ನ ವರ್ಚಸ್ಸನ್ನು ಉಪ

ಯೋಗಿಸಿಪೋರ್ಚುಗೀಜರಿಗೆ ರಾಯನಿಂದ ಜಹಗೀರಗಳನ್ನು ಕೊಡಿಸುವೆನು' ಎಂದು ಖನ್ನಾಗೆ ಅಸದನು ತಿಳಿಸಿದನು. ಆದರೆ ಫಿಗೆರೆಡೋ ಹೊರಡುವ ಪೂರ್ವದಲ್ಲಿಯೇ ಅಸದಖಾನನು ವಿಜಯನಗರವನ್ನು ಮುಟ್ಟಿದ್ದನು.

ರಾಯನು ಅಸದಖಾನನ್ನು ಆದರದಿಂದ ಸ್ವಾಗತಿಸಿದನು. ತಿರಖೋಲ ಮತ್ತು ಟಂಗೆ ಎಂಬ ಎರಡು ಗ್ರಾಮಗಳನ್ನು (ಇವು ಗೋವೆಯ ಉತ್ತರ ಭಾಗದಲ್ಲಿವೆ) ಅಸದಖಾನನಿಗೆ ಜಾಹೀರು ಹಾಕಿಕೊಟ್ಟು ಮರ್ಯಾದೆ ಮಾಡಿದನು. ಅಮೂಲ್ಯವಾದ ಉಡುಗೊರೆಗಳನ್ನು ಕೊಟ್ಟನು.

ಇವೆಲ್ಲ ವಿಷಯಗಳನ್ನು ಕೇಳಿ ಬಿಜಾಪುರದ ಶಹನು ಸಿಟ್ಟಿನಿಂದ ಭ್ರುವಿಷ್ಮನೇ ಆಗಿಬಿಟ್ಟನು. ಪ್ರಚಂಡವಾದ ಸೇನೆಸಹಿತ ದಂಡಯಾತ್ರೆಯಂತೆ ವಿಜಯನಗರದೆಡೆಗೆ ಸಾಗಿದನು. ೧೨ ಮೈಲು ದೂರದಲ್ಲಿ ಠಾಣೆ ಹೊಡೆದನು ಆಗ ಇನ್ನೂ ಅಸದಖಾನನು ತನ್ನ ಪರಿವಾರ ಸಹಿತ ಸುಖಲೋಲಾಟದಲ್ಲಿ ವಿಜಯನಗರದಲ್ಲಿಯೇ ಇದ್ದನು. ಶಹನು ರಾಯನಿಗೆ ಒಂದು ಪತ್ರ ಕಳಿಸಿದನು. „ವಿಶ್ವಾಸಘಾತಕನು ನೀಚನೂ ಆದ ನನ್ನ ಗುಲಾಮನು ಈಗ ನಿಮ್ಮಲ್ಲಿದ್ದಾನೆ. ಅವನನ್ನು ನನ್ನ ವಶಕ್ಕೆ ಕೊಡಿರಿ" ಎಂದು ಬರೆದಿದ್ದನು ಆ ಪತ್ರವನ್ನು ಅಸದಖಾನನಿಗೆ ಕಳಿಸಿದನು. ಅಸದಖಾನನು ಅದಕ್ಕೆ ಉತ್ತರವೆಂದು ರಾಯನಿಗೆ ಬರೆದನು- "ನಾನು ಮುಸಲ್ಮಾನ ಬಾಂಧವ್ಯವನ್ನು ಹರಿದೊಗೆದಿದ್ದೇನೆ. ನಾನು ವಿಜಯನಗರದ ಆತ್ಮೀಯ ಮಿತ್ರ" ಎಂದು ತಿಳಿಸಿದನು.

ಕೆಲ ದಿವಸಗಳು ಜಾರಿದವು. ಆಗ ಏನೋ ಒಂದು ವಿಧದಿಂದ ಸುದ್ದಿ ಸಂಚಾರವು ಅಸದಖಾನನಿಂದ ಶಹನಿಗೂ ಶಹನಿಂದ ಖಾನನಿಗೂ ನಡೆದಿದೆ ಎಂಬುದು ರಾಯನಿಗೆ ಗುಪ್ತಚಾರದಿಂದ ಗೊತ್ತಾಯಿತು. ಆಗ ರಾಯನು ಒಂದು ಗತ್ತು ಹೂಡಿದನು. ತಾನು ರಾಯಚೂರ ಕೋಟೆಯನ್ನು ಮುತ್ತುವದಾಗಿ ಹೊರಡುವನೆಂದೂ ಆಗ ಅಸದಖಾನನು ತನ್ನ ಜೊತೆಗೇ ಸಾಗಬೇಕೆಂದೂ ರಾಯನು ಅಸದನಿಗೆ ತಿಳಿಸಿದನು. ಅದಕ್ಕೆ ಅಸದಖಾನನು ಒಪ್ಪಿ

ದನು. ಮೂರನೆಯ ದಿನ ದಂಡಯಾತ್ರೆಯು ಸಾಗಿತು. ರಾಯನ ಸೈನ್ಯ ಹೊರಡುವ ಪೂರ್ವದಲ್ಲಿ ಎರಡು ತಾಸು ಮೊದಲು ಅಸದಖಾನನು ತನ್ನ ಪರಿವಾರ ಸಹಿತ ಲಗುಬಗೆಯಿಂದ ಊರು ಬಿಟ್ಟು ಹೊರಟನು. ತ್ವರಿತದಿಂದ ದಾರಿ ಸಾಗಿ ನದಿಯನ್ನು ದಾಟಿ ಇಸ್ಮಾಯಿಲ ಆದಿಲಶಹನನ್ನು ಕೂಡಿ ಕೊಂಡಬಿಟ್ಟನು. ಇಸ್ಮಾಯಿಲನು ತೋರಿಕೆಯ ಆದರದಿಂದ ಅಸದಖಾನ ನನ್ನು ಸ್ವಾಗತಿಸಿದನು. ಆದರೆ ಖಾನನು "ಜೀಯಾ ಪೋರ್ಚುಗೀಜ ಮತ್ತು ಹಿಂದೂ ಕಾಫಿರರ ಸಂಗಡಸಾಗಿಸಿದ ನನ್ನ ನಡವಳಿಕೆಗಳೆಲ್ಲ ಕೇವಲ ರಾಜಕಾ ರಣಗಳಿಂದ ಕೂಡಿರುವಂಥವುಗಳು ನಾನು ಕೇವಲ ನಿನ್ನ ದಾಸನು ನಿನ್ನ ರಾಜ್ಯದ ಅಭಿವೃದ್ಧಿಗಳಿಗಾಗಿ ಈ ಆಟಗಳನ್ನು ಹೂಡಿದ್ದೇನೆ" ಎಂದು ನುಡಿ ದನು. ಇಸ್ಮಾಯಿಲನು ಅಸದನ ಎಲ್ಲ ಅಪರಾಧಗಳನ್ನು ಕ್ಷಮಿಸಿದನು. ಅವನನ್ನು ಮತ್ತೆ ಮೊದಲಿನಂತೆ ನೋಡಿಕೊಳ್ಳತೊಡಗಿದನು.

ಆದರೆ ಅಸದನು ಮಹಾನೀಚ ಮಹಾ ಕುತಂತ್ರಿಯೂ ವಿಶ್ವಾಸಘಾತ ಕಿಯೂ ಎಂಬುದನ್ನು ಶಹನು ಅರಿತಿದ್ದನು. ಆದ್ದರಿಂದ ಅಸದನಿಗೆ ಯಾವ ವಿಷಯವನ್ನೂ ಹೇಳದೇ ವಿಜಯನಗರದವರೊಡನೇ ನೇರವಾಗಿ ತಾನೇ ಒಪ್ಪಂದವನ್ನು ಮಾಡಿಕೊಂಡು ಬಿಟ್ಟನು. ಇದರಿಂದ ಇಸ್ಮಾಯಿಲ ಆದಿಲ ಶಹನು ರಾಯಚೂರ ಕೋಟೆಯೊಂದನ್ನು ಇಟ್ಟುಕೊಂಡು ಉಳಿದೆಲ್ಲ ಪ್ರದೇ ಶವನ್ನೂ ವಿಜಯನಗರದವರಿಗೆ ಬಿಟ್ಟುಕೊಟ್ಟನು. ಅಸದಖಾನನ ಮೋಸದ ಬಲೆಯಲ್ಲಿ ಗೋವೆಯ ಖನ್ನಾನು ಪೂರ್ಣವಾಗಿ ಬಿದ್ದು ಹಾನಿಗೊಳಗಾದನು. ಅಸದಖಾದನ ನೀಚತನದ ಪ್ರದರ್ಶನಕ್ಕೆ ಇದೊಂದೇ ಕತೆಯು ಸಾಕು. ಇಂಥವು ಅನೇಕಾನೇಕಗಳು ಅಸದನ ಜೀವನದಲ್ಲಿದ್ದುದನ್ನು ಬರೋಜ ಎಂಬ ಪ್ರವಾಸಿಯು ಬರೆಯುತ್ತಾನೆ.

ಪೋರ್ಚುಗೀಜರು ಮಾತ್ರ ತಮ್ಮ ವ್ಯಾಪಾರದ ಬೆಳವಣಿಗೆಗಾಗಿ ಸಮು ದ್ರದ ದಂಡೆಗುಂಟದ ಪ್ರದೇಶಗಳಲ್ಲಿ ಮಾತ್ರ ಕೋಟೆಗಳನ್ನು ಕಟ್ಟಿಸಿ ಕೊಂಡು ಭದ್ರವಾಗಿರಲು ಪ್ರಯತ್ನಿಸುತ್ತಿದ್ದರು. ಕಾಲಿಕತ್ತದ ಝಾಮೋ ರಿನನ ಸಂಗಡಲೂ ಹಿಂದೂ ಚಿಕ್ಕಪುಟ್ಟ ಸರದಾರರ ಸಂಗಡ ಆಗಾಗ

ಕದನಗಳನ್ನು ಅವರಿಗೆ ಹೂಡುವ ಪ್ರಸಂಗವು ಬರುತ್ತಿತ್ತು ಆದರೆ ವಿಜಯ ನಗರದ ರಾಯನೊಡನೆ ಸೌಖ್ಯದಿಂದಲೇ ಇದ್ದರು. ಕೊನೆ ಕೊನೆಗೆ ಅಂದರೆ ಇ. ಸ. ೧೫೫೧ರಲ್ಲಿ ಬಿಜಾಪುರ ಮತ್ತು ಅಹಮ್ಮದನಗರದ ಸುಲ್ತಾನರೊಡನೆ ಮಿತ್ರತ್ವದ ಒಪ್ಪಂದವನ್ನು ಮಾಡಿಕೊಂಡರು. ಪೋರ್ಚುಗೀಜರೊಡನೆ ಮಾಡಿಕೊಂಡ ಅನೇಕ ಒಪ್ಪಂದಗಳಲ್ಲಿ ಒಂದನ್ನೂ ಕೂಡ ಮೀರಿದದ್ದು ಹಿಂದು ಸರದಾರರಲ್ಲಿ ಅಥವಾ ವಿಜಯನಗರದ ರಾಜರಲ್ಲಿ ಕಂಡು ಬಂದಿಲ್ಲ. ಆದರೆ ಮುಸ್ಲಿಮರಲ್ಲಿ ಒಂದನ್ನು ಕೂಡ ನಡೆಸಿಕೊಂಡು ಹೋಗದಂತೆಯೂ ತೋರಿಲ್ಲ. ಹಿಂದೂ ದೇಶ ಮತ್ತು ಪ್ರಜೆಗಳನ್ನು ಹಿಂಸಿಸುವದೂ ಅವರ ಧನಕರುಗಳನ್ನು ಸುಲಿಯುವದೂ ಹಿಂದೂ ದೇಶವನ್ನು ಹಾಳುಗೆಡುವದೂ ದೇವರಿಂದ ದೊರೆತ ದೇಣಿಗೆಯೆಂದು ಯುರೋಪಿಯನ್ನನು ತಿಳಿದಿದ್ದರು. ಒಂದು ಒಳ್ಳೇ ಮಾತನ್ನು ಕೂಡ ಹಿಂದುಗಳಿಗೆ ಆಡುವದನ್ನು ಅವರು ಅರಿಯರು. ಸರ್ವ ವಿಧದಿಂದಲೂ ನೀಚತನದಿಂದ ಕ್ರೂರತನದಿಂದ ವರ್ತಿಸಿದರು. ಎಂದು ಪಾಯಸ್ ಎಂಬ ಇತಿಹಾಸಕಾರನು ಪೋರ್ಚುಗೀಜರನ್ನು ಉದ್ದೇಶಿಸಿ ಬರೆಯುತ್ತಾನೆ. ಅದೇ ಪಾಯಸ್‌ನು ಕೃಷ್ಣದೇವರಾಯನು ಸರ್ವಗುಣ ಪರಿಪೂರ್ಣನಾದ ದೇವಸ್ವರೂಪಿ ರಾಜನೆಂದು ವರ್ಣಿಸುತ್ತಾನೆ. ಇಂಥ ರಾಯನೊಡನೆ ಕೂಡ ಈ ಯುರೋಪಿಯನ್ನರು ಹೇಯವಾಗಿ ನಡೆದುಕೊಂಡ ಉದಾಹರಣೆಯೊಂದು ಕೊಟ್ಟರೆ ಸಾಕು. ಪೋರ್ಚುಗೀಜರು ಬಹಿರಂಗದಲ್ಲಿ ರಾಯನಲ್ಲಿ ಮಿತ್ರತ್ವವನ್ನೂ ರಾಜ್ಯದೊಡನೆ ಒಪ್ಪಂದವನ್ನೂ ಶಾಂತತೆ ಕಾಯ್ದುಕೊಂಡು ಹೋಗುವ ಸೋಗನ್ನು ತೋರಿಸುತ್ತಿದ್ದರು.

-ಆದರೆ ಇ. ಸ. ೧೫೫೫ರಲ್ಲಿ ಗೋವೆಯ ಗವ್ಹರ್ನರನು ಅತ್ಯಂತ ಗೌಪ್ಯರೀತಿಯಿಂದ ಒಂದು ದೊಡ್ಡ ಹಡಗುಪಡೆಯನ್ನೂ ಮೂರು ಸಾವಿರ ಯೋಧರ ಸೈನ್ಯವನ್ನೂ ಸಿದ್ಧಪಡಿಸಿ ಒಳಗೇ ಇಟ್ಟುಕೊಂಡಿದ್ದನು. ಇವನ ಮಹತ್ವಾಕಾಂಕ್ಷೆಯು ಪ್ರಬಲವಾಗಿದ್ದಿತು. ತನ್ನ ಇಡೀ ಸೈನ್ಯವನ್ನು ಸಮುದ್ರದಲ್ಲಿಯೇ ಕನ್ಯಾಕುಮಾರಿಯನ್ನು ಸುತ್ತು ಹಾಕಿ ಮದ್ರಾಸದ ಸನಿಯದಕ್ಷಿಣ (ಆಗಿನ ಕಾಲದ ಬಂದರವಾದ) ಸೆನ್‌ಥಾಮಸ್‌ದಲ್ಲಿ ಇಳಿಸಿ

ಭೂಮಿಯ ಮೇಲಿಂದ ತಿರುಪತಿ ದೇವಾಲಯವನ್ನು ಮುತ್ತಿ ಅಲ್ಲಿಯ ಅಗಣಿತ ಧನಕನಕ ವಜ್ರ ವೈಢೂರ್ಯ ಮುತ್ತು ರತ್ನಗಳನ್ನು ಎತ್ತಬೇಕೆಂಬುದೇ ಇದ್ದಿತು. ಆದರೆ ಪೋರ್ತುಗೀಜರ ಹಡಗಪಡೆ ಹೋದಕೂಡಲೇ ಪ್ರಚಂಡ ಬಿರುಗಾಳಿಯು ಸಮುದ್ರದಲ್ಲಿ ಬೀಸತೊಡಗಿತು. ಹಡಗುಗಳು ಮುಂದೆ ಸಾಗದಾದವು ಈ ಯೋಜನೆಯನ್ನು ಪೋರ್ತುಗೀಜರು ಬಿಟ್ಟು ಬಿಟ್ಟರು. ಆದರೂ ಪಶ್ಚಿಮ ಕರಾವಳಿಯಲ್ಲಿಯೇ ಅನೇಕ ಸಂಪತ್ ಸಮೃದ್ಧವಾದ ದೇವಾಲಯಗಳನ್ನೆಲ್ಲ ನಾಶಮಾಡಿ ಸಿರಿಸಂಪತ್ತನ್ನು ಹೇರಳವಾಗಿ ಸಂಪಾದಿಸಿ ತೃಪ್ತರಾದರು. ಪೋರ್ತುಗೀಜರ ವಿರುದ್ಧವಾಗಿ ಅಲ್ಲಿಯ ದೇವಾಲಯಗಳಲ್ಲಿಯ ಬ್ರಾಹ್ಮಣರೂ ಮತ್ತು ಹಿಂದೂ ಸರದಾರರೂ ಎಂದೂ ಅಡ್ಡಬಂದಿದ್ದಿಲ್ಲ. ಆದರೂ ಕಾಲುಕೆದರಿ ಈ ಯುರೋಪಿಯನ್ನರು ಅವರನ್ನು ಹಿಂಸಿಸಿದರು.

ವಿಶೇಷವಾಗಿ ಅಚ್ಯುತರಾಯನ ಕಾಲದಲ್ಲಿ ದಕ್ಷಿಣ ಹಿಂದುಸ್ಥಾನದ ಸಕಲ ದೇವಾಲಯಗಳಿಗೆ ಸಂಪತ್ತಿನ ಕಾಣಿಕೆ ಮತ್ತು ಭೂಮಿಯ ಜಾಹಗೀರುಗಳನ್ನು ವಿಜಯನಗರವು ಬಹು ದೊಡ್ಡ ಪ್ರಮಾಣದಲ್ಲಿ ನೀಡಿತ್ತು ಇ. ಸ. ೧೫೪೦ ಅಕ್ಟೋಬರ ೧೨ನೇ ದಿವಸ ವೇದವೇದಾಂತ ಪಾರಂಗತರಾದ ಅಸಂಖ್ಯಾತ ಬ್ರಾಹ್ಮಣರಿಗೆ ಅಚ್ಯುತರಾಯನು ಬಹಳ ಜಾಹಗೀರುಗಳನ್ನು ದಾನ ಮಾಡಿದನೆಂದು ವಿಠ್ಠಲದೇವಾಲಯದಲ್ಲಿಯ ಶಿಲಾಲೇಖದಿಂದ ಗೊತ್ತಾಗುವದು. ಅಚ್ಯುತರಾಯನು ೧೫೪೨ರ ಜನೇವರಿ ೨೫ ರಲ್ಲಿ ತೀರಿದರು.

---

# ೧೦. ಅಳಿಗಾಲ ಪ್ರಾರಂಭ

ಇ. ಸ. ೧೫೪೩ರಲ್ಲಿ ಸದಾಶಿವರಾಯನು ಪಟ್ಟವನ್ನೇರಿದನು. ರಾಜ್ಯದ ಸಕಲ ಕಾರಭಾರಗಳೆಲ್ಲವೂ ರಾಮರಾಯ, ತಿರುಮಲ ಮತ್ತು ವೆಂಕಟಾದ್ರಿಯ ಕೈಯಲ್ಲಿಯೇ ಇದ್ದವು. ಮೂವರು ಬಂಧುಗಳು ಮಹಾ ಮಂಡಲೇಶ್ವರ ರೆಂಬ ಬಿರುದಿನಿಂದ ಮೆರೆದು ಸದಾಶಿವನೇ ರಾಜಾಧಿರಾಜನೆಂದು ಬಹಿರಂಗ ಪಡಿಸಿ ಆಳುತ್ತಿದ್ದುದು ಸೋಜಿಗದ ವಿಷಯವಾಗಿದೆ. "ಮಹಾರಾಜನಾದ ಸದಾಶಿವರಾಯನ ಪಾದಪ್ರಸಾದದಿಂದ ಮಹಾಮಂಡಲೇಶ್ವರರಾದ ರಾಮ ರಾಯ ಮತ್ತು ತಿರುಮಲರಾಜರು ವೆಲ್ಲೂರಿನ ದೇವಾಲಯಕ್ಕೆ ಜಾಹಗೀ ರನ್ನು ಕೊಟ್ಟರು" ಎಂದು ಶಿಲಾಲೇಖವು ಸಾರುತ್ತದೆ. ವರುಷಕ್ಕೆ ಒಂದು ನಿರ್ಧಿಷ್ಟ ದಿವಸ ಈ ಮೂವರು ಬಂಧುಗಳು ಸದಾಶಿವರಾಯನಲ್ಲಿಗೆ ಹೋಗಿ ಅವನ ಪಾದದಮೇಲೆ ತಲೆಯನ್ನಿಟ್ಟು ನಮಸ್ಕರಿಸಿ ಅವನ ಸ್ಥಾನಕ್ಕೆ ಮರ್ಯಾ ದೆಯನ್ನೀಯುತ್ತಿದ್ದರಂತೆ.

ಕೃಷ್ಣದೇವರಾಯನಿಗೆ ಈರ್ವರು ಮಲತಮ್ಮಂದಿರಿದ್ದರೆಂದು ಗೊತ್ತಾ ಗಿದೆ. ರಂಗರಾಯ ಮತ್ತು ಅಚ್ಯುತರಾಯನೆಂದು. ಸದಾಶಿವನು ತಂಗಿಯ ಮಗನೆಂದು ಒಂದು ಕಡೆ ಹೇಳಿದೆ. ಅಚ್ಯುತರಾಯನೇ ರಾಜನಾಗ ಬೇಕೆಂದು ನಿಯಮಿಸಲಾಗಿತ್ತು. ಈ ಅಚ್ಯುತರಾಯನು ೨ನೇ ನರಸಿಂಹ ರಾಯನ ಮಗನೆಂದು "ಮನಚರಿತ್ರಂ'' ಎಂಬ ಒಂದು ತೆಲಗು ಪುಸ್ತಕದಲ್ಲಿ ಹೇಳಿದೆ. ಸದಾಶಿವನು ಕೃಷ್ಣದೇವರಾಯನ ತಂಗಿಯ ಮಗನೆಂದು ಬಹಳ ಕಡೆ ಹೇಳಿದ್ದರೂ ಇವನು ಅಚ್ಯುತರಾಯನ ಮಗನೆಂದು ಒಂದು ಕಡೆಗೆ ಉಲ್ಲೇಖವಿದೆ. ಕಾಂಜೀವರಂದಲ್ಲಿಯ ಶಿಲಾಲೇಖನದಲ್ಲಿ "ಅಚ್ಯುತರಾಯ ನಿಂದ ಅವನ ರಾಣಿಯಾದ ವರದಾದೇವಿಯಲ್ಲಿ ವೆಂಕಟನೆಂಬ ಪುತ್ರನು ಜನಿ ಸಿದನು. ಈ ವೆಂಕಟನನ್ನು ಪಟ್ಟಕ್ಕೆ ತಂದ ಕೆಲವೇ ದಿವಸಗಳಲ್ಲಿ ಇವನು ಸತ್ತಿದ್ದರಿಂದ ಇನ್ನೂ ಚಿಕ್ಕವನಾಗಿರುವ ಸದಾಶಿವನಿಗೆ ಪಟ್ಟವಾಯಿತು" ಎಂದು ಬರೆದಿದೆ.

ರಾಮರಾಯ ತಿರುಮಲ ಮತ್ತು ವೆಂಕಟಾದ್ರಿಗಳು ರಂಗರಾಯ
ಮಕ್ಕಳೆಂದು ಹೇಳಲು ಅನೇಕ ಐತಿಹಾಸಿಕ ಆಧಾರಗಳಿವೆ. ಕೃಷ್ಣದೇ
ರಾಯನ ಹಿರಿಯಮಗಳನ್ನು ರಾಮರಾಯನು ಲಗ್ನವಾದ. "ಅಳಿಯ ರಾ
ರಾಯನ ಆಳಿಕೆ'' ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿದೆ. ೨ನೇ ಮಗಳ
ತಿರುಮಲರಾಯನು ವಿವಾಹವಾದನು. ರಾಮರಾಯ ಲಗ್ನದ ಸಮಯದ
ಅವನ ಹೆಂಡತಿಯು ಇನ್ನೂ ಮಗುವಾಗಿದ್ದಳೆಂದು ಗೊತ್ತಾಗಿದೆ ಕೃ
ದೇವರಾಯನು ಸಾಯುವಾಗ ಅವನಿಗೆ ೧೮ ತಿಂಗಳದ ಒಂದು ಗಂ
ಮಗು ಜನಿಸಿತ್ತೆಂದು ನ್ಯೂನಿಜ್ಜನು ಬರೆಯುತ್ತಾನೆ. ಈ ಕೂಸಿನ ಗ
ಏನಾಯಿತು ಎಲ್ಲಿಹೋಯಿತು ಹೇಗೆ ಬೆಳೆಯಿತು ಎಂಬ ಯಾವ ವಿಷಯ
ಇನ್ನೂ ಶೋಧವಾಗಿಲ್ಲ.

ಇವೆಲ್ಲವುಗಳಿಂದ ಇ. ಸ. ೧೫೪೨ರಲ್ಲಿ ಅಚ್ಯುತರಾಯನು ತೀ
ಕೂಡಲೇ ರಾಜಧಾನಿಯಲ್ಲಿ ಅಂತಃಕಲಹವೆದ್ದುದು ಸಹಜವಿದೆ. ರಾಜ್ಯ
ಆಧಾರಸ್ತಂಭರಾದ ಸರದಾರರೂ ಸೇನಾಪತಿಗಳೂ ಮಂತ್ರಿಗಳೂ ಪಟ್ಟ
ಸಲುವಾಗಿ ಜಗಳದೆಬ್ಬಿಸಿದರು. ಅಚ್ಯುತರಾಯನು ಸತ್ತಾಗ ಅವ
ಮಗನು ಇನ್ನೂ ಮಗುವಾಗಿದ್ದವನು, ತನ್ನ ಕಕ್ಕನಾದ ರಂಗರಾಯ
ಸ್ವಾಧೀನದಲ್ಲಿದ್ದನು. ದರಬಾರದ ಸಕಲರೂ ಈ ಮಗು ವೆಂಕಟನ
ತಮ್ಮ ಸ್ವಾಧೀನಪಡಿಸಬೇಕೆಂದೂ ಅವನನ್ನು ಪಟ್ಟದಲ್ಲಿ ಕುಳ್ಳಿರಿಸಿ ಅವ
ಪ್ರಬುದ್ಧವಾಗುವವರೆಗೆ ಈರ್ವರು ಮಂತ್ರಿಗಳು ರಾಜ್ಯಸೂತ್ರಗಳನ್ನು ವಹಿ
ಬೇಕೆಂದೂ ತೀರ್ಮಾನಿಸಿದರು. ಈ ಈರ್ವರು ಮಂತ್ರಿಗಳು ಸಹ ದರ
ರವೇ ಆರಿಸಬೇಕೆಂದು ನಿರ್ಣಯವಾಗಿತ್ತು. ಇದನ್ನು ಒಪ್ಪಿದರೆ ತನ್ನ ಅ
ಕಾರವು ನಷ್ಟವಾಗುವದೆಂದರಿತು ತಿರಸ್ಕರಿಸಿದನು. ಮತ್ತು ರಾಜ್ಯದಲ್ಲಿ ತ
ಹಿಸೆಯನ್ನು ಬೇಡಿದನು. ಇದರಿಂದ ನಿರಾಶರಾಗಿ ಎಲ್ಲ ಸರದಾರರೂ ತಮ್ಮ
ತಮ್ಮ ಜಹಗೀರುಗಳಿಗೆ ಹೊರಟುಹೋದರು. ಇನ್ನು ಮೇಲೆ ಪ್ರಬಲವಾ
ಒಂದೇ ಒಂದು ಹಿಂದೂ ರಾಜ್ಯವಾಗಿ ವಿಜಯನಗರವು ಉಳಿಯಲಾರದೆಂ
ಅರಿತು ತಮ್ಮ ರಕ್ಷಣೆಯ ವ್ಯವಸ್ಥೆಗಾಗಿ ತಾವು ನಿಂತು ಸ್ವತಂತ್ರರಾ
ಬಿಟ್ಟರು. ರಾಣಿ ವಿಧವೆ ವರದಾದೇವಿಯು ಚಿಂತೆಯಲ್ಲಿ ಮುಳುಗಿದಳ

ಮಗನೂ ಇಲ್ಲ. ರಾಜ್ಯವೂ ಹಾಳಾಗುವದು ಎಂದು ಯೋಚಿಸಿದಳು. ಕೊನೆಗೆ ಬಿಜಾಪುರದ ಶಹನಿಗೆ ವಿನಂತಿ ಪತ್ರವನ್ನು ಕಳಿಸಿದಳು. "ನನ್ನ ಮಗ ವೆಂಕಟನನ್ನು ತಂದು ವಿಜಯನಗರದ ಸಿಂಹಾಸನದ ಮೇಲೆ ಕುಳ್ಳಿರಿಸಲು ದಯ ಮಾಡಿ ಸಹಾಯ ಮಾಡು. ಅದಕ್ಕಾಗಿ ಸ್ವತಃ ಬಾ. ಕೆಲಸ ಮಾಡಿದರೆ ನಿನಗೆ ಸಂಪತ್ತನ್ನು ಕೊಡುವೆನು" ಎಂದು ಬರೆದಿದ್ದಳು.

ಸುಲ್ತಾನನು ಹೆಣ್ಣುಮಗಳ ವಿನಂತಿಯನ್ನು ಮನ್ನಿಸಿ, ವಿಜಯನಗರಕ್ಕೆ ಹೊರಟನು. ಇದೇ ವೇಳೆಗೆ ಕೋಟೆಯಲ್ಲಿ ಬಂದಿಯಾಗಿರಿಸಲ್ಪಟ್ಟ ರಂಗರಾಯನು ಪಾರಾಗಿದ್ದನು. ಅವನಿಂದ ದೂತರು ಬಂದು ದಾರಿಯಲ್ಲಿಯೇ ಬಿಜಾಪುರ ಶಹನನ್ನು ಕಂಡರು. ಅವನಿಗೆ ತೃಪ್ತಿಯಾಗುವಷ್ಟು ಕಾಣಿಕೆಯನ್ನಿತ್ತನು. ರಂಗರಾಯನನ್ನು ವಿಜಯನಗರದ ಪಟ್ಟದಲ್ಲಿರಿಸಬೇಕೆಂದು ಬೇಡಿದನು. ಸುಲ್ತಾನನಿಗೆ ಪರಮ ಸಂತೋಷವಾಯಿತು. ರಂಗರಾಯನಿಂದಂತೂ ಅನಿರೀಕ್ಷಿತವಾಗಿ ಧನ-ಕನಕಗಳ ಕಾಣಿಕೆ ಬಂದಿತು. ಇನ್ನು ಮಹಾರಾಣಿಯಿಂದಲೂ ಸಂಪತ್ತನ್ನು ಶಕ್ಯವಿದ್ದಷ್ಟು ಸುಲಿದುಕೊಂಡು ತಾನೇ ವಿಜಯನಗರದ ಪಟ್ಟವನ್ನಾಕ್ರಮಿಸಬೇಕೆಂದು ಯೋಚಿಸುತ್ತ ಮುಂದೆ ಸಾಗಿದನು.

ಆದರೆ ಮುಂದಿನ ಪರಿಸ್ಥಿತಿಗಳನ್ನು ನೆನೆದು ಹಿಂದುಗಳು ಬಹಳ ಅಂಜಿದರು. ಆದಿಲಶಹನನ್ನು ರಾಜ್ಯದೊಳಗೆ ಬಿಡುವದೊಳಿತಲ್ಲವೆಂದು ರಂಗರಾಯನನ್ನೇ ಪಟ್ಟದ ಮೇಲೆ ಕೂಡ್ರಿಸಿ ಅವನ ಆಜ್ಞೆ ಸ್ವೀಕರಿಸಿ ಆದಿಲ ಶಹನನ್ನು ಸೈನ್ಯಸಮೂಹದಿಂದ ಎದುರಿಸಿ ಸೋಲಿಸಿ ಕಳಿಸಿಬಿಟ್ಟರು. ರಂಗರಾಯನು ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ನಿಜವಾದ ಅಧಿಕಾರಿಯಾದ ಬಾಲಕ ವೆಂಕಟನನ್ನೂ ಮಹಾರಾಣಿಯ ತಮ್ಮಂದಿರು ಇಬ್ಬರನ್ನೂ ಕೊಲೆ ಮಾಡಿಸಿದನು. ಆಮೇಲೆ ದರಬಾರದ ಪ್ರಮುಖರೂ ಬಲಾಢ್ಯರೂ ಆದ ಸರದಾರರನ್ನು ಒಬ್ಬೊಬ್ಬರನ್ನಾಗಿಯೇ ಕರೆಸಿ ಅವರ ಕಣ್ಣುಗಳನ್ನು ಕೀಳಿಸ ತೊಡಗಿದನು. ಇದು ಕೂಡಲೇ ಗೊತ್ತಾಯಿತು. ಸರದಾರರೂ ಜಮೀನದಾರರೆಲ್ಲರೂ ಸಿಟ್ಟಿಗೆದ್ದು ರಂಗರಾಯನ ವಿರುದ್ಧ ಸಂಚು ಹೂಡಿದರು.

ಆದಿಲ್‌ಶಹನಿಗೆ ಒತ್ತಾಯಪೂರ್ವಕವಾದ ಔತಣವನ್ನೇ ಕೊಟ್ಟರು. ರಾಕ್ಷಸನನ್ನು ಕೊಂದು ತಮ್ಮನ್ನು ರಕ್ಷಿಸಬೇಕೆಂದೂ ರಾಜ್ಯದ ಹಿತವನ್ನು ಪ್ರಜೆಗಳ ಸುಖವನ್ನು ನೀಡಲು ವಚನವಿತ್ತರೆ ಸುಲ್ತಾನನೇ ಸ್ವತಃ ವಿಜಯ ನಗರದ ಪಟ್ಟವೇರಬಹುದೆಂದೂ ಅದಕ್ಕೆಲ್ಲ ತಮ್ಮ ಸಹಾಯವನ್ನು ನೀಡುವ ರೆಂದೂ ತಿಳಿಸಿದರು.

ಆದಿಲ್‌ಶಹನು ವಿಜಯನಗರಕ್ಕೆ ಬಂದನು. ರಾಜನೆಂದೇ ಇವನನ್ನು ಅನೇಕ ಸರದಾರರು ಸೂಚಿಸಿದರು. ಆದರೆ ಇವನ ಕ್ರೌರ್ಯವೂ ನಿರ್ದಯ ತ್ವವೂ ಸಹ ಪ್ರಜರಲ್ಲಿ ಕ್ಷೋಭೆಯನ್ನುಂಟು ಮಾಡಿತು. ಎಲ್ಲರೂ ಸುಲ್ತಾನನ ವಿರುದ್ಧ ಬಂಡೆದ್ದರು. ತನ್ನ ಜೀವ ರಕ್ಷಣೆಯು ಸಂಶಯವೇ ಬಲವಾಗಿ ಇವನನ್ನು ಓಡಿಸಹತ್ತಿದ್ದರಿಂದ ಸುಲ್ತಾನನು ವಿಜಯನಗರವನ್ನು ಬಿಟ್ಟು ಬಿಜಾಪುರಕ್ಕೆ ಹೊರಟುಬಿಟ್ಟನು. ಇದೇ ವೇಳೆಗೆ ಮಹಾ ಕರ್ತೃತ್ವಶಾಲಿಯೂ ವೀರಾಧಿವೀರನೂ, ರಾಜನ ಅಳಿಯನೂ ಆದಂಥ ರಾಮರಾಯನು ತನ್ನ ಉರ್ವರು ತಮ್ಮಂದಿರೊಂದಿಗೆ ವಿಜಯನಗರಕ್ಕೆ ಬಂದು ಸಕಲರಾಜ್ಯಸೂತ್ರ ಗಳನ್ನೂ ವಹಿಸಿಕೊಂಡನು.

ಇನ್ನು ಸದಾಶಿವನ ಆಳಿಕೆಯಲ್ಲಿ ಏನೇನು ಸಂಭವಿಸಿದವೆಂಬುದನ್ನು (೧೫೪೨ ರಿಂದ ೧೫೬೭ರ ವರೆಗೆ) ನೋಡುವದೊಳಿತು. ಇ. ಸ. ೧೫೪೩ರಲ್ಲಿ ಬಹ್ರಾನ್ ನಾಯಜಾಮಶಹನು ಗೋವಳಕೊಂಡದ ಸುಲ್ತಾನನಾದ ಜಮ್ಷೆದ ಕುತುಬಶಹನೊಂದಿಗೂ ರಾಮರಾಯನೊಂದಿಗೂ ಒಪ್ಪಂದವನ್ನು ಮಾಡಿ ಕೊಂಡು ಬಿಜಾಪುರದ ಮೇಲೆ ಏರಿಹೋದನು. ಇದೇ ವೇಳೆಗೆ ರಾಮರಾ ಯನು ತನ್ನ ತಮ್ಮನಾದ ವೆಂಕಟಾದ್ರಿಯನ್ನು ಸೈನ್ಯಸಮೇತವಾಗಿ ರಾಯ ಚೂರು ಹಾಗೂ ನವಾಬ ಕೋಟೆಗಳನ್ನು ವಶಪಡಿಕೊಳ್ಳಲು ಕಳಿಸಿದನು. ನಾಯಜಾಮಶಹನು ಇನ್ನೊಂದು ಕಡೆಗೆ ಸಾಗಿ ಬಂದನು. ಹೀಗಾಗಿ ಮೂರು ದಿಕ್ಕಿನಲ್ಲಿಯೂ ಆದಿಲ್‌ಶಹನಿಗೆ ಗಂಡಾಂತರವೊದಗಿತು. ಉಪಾಯಗಾಣದೇ ಈ ಹೊಸ ಶಹನ ಸಹಾಯಕ್ಕಾಗಿಯೂ ಉಪದೇಶಕ್ಕಾಗಿಯೂ ಕೂಡಲೇ ಹೊರಟು ಬರಬೇಕೆಂದು ಅಸದಖಾನನಿಗೆ ಬೆಳಗಾವಿಗೆ ಹೇಳಿಕಳಿಸಿದನು.

ಅಸದಖಾನನು ಹೊರಟುಬಂದನು. ಬಹ್ರಾಮಶಹನೊಂದಿಗೆ ಒಪ್ಪಂದ ಮಾಡಿಕೊಂಡನು. ಆ ಕರಾರದ ಪ್ರಕಾರ ಬಿಜಾಪುರದ ಸಮೃದ್ಧವಾದ ಸೊಲ್ಲಾಪುರ ಜಿಲ್ಲೆ ಮತ್ತು ಅದರ ಸುತ್ತಲಿನ ಪ್ರದೇಶವನ್ನೆಲ್ಲ ಶಹರಿಗೆಬಿಟ್ಟು ಕೊಟ್ಟಿತು. ಅಸದನು ವಿಜಯನಗರಕ್ಕೆ ಶಾಂತಿದೂತನನ್ನೂ ಕಳಿಸಿದನು.

ಇವೆಲ್ಲವುಗಳಾದ ಬಳಿಕ ಸ್ವತಃ ಅಸದಖಾನನು ಸೈನ್ಯಸಮೇತ ಗೋವಳಕೊಂಡವನ್ನು ಮುತ್ತಿದನು. ಗೋವಳಕೊಂಡದ ಕೋಟೆಯ ಗೋಡೆಯ ಪಕ್ಕದಲ್ಲಿಯೇ ಘೋರ ಕದನವಾಯಿತು. ಕುತುಬಶಹನೂ ಅಸದಖಾನನೂ ದ್ವಂದ್ವವಾಗಿ ಯುದ್ಧಮಾಡಿದರು. ಅಸದನು ತನ್ನ ಚಿಕ್ಕ ಕಠಾರಿಯಿಂದ ಕುತುಬಶಹನ ಮುಖಕ್ಕೆ ದೊಡ್ಡ ಗಾಯವನ್ನು ಮಾಡಿದನು ಶಹನು ಓಡಿಹೋದನು. ಗೋವಳಕೊಂಡವು ಪರಾಜಿತವಾಯಿತು.

ಈ ಕಾಲಕ್ಕೆ ಅಫೊಂಜೊ ಡಿಸೋಜಾ ಎಂಬುವವನು ಪೋರ್ಚುಗೀಜ ಗವ್ಹರ್ನರನಾಗಿದ್ದನು. ಭಟಕಳದ ರಾಣಿಯು ಪೋರ್ಚುಗಾಲಕ್ಕೆ ಕಪ್ಪ-ಕಾಣಿಕೆಗಳನ್ನು ಸಲ್ಲಿಸಲಿಲ್ಲವೆಂಬ ನೆವಹೂಡಿ ದಂಡಯಾತ್ರೆ ಕೈಕೊಂಡು ಅಸಂಖ್ಯ ಹಿಂದುಗಳನ್ನು ಕೊಲ್ಲುತ್ತ ಗ್ರಾಮಗಳಿಗೆ ಬೆಂಕಿಹಚ್ಚಿ ಸುಡುತ್ತ, ರಾಣಿಯ ನಗರವನ್ನು ಕೈವಶ ಮಾಡಿಕೊಂಡು ಅದನ್ನು ಸಂಪೂರ್ಣವಾಗಿ ಸುಟ್ಟನು ಅಲ್ಲಿಯ ಸಮಸ್ತ ಹಿಂದೂ ನಾಗರಿಕರನ್ನು ಖಡ್ಗಕ್ಕೆ ಆಹುತಿ ಕೊಟ್ಟನು. ರಾಣಿಯು ಶರಣಾಗತಳಾದಳು.

ಇ. ಸ. ೧೫೪೮ರಲ್ಲಿ ರಾಮರಾಯನ ಪ್ರೇರಣೆಯಿಂದ ಬಹ್ರಾರು ಶಹರು ಇಬ್ರಾಹಿಮ ಆದಿಲಶಹನ ಮೇಲೇರಿ ಹೋಗಿ ಸೋತು ಹಿಂತಿರುಗಿದನು. ಈ ವಿಜಯದಿಂದ ಬಿಜಾಪುರದ ಶಹನು ಅಖಂಡ ಉನ್ಮತ್ತನಾದನು. ಹಠಿಯೂ, ನೀಚನೂ ಆದನು. ನಾಯಜಾಮ ಶಹನ ರಾಯಭಾರಿಗಳನ್ನು ಅತ್ಯಂತ ಹೀನವಾಗಿ ನಡೆಸಿಕೊಂಡು ಅವಮಾನಗೊಳಿಸಿ ಕಳಿಸಿಬಿಟ್ಟನು. ತನ್ನ ಸರದಾರರನ್ನು ಕ್ರೂರ ರೀತಿಯಿಂದ ನಡೆಸಿಕೊಳ್ಳತೊಡಗಿದನು.

ಕಡ್ಡಿಯಂಥ ತಪ್ಪುಗಳಿಗೆ ಸಹ ಘೋರ ಶಿಕ್ಷೆಗಳನ್ನು ವಿಧಿಸಿ ಸಂತೋಷಪಡ ತೊಡಗಿದನು. ರಾಜ್ಯದಲ್ಲಿ ಅಸಂತೋಷ, ಅತೃಪ್ತಿಗಳು ಪ್ರಬಲವಾದವು.

ಈ ವೇಳೆಗೆ ಬಹ್ರಾಮಶಹನು ಬಿಜಾಪುರವನ್ನು ಪುನಃ ಮುತ್ತಿ ತನಗೆ ಬೇಕಾದ ಪ್ರದೇಶಗಳನ್ನೆಲ್ಲ ತೆಗೆದುಕೊಂಡು ಬಿಟ್ಟನು. ಸರದಾರರು ನಾಯಕರುಗಳೆಲ್ಲ ಕೂಡಿ ಇಬ್ರಾಮನನ್ನು ಪಟ್ಟದಿಂದ ತಳ್ಳಿ ಅವನ ತಮ್ಮನಾದ ಅಬ್ದುಲ್ಲನನ್ನು ಶಹನನ್ನಾಗಿ ಮಾಡಿದರು. ಆದರೆ ಬಿಜಾಪುರದ ಒಳಸಂಚುಗಳು ಬಹಳವಾಗಿ ನಡೆದದ್ದರಿಂದ ಹೆದರಿ ಅಬ್ದುಲ್‌ನು ಗೋವೆಯ ಆಶ್ರಯ ಪಡೆಯಲು ಹೋದನು. ಡಿಸೋಜಾನು ಅಬ್ದುಲ್‌ನನ್ನು ಆದರದಿಂದ ಸ್ವಾಗತಿಸಿ ಆಶ್ರಯವನ್ನಿತ್ತನು. ಮತ್ತು ಇಬ್ರಾಹಿಮನು ಅಧಿಕಾರ ಕಸಿದುಕೊಂಡು ಗೋವೆಗೆ ಪತ್ರ ಬರೆದನು. ಅಬ್ದುಲ್‌ನನ್ನು ಯಾರಿಗೂ ಸಿಗದಂಥ ಸ್ಥಳಕ್ಕೆ ಕಳಿಸಿಬಿಟ್ಟರೆ ತಾನು ಪೋರ್ಚುಗೀಜರಿಗೆ ಸಿರಿಸಂಪತ್ತಿನ ಪ್ರದೇಶವನ್ನು ಉಂಬಳಿ ಹಾಕಿಕೊಡುವೆನೆಂದು ತಿಳಿಸಿದನು. ಇದಕ್ಕೆ ಡಿಸೋಜಾ ಒಪ್ಪಿದನು. ಸಲ್ಸಟ್ಟಿ, ಬರ್ದೇಶಗಳು ಗೋವೆಗೆ ಒಪ್ಪಿಸಲ್ಪಟ್ಟಿತಲ್ಲದೇ ಅಸದಖಾನನು ಸಂಗ್ರಹಿಸಿದ ಸಕಲ ಧನ-ಕನಕ, ವಜ್ರವೈಢೂರ್ಯ, ಮುತ್ತು-ರತ್ನ ಮೊದಲಾದ ಸಕಲ ಸಂಪತ್ತೆಲ್ಲವನ್ನೂ (ಬೆಳಗಾವಿಯಲ್ಲಿದುದನ್ನೆಲ್ಲವನ್ನೂ) ಡಿಸೋಜಾನಿಗೆ ವೈಯಕ್ತಿಕ ಕಾಣಿಕೆಯೆಂದು ಕೊಡಲಾಯಿತು.

ಈ ರೀತಿ ಸಿಗತಕ್ಕ ಎಲ್ಲ ಲಂಚವನ್ನೂ ಸ್ವೀಕರಿಸಿದ ಡಿಸೋಜಾನು ಅಬ್ದುಲ್ಲಾನನ್ನು ಕನಕನೂರದ ವರೆಗೆ ಕರೆದೊಯ್ದು ಪುನಃ ಅವನನ್ನು ಗೋವೆಗೆ ಕರೆತಂದನು. ಮರುವರುಷವೇ ಡಿಸೋಜಾನ ಬದಲು ಹೊಸ ಗವ್ಹರ್ನರನು ಡಿ. ಕ್ಯಾಸ್ಟ್ರೋ ಎಂಬುವನು ಬಂದನು. ಇಬ್ರಾಹಿಮನು ತನ್ನ ತಮ್ಮನಾದ ಅಬ್ದುಲ್ಲಾನನ್ನೂ ತನಗೆ ಒಪ್ಪಿಸಬೇಕೆಂದು ಕೇಳಿಕೊಂಡನು. ಕ್ಯಾಸ್ಟ್ರೋ ಹಿಂದಿನ ವೃತ್ತಾಂತವನ್ನೆಲ್ಲ ಅರಿತು ಅಬ್ದುಲ್ಲನನ್ನು ಬಿಜಾಪುರಕ್ಕೆ ಕಳಿಸಲಾಗುವದಿಲ್ಲವೆಂದು ಸ್ಪಷ್ಟವಾಗಿ ಹೇಳಿಕಳಿಸಿದನು. ಇಬ್ರಾಹಿಮ ಆದಿಲಶಹನು ಉಪಾಯಗಾಣದೇ ಇ.ಸ. ೧೫೪೭ ಫೆಬ್ರುವರಿಯಲ್ಲಿ ಕ್ಯಾಸ್ಟ್ರೋನೊಂದಿಗೆ ಬಂದು ಒಪ್ಪಂದವನ್ನು ಮಾಡಿಕೊಂಡನು. "ಪೋರ್ಚುಗಾಲದ

ರಾಜನಿಗೆ ಇಬ್ರಾಹಿಮನು ಅಬ್ದುಲ್ಲಾನ ಸಲುವಾಗಿ ರಾಯಭಾರಿಯಿಂದ ಕೆಲವು ವಿಷಯಗಳನ್ನು ಬರೆದು ತಿಳಿಸಿರುವನೆಂದೂ ಅವುಗಳಿಗೆ ಉತ್ತರ ಬರುವವರೆಗೆ ಅಬ್ದುಲ್ಲನಿಗೆ ಯಾವುದೇ ದೇಶದ (ಅಂದರೆ ದಕ್ಷಿಣದ ಯಾವ ಪರಗಣೆಯಿಂದಲಾದರೂ. ನಾಲ್ಕು ಸುಲ್ತಾನರಿಂದಲಾದರೂ ವಿಜಯನಗರ ದಿಂದಲೂ ಬಂದಂಥ) ವ್ಯಕ್ತಿ ಅಥವಾ ಪತ್ರಗಳು ಅಥವಾ ಯಾವುದೇ ಕಾರ್ಯ ಕಲಾಪಗಳೂ ಮುಟ್ಟದಂತೆ ಭದ್ರವಾದ ವ್ಯವಸ್ಥೆಯನ್ನಿಡಬೇಕೆಂಬುದೇ ಆ ಒಪ್ಪಂದದ ಕರಾರಾಗಿದ್ದಿತು. ಇನ್ನೂ ಅನೇಕ ಕರಾರುಗಳಿದ್ದವು. ಆದರೆ ಕ್ಯಾಸ್ಟ್ರೊ ಯಾವ ಕರಾರುಗಳನ್ನೂ ನಡೆಸಲಿಲ್ಲ ಆದ್ದರಿಂದ ಇ. ಸ. ೧೫೪೭ ರಲ್ಲಿ ಇಬ್ರಾಹಿಮಶಹನು ಗೋವೆಯನ್‌ರಿಗೆ ತಾನು ಕೊಟ್ಟ ಸಸಲ್ಸೆಟ್ಟಿ ಬದೇಶ ಪ್ರದೇಶಗಳನ್ನು ಕೈವಶ ಮಾಡಿಕೊಳ್ಳಲು ದಂಡಯಾತ್ರೆ ಕೈಕೊಂಡನು. ಆದರೆ ಘೋರವಾದ ಕದನದಲ್ಲಿ ವಿಜಾಪುರದವರು ಸೋತು ಓಡಿ ಹೋದರು.

ಇ. ಸ. ೧೫೪೭ ಸಪ್ಟಂಬರದ ದಿವಸ ವಿಜಯನಗರದವರೊಡನೆ ಡಿ. ಕ್ಯಾಸ್ಟ್ರೋನು ಒಪ್ಪಂದ ಮಾಡಿಕೊಂಡನು. ಆ ಒಪ್ಪಂದದ ಕರಾರು ಗಳಿಂದ ಆಗಿನ ಕಾಲದಲ್ಲಿ ಸದಾಶಿವರಾಯನ ಮತ್ತು ಗೋವೆಯ ರಾಜಕಾರಣ ಮತ್ತು ವ್ಯಾಪಾರಿ ವಿಷಯಗಳು ಗೊತ್ತಾಗುವದರಿಂದ ಅವುಗಳನ್ನು ಇಲ್ಲಿ ವಿವರಿಸಿದೆ.

೧) ಎರಡೂ ದೇಶಗಳು ಮಿತ್ರರಾಷ್ಟ್ರಗಳೆಂದು ತಿಳಿಯಬೇಕು. ಇವ ರುಗಳ ಮಿತ್ರರೂ ಸಹ ಪರಸ್ಪರರು ಮಿತ್ರರಾಗುವರು. ಗಂಡಾಂತರ ಸಮಯದಲ್ಲಿ ಸೈನ್ಯ ಸಹಿತ ಪರಸ್ಪರರು ಪರಸ್ಪರರಿಗೆ ಸಹಾಯ ಸಲ್ಲಿಸ ಬೇಕು.

೨) ಗೋವೆಯಲ್ಲಿ ಇಳಿದ ಅರಬಸ್ಥಾನದ ಮತ್ತು ಪರ್ಶಿಯಾದ ಎಲ್ಲ ಕುದುರೆಗಳನ್ನು ವಿಜಯ ನಗರರಿಗೇನೇ ಮಾರತಕ್ಕದ್ದು. ವಿಜಾಪುರಕ್ಕೆ ಮಾರಬಾರದು. ಕುದುರೆಗಳು ಬಂದಕೂಡಲೇ ಸಾಕಷ್ಟು ಅವಧಿಯನ್ನು ಧನ ಸಂಗ್ರಹಮಾಡಿ ತರಲು ವಿಜಯನಗರಕ್ಕೆ ಪೋರ್ತುಗೀಜ ಗವರ್ನರ ರನ್ನು ಕೊಡಬೇಕು.

೩) ವಿಜಯನಗರದ ರಾಜನು ತನ್ನ ಸಕಲ ವ್ಯಾಪಾರಿಗಳೊಂದಿಗೆ ಪಶ್ಚಿಮ ಕರಾವಳಿಯಲ್ಲಿಗುವ ಪೋರ್ಚುಗೀಜ ವ್ಯಾಪಾರಿ ಠಾಣೆಯ ಮುಖಾಂತರವೇ ಪರದೇಶ ವ್ಯಾಪಾರವನ್ನು ಮಾಡತಕ್ಕದ್ದು ಬಿಜಾಪುರದವರ ವಶವಲ್ಲಿರುವ ಪಶ್ಚಿಮ ಕರಾವಳಿಯ ಠಾಣೆಗಳಿಂದ ಮಾಡಲೇಬಾರದು. ಹೊರಗಿನಿಂದ ತರಿಸಿಕೊಳ್ಳುವದನ್ನು ಹಾಗೆಯೇ ಮಾಡಬೇಕು. ವಿಶೇಷವಾಗಿ ಕಬ್ಬಿಣ ಮತ್ತು ಮದ್ದನ್ನು ತಯಾರಿಸುವ ದ್ರವ್ಯಗಳನ್ನು ವಿಜಯನಗರದ ರಾಯರು ಪರದೇಶದಿಂದ ತರಿಸುತ್ತಿದ್ದರು. ಇಲ್ಲದೇ ಅರಿವೆ, ತಾಮ್ರ, ತವರು, ಜೈನಾ ರೇಶಿಮೆ ಮೊದಲಾದವುಗಳನ್ನು ತರಿಸುತ್ತಿದ್ದರು.

೪) ಪಶ್ಚಿಮ ಕರಾವಳಿಯಲ್ಲಿಯ ವಿಜಯನಗರದ ವಶಕ್ಕಿರುವ ಬಂದರುಗಳಿಗೆ ಅಕಸ್ಮಾತ್ತಾಗಿ ಯಾವದೇ ಮುಸಲ್ಮಾನರ ಹಡಗು ಬರಲಿ ಕೂಡಲೆ ಅವುಗಳನ್ನು ಹಿಡಿದುಕೊಂಡು ಗೋವೆಯ ವಶಕ್ಕೆ ಕೊಡಬೇಕು. ಮತ್ತು ಈರ್ವರೂ ಕೂಡಿಕೊಂಡೇ ಬಿಜಾಪುರದವರ ವಿರುದ್ಧ ಹೋರಾಡಬೇಕು. ಯುದ್ಧದಲ್ಲಿ ವಶವಾದ ಪ್ರದೇಶದಲ್ಲೆಲ್ಲವೂ ವಿಜಯನಗರ ರಾಜ್ಯಕ್ಕೆ ಸೇರಿಸಬೇಕು. ಕೇವಲ ಪಶ್ಚಿಮ ಕರಾವಳಿಯಲ್ಲಿ ಬಾಂಡಾದಿಂದ ಕಿಟನೂರ ವರೆಗೆ ಪ್ರದೇಶ ವಶವಾದರೆ ಅದು ಗೋವೆಯ ಆಡಳಿತಕ್ಕೆ ಸೇರಬೇಕು.

ಎಂದು ಕರಾರುಗಳಿದ್ದವು. ಡಿ. ಕ್ಯಾಸ್ಟ್ರೋನು ಅದೇ ವರ್ಷ ಅಕ್ಟೋಬರದಲ್ಲಿ ಅಹಮುದನಗರದವರೊಡನೆ ಒಪ್ಪಂದಮಾಡಿಕೊಂಡನು. ಇದರಿಂದ ಗೋವಾ ಮತ್ತು ಅಹಮ್ಮದನಗರಗಳು ಮಿತ್ರ ರಾಷ್ಟ್ರಗಳಾದವು. ಅಹಮ್ಮದನಗರಕ್ಕೆ ಗಂಡಾಂತರ ಬಂದರೆ ಗೋವೆಯು ಅದನ್ನು ಸೈನ್ಯಸಹಾಯದಿಂದ ರಕ್ಷಿಸಬೇಕು ಎಂದು ಕರಾರಿದ್ದಿತು. ಈ ರೀತಿ ಮೂವರೂ ಬಿಜಾಪುರದವರ ವಿರುದ್ಧ ಸಿದ್ಧರಾದರು. ಆದಿಲಶಹನೇ ಸರ್ವಸನ್ನಾಹದೊಂದಿಗೆ ಗೋವೆಯ ಸುತ್ತಲಿನ ಪ್ರದೇಶವನ್ನು ವಶಪಡಿಸಿಕೊಳ್ಳಲು ಬಂದನು. ಈ ಯುದ್ಧದಲ್ಲಿ ಸಹ ಪ್ರಬಲ ಸೇನಾಪತಿಯು ಮಡಿದನು. ಸೇನೆ ಓಡಿಹೋಯಿತು. ಆದರೆ ಗಿಜಿಳಲರಲ್ಲಿ ಗೋವೆಯ ಗವ್ಹರ್ನರನು ಬಿಜಾಪುರದ ಶಹನೊಡ

ನೆಯೂ, ಭಟಕಳದ ರಾಣಿಯೊಡನೆಯೂ ಒಪ್ಪಂದ ಮಾಡಿಕೊಂಡಿದ್ದರಿಂದ ಎಲ್ಲವೂ ಅನುಕೂಲವಾಯಿತು.

ಡಿ. ಸೋಜಾ ಮತ್ತು ಅಸದಖಾನರಿಬ್ಬರೂ ಅಬ್ದುಲ್ಲಾನ ಪಕ್ಷಗಟ್ಟಿದರು. ಪೋರ್ಚುಗೀಜರು ಇಬ್ರಾಹಿಮನನ್ನು ಕಿತ್ತೊಗೆದು ಅಬ್ದುಲ್ಲಾನನ್ನು ಬಿಜಾಪುರದ ಪಟ್ಟಕ್ಕೆ ತಂದರೆ ಕೊಂಕಣ ಪ್ರದೇಶವನ್ನೆಲ್ಲ ಗೋವೆಯವರಿಗೆ ಬಿಟ್ಟುಬಿಡುವದಾಗಿ ಅಸದಖಾನನು ವಚನವಿತ್ತನು. ಆದರೆ ಡಿಸೋಜಾ ಹಾಗೆ ಮಾಡಲಿಲ್ಲ. ಇದನ್ನು ಕೇಳಿ ಇಬ್ರಾಹಿಮ ಆದಿಲಶಹನೇ ಸೈನ್ಯದೊಡಿಗೆ ಬೆಳಗಾವಿಗೆ ಬಂದು ಅಸದಖಾನನ್ನು ಚನ್ನಾಗಿ ಶಿಕ್ಷಿಸಬೇಕೆಂದು ಸಾಗಿದನು. ಆದರೆ ಅವನ ಸೈನ್ಯವು ದಾರಿಯಲ್ಲಿರುವಾಗಲೇ ಬೆಳಗಾವಿ ಕೋಟೆಯಲ್ಲಿ ಅಸದಖಾನನು ಸತ್ತನೆಂಬ ಸುದ್ದಿಯು ಬಂದಿತು. (ಇ. ಸ. ೧೫೪೯ ಫೆಬ್ರುವರಿ) ಗೋವಳಕೊಂಡದ ಜಮ್ಶೈದ್‌ಶಹನ ಕಾರ್ಯಕ್ಕೂ ನಿರ್ದಯವಾದ ಆಳಿಕೆಗೂ ಬೆದರಿ ಅವನ ತಮ್ಮನಾದ ಇಬ್ರಾಹಿಮಕುತುಬನು ವಿಜಯನಗರದ ರಾಜರ ಆಶ್ರಯ ಪಡೆದು ಅಲ್ಲಿಯೇ ಇದ್ದನು. ಅಬಶಿನಿಯಾದ ಸರದಾರನಾದ ಅಂಬರಖಾನನೆಂಬುವವನೂ ರಾಮರಾಯನ ಆಶ್ರಯದಲ್ಲಿದ್ದ ಶೂರನೂ ಸಿರಿವಂತನೂ ಎಂದು ಹೆಸರಾಗಿ ಬಾಳಿದ್ದನು. ರಾಮರಾಯನು ನಿಷ್ಕಾರಣವಾಗಿ ಅಂಬರಖಾನನನ್ನು ಆಚೆಗೆ ಎಸೆದು ಅವನ ಆಸ್ತಿಯನ್ನೆಲ್ಲ ಇಬ್ರಾಹಿಮನಿಗೆ ಕೊಟ್ಟು ಸಂತೋಷಪಡಿಸಿದನು. ಇದರಿಂದ ಅಂಬರಖಾನನು ಖತಿಗೊಂಡು ವಿಜಯನಗರದ ಬೀದಿಯಲ್ಲಿಯೇ ಇಬ್ರಾಹಿಮನನ್ನು ಎದುರಿಸಿದನು. ಅಂಬರನು ಇಬ್ರಾಹಿಮನ ಖಡ್ಗಕ್ಕೆ ತುತ್ತಾದನು. ಇದೊಂದು ಸಣ್ಣ ಸಂದರ್ಭವು.

ಇರಲಿ ಇ. ಸ. ೧೫೫೦ರಲ್ಲಿ ಗೋವಳಕೊಂಡದ ಸಿಂಹಾಸನವನ್ನು ಇಬ್ರಾಹಿಮನು ಏರಿದನು. ೧೫೪೯ರಲ್ಲಿ ಬಿಜಾಪುರ ಸುಲ್ತಾನ ಇಬ್ರಾಹಿಮನ ಮತ್ತು ಅಮೀರಬರೀದನ ಮಗನಾದ (ಅದೇ ಪಟ್ಟಕ್ಕೆ ಬಂದಂಥ)ಬೀದರದ ಅಲ್ಲೀ ಬರೀದ ಶಹನಿಗೂ ಮಿತ್ರತ್ವದ ಒಡಂಬಡಿಕೆಯಾಯಿತೆಂದು ಫಿರಿ

ಸ್ತಿಹಾನ ಬರೆಯುತ್ತಾನೆ ಈ ವೇಳೆಗೆ ನಾಯರುಝಾಂಶಹನು ತನ್ನ ರಾಯಭಾರಿಯ ಸಂಗಡ ಅಮೌಲ್ಯವಾದ ಕಾಣಿಕೆಗಳನ್ನೂ ನಜರಾನಾ ವಗೈರೆ ಮಾನ ಮರ್ಯಾದೆಗಳನ್ನು ರಾಮರಾಯನಿಗೆ ಕಳಿಸಿಕೊಟ್ಟನು. ಇದನ್ನು ತಿಳಿದ ಬಿಜಾಪುರ ಇಬ್ರಾಹಿಮು ಸುಲ್ತಾನನು ಸಿಟ್ಟಿನಿಂದ ಉರಿದೆದ್ದನು. ತನ್ನ ದರಬಾರದಲ್ಲಿರುವ ವಿಜಯನಗರದ ರಾಯಭಾರಿಗಳನ್ನು ಅತ್ಯಂತ ತಿರಸ್ಕಾರದಿಂದಲೂ ಅವಮಾನದಿಂದಲೂ ನಡೆಸಿಕೊಂಡನು. ರಾಯಭಾರಿಗಳು ತಮ್ಮ ಜೀವದಂಜಿಕೆಯಿಂದ ವಿಜಯನಗರಕ್ಕೆ ಓಡಿಬಂದರು. ಇದನ್ನು ತಿಳಿದ ರಾಮರಾಯನು ಬಿಜಾಪುರವನ್ನು ಮುತ್ತಲು ಬಹ್ರಾನಶಹನನ್ನು ಕಳಿಸಿದನು. ಬಹ್ರಾನಶಹನು ದಂಡಯಾತ್ರೆಯನ್ನು ಕೈಕೊಂಡು ಕಲ್ಯಾಣ ಕೋಟೆಯನ್ನು ಕೈವಶಮಾಡಿಕೊಂಡನು. ಇತ್ತ ಇಬ್ರಾಹಿಮನು ಅಹಮದನಗರದ ಆಧೀನದಲ್ಲಿಯ ಮತ್ತೊಂದು ಕೋಟೆಯನ್ನು ಸ್ವಾಧೀನಪಡಿಸಿಕೊಂಡನು. ಇತ್ತ ರಾಮರಾಯನು ಮತ್ತು ಬಹ್ರಾನಶಹರಿಬ್ಬರೂ ಸೇರಿ ರಾಯಚೂರ ಮುದಗಲ್ಲ ಅದೋನಿಗಳನ್ನು ಮುತ್ತಿದರು. ಇ. ಸ. ೧೫೫೧ರಲ್ಲಿ ರಾಯಚೂರ ಅಹಮದನಗರಕ್ಕೆ ಸೇರಿತು. ಮುದಗಲ್ಲ ಮೊದಲಾದ ಪ್ರದೇಶಗಳು ರಾಮರಾಯನ ವಶವಾದವು.

ಇ. ಸ. ೧೫೫೪ರಲ್ಲಿ ಬಹ್ರಾನಶಹನು ಸತ್ತನು. ಮತ್ತೆ ಈರ್ವರು ಮುಸ್ಲಿಮರು ಮಿತ್ರರಾದರು. ಆದರೆ ಈ ಮಿತ್ರತ್ವವು ಬಹಳ ದಿವಸ ಉಳಿಯಲಿಲ್ಲ. ಒಳಗೊಳಗೇ ಹೊಟ್ಟೆಕಿಚ್ಚು ಈರ್ಷೆಗಳು ಹೆಚ್ಚಾಗುತ್ತಲೇ ಇದ್ದವು ಇಬ್ರಾಹಿಮಶಹನು ರಾಮರಾಯನೊಡನೆ ಗೌಪ್ಯಸಂಧಾನವನ್ನು ಮಾಡಿ ಅಹಮ್ಮದನಗರದ ಮೇಲೆ ಏರಿಹೋದನು. ಸೊಲ್ಲಾಪೂರದ ಹತ್ತಿರ ಯುದ್ಧವಾಯಿತು. ಇಬ್ರಾಹಿಮಶಹನು ಪಡಬಾರದ ಕಷ್ಟಗಳಿಗೆ ಸಿಕ್ಕು ಜರ್ಜರಿತನಾದನು.

ಇಬ್ರಾಮಶಹನ ಆಶ್ರಯದಲ್ಲಿ ಐಉಲ್‌ಮುಲ್ಕ ಎಂಬ ಒಬ್ಬ ಸರದಾರನಿದ್ದನು. ಇವನ ಎಲ್ಲ ಗೌಪ್ಯ ಕಾರ್ಯಗಳಲ್ಲಿ ಅಸದಖಾನನಂತೆಯೇ

ಇದ್ದನು. ಆದ್ದರಿಂದ ಇಂಥ ಅವಿಶ್ವಾಸಕನನ್ನೂ ಘಾತುಕಿಯನ್ನೂ ಹತ್ತಿರ ಇಟ್ಟುಕೊಳ್ಳಬಾರದೆಂದು ಒಗೆದು ಇಬ್ರಾಹಿಮು ಹೊರಗೆ ಹಾಕಿದ್ದನು. ಈ ಕೃತಘ್ನನು ಶಹನ ವಿರುದ್ಧ ಬಂಡಾಯವನ್ನೆಬ್ಬಿಸಿಅವನ ಸೈನ್ಯವನ್ನೆಲ್ಲ ನಾಶ ಮಾಡಿಬಿಟ್ಟನು. ಇಬ್ರಾಹಿಮುಶಹನು ಓಡಿಹೋಗಿ ಬಿಜಾಪುರದಲ್ಲಿ ಅಡಗಿ ಕುಳಿತನು. ಇನ್ನು ಈ ಉಲ್‌ಮುಲ್ಕನು ಬಿಜಾಪುರಕ್ಕೂ ಮುತ್ತಿಗೆ ಹಾಕಿದ್ದರೆ ತನ್ನ ಗತಿಯೇನೆಂದು ಯೋಚಿಸಿ ರಾಮರಾಯನ ಸಹಾಯ ಯಾಚಿಸಿದ್ದನು. ರಾಮರಾಯನು ತನ್ನ ತಮ್ಮನಾದ ವೆಂಕಟಾದ್ರಿಯೊಡನೆ ಪ್ರಬಲ ಸೈನ್ಯವನ್ನು ಕಳಿಸಿ ಉಲ್‌ಮುಲ್ಕನ ಸದ್ದನ್ನು ಅಡಗಿಸಲು ಹೇಳಿದನು.

ಆಸದಖಾನನಿಂದ ವೆಂಕಟಾದ್ರಿಯು ಹಿಂದಕ್ಕೊಮ್ಮೆ ಮೋಸಹೋದದ್ದು ಪೂರ್ಣ ನೆನಪಿದ್ದಿತು. ದುರ್ದೈವದ ಸಂಗತಿಯೆಂದರೆ ಉಲ್‌ಮುಲ್ಕನು ಆಸದನ ಕಾಯಕವನ್ನೇ ಹೂಡಿದನು. ಮೊದಲು ಸೋತಂತೆ ನಟಿಸಿ ಸೈನ್ಯಸಮೇತ ಓಡಿಹೋಗಿ ದೂರದಲ್ಲಿ ಠಾಣೆ ಹೂಡಿದನು. ವೆಂಕಟಾದ್ರಿಯು ತನ್ನ ಠಾಣೆಯಲ್ಲಿ ಸಕಲ ಸೈನಿಕರಿಗೂ ರಾತ್ರಿಯಲ್ಲಿ ಸರ್ವಸನ್ನದ್ಧರಾಗಿರಲು ಸೂಚಿಸಿದರು. ದೀಪವನ್ನು ಯಾರೂ ಹಚ್ಚಬಾರದೆಂದು ಹೇಳಿದನು. ದೊಡ್ಡ ದೊಡ್ಡ ಹಿಲಾಲುಗಳನ್ನು ಮಾಡಿ ಎತ್ತರಕ್ಕೆ ಕಟ್ಟಿ ಗೋಪುರದಂತೆ ದೊಡ್ಡ ಎತ್ತರವಾದ ಕಟ್ಟೆಕಟ್ಟಿ ಅದರ ಶಿಖರಕ್ಕೆ ಹಿಲಾಲೊಂದನ್ನು ಕಟ್ಟಿಸಿದನು. ಅಲ್ಲಿ ಕಾವಲುಗಾರರನ್ನು ನೇಮಿಸಿದನು. ರಾತ್ರಿ ಒಂದು ವೇಳೆ ಉಲ್‌ಮುಲ್ಕನ ಸೈನ್ಯವು ಎರಗಿಬಂದದ್ದೇ ಆದರೆ ಆ ಹಿಲಾಲಕ್ಕೆ ಬೆಂಕಿ ಕೊಡಬೇಕೆಂದೂ ಸೂಚಿಸಿದ್ದನು. ಆ ಪ್ರಕಾರ ರಾತ್ರಿ ಕಾಯುತ್ತಲಿದ್ದನು.

ಉಲ್‌ಮುಲ್ಕನು ಸಲಾಬತ್‌ಖಾನನೊಡನೆ ೨ ಸಾವಿರ ಶೂರ ಸೈನಿಕರೊಡನೆ ವೆಂಕಟಾದ್ರಿಯ ಠಾಣೆಯನ್ನು ಪ್ರವೇಶಿಸಿದನು. ಹಿಂದೂ ಕಾಫಿರರು ಪ್ರಜ್ಞೆಯಲ್ಲಿ ಇರುವದಿಲ್ಲವೆಂದು ನಂಬಿಗೆಯಿಂದ ತಾನೂ ತುಸು ದುರ್ಲಕ್ಷ್ಯದಿಂದಲೇ ನುಗ್ಗಿದನು. ಹಿಲಾಲು ಹಚ್ಚಲ್ಪಟ್ಟಿತು. ಮುಸ್ಲಿಮ ಸೈನ್ಯ ನುಗ್ಗತೊಡಗಿದೆಯೆಂದು ಹಿಂದೂ ಸೈನಿಕರು ಅರಿತರು. ಎಲ್ಲರೂ ನುಗ್ಗಿದಬಳಿಕ

ವಿಜಯನಗರದ ಸೈನ್ಯವು ಅವರನ್ನು ನುಚ್ಚುನೂರು ಪಾಲಾಗಿ ಮಾಡಿಬಿಟ್ಟಿತು. ಉಲ್‍ಮುಲ್ಕ ಮತ್ತು ಸಲಾಬತ್ತಖಾನರು ಜೀವ ಉಳಿಸಿಕೊಳ್ಳಲು ಕತ್ತಲೆಯಲ್ಲಿ ಸಿಕ್ಕ ಸಿಕ್ಕ ಕಡೆಗೆ ಕುದುರೆ ಓಡಿಸಿ ಬೆಳತನಕ ಘಾಸಿಯಾಗಿ ಸೂರ್ಯೋದಯ ಸಮಯಕ್ಕೆ ತಮ್ಮ ಠಾಣೆಗೆ ಬಂದು ನೋಡುತ್ತಾರೆ. ಅದೆಲ್ಲ ಧ್ವಂಸವಾಗಿ ಚಲ್ಲಾಪಿಲ್ಲಿಯಾಗಿತ್ತು. ಅವರು ಗಾಬರಿಯಾಗಿ ಓಡಿಬಿಟ್ಟರು.

ಇ. ಸ. ೧೫೫೫ರಲ್ಲಿ ತನ್ನನ್ನು ಶಹನನ್ನಾಗಿ ಮಾಡಿದರೆ ಕಲ್ಪನೆಗೆ ಸಿಲುಕದಷ್ಟು ಸಂಪತ್ತನ್ನು ಕೊಡುವೆನೆಂದು ಅಬ್ದುಲ್ಲನು ಆಗ ಬಂದಿದ್ದ ಗೋವೆಯ ಗವ್ಹರ್ನರ ಮುಸ್ಕರಿನಾಸ್‍ನಿಗೆ ಹೇಳಿ ಪ್ರೋತ್ಸಾಹಿಸಿದನು. ಇದಕ್ಕೆ ಉಬ್ಬಿ ಅಬ್ದುಲ್ಲಾನನ್ನು ಫೊಂಲಾಕ್ಕೆ ಕರೆದೊಯ್ದು ಬಿಜಾಪುರದ ಗಾದಿಗೆ ಇವನೇ ಮಾಲೀಕನೆಂದು ಸಾರಿದನು ಆದರೆ ಅದೇ ವರುಷ ಮುಸ್ಕರಿನಾಸನು ಸತ್ತನು. ಅವನ ತರುವಾಯ ಫ್ರಾನ್ಸಿಸ್ಕೊ ಬ್ಯಾರೆಟ್ಟೊ ಎಂಬವನು ಬಂದನು. ಅಬ್ದುಲ್ಲಾನೇ ನಿಜವಾದ ಬಿಜಾಪುರದ ಶಹನೆಂದು ಜಾಹೀರಪಡಿಸಿ ಬ್ಯಾರೆಟ್ಟೋನು ಕಪ್ಪು ಕಾಣಿಕೆ ತೆರಿಗೆ ಸಹಿತ ಮೊದಲಾದವುಗಳನ್ನು (ಬಿಜಾಪುರಕ್ಕೆ ಕೊಡತಕ್ಕದ್ದನ್ನು) ವಸೂಲಮಾಡಲು ಹೊರಟನು.

ಇಬ್ರಾಹಿಮುಶಹನು ೭ ಸಾವಿರ ಸೈನಿಕರಿಂದ ಬ್ಯಾರೆಟ್ಟೋನನ್ನು ಎದುರಿಸಲು ಹೊರಟನು. ಸದಾಶಿವರಾಯನು ಶಹನ ಸಹಾಯಕ್ಕೆಂದು ೨೫ ಯೋಧರನ್ನು ಕಳಿಸಿಕೊಟ್ಟನು. ಶಹನು ೧೫೫೬ನೇ ಡಿಶೆಂಬರದವರೆಗೆ ಸತತವಾಗಿ ಅನೇಕ ಕಡೆಗಳಲ್ಲಿ ಪೋರ್ಚುಗೀಜರ ವಿರುದ್ಧವಾಗಿ ಕಾದಾಡಿ ಅಬ್ದುಲ್ಲಾನನ್ನು ಸೆರೆಹಿಡಿದುಕೊಂಡನು. ಪೋರ್ಚುಗೀಜರಿಗೂ ಶಹನಿಗೂ ನಿರ್ಣಯ ಕದನೆಗಳೊಂದೂ ಆಗಲಿಲ್ಲ. ಸಾಲ್ಸೆಟ್ಟೆ ಬರ್ದೇಶಗಳೂ ಶಹನಿಗೆ ವಶವಾಗಲಿಲ್ಲ. ಅಂತೂ ಕೇಕಾಲ ಇಬ್ಬರು ತಮ್ಮಲ್ಲಿ ತಾವೇ ಶಾಂತರಾಗಿ ಕುಳಿತರು.

ಇ. ಸ. ೧೫೫೭ರಲ್ಲಿ ಇಬ್ರಾಹಿಮುಶಹನು ಸತ್ತನು. ಅವನ ಹಿರಿಯ ಮಗನಾದ ಅಲ್ಲೀ ಆದಿಲಶಹನು ಪಟ್ಟವೇರಿದನು. ಜಹ್ರಾನನ ತರುವಾಯ

ಅಹಮ್ಮದನಗರದ ಪಟ್ಟಕ್ಕೆ ಹಸನ ನೈಜಾಮುಶಹನು ಬಂದನು ಅಲೀ ಆದಿಲಶಹನು ಎಲ್ಲಕ್ಕೂ ಮೊದಲು ಮಾಡಿದ ಕೆಲಸವೆಂದರೆ ವಿಜಯನಗರಕ್ಕೂ ಅಹಮ್ಮದನಗರಕ್ಕೂ ರಾಯಭಾರಿಗಳನ್ನು ಕಳುಹಿಸಿ ಮಿತ್ರತ್ವ ಸಾಧಿಸಲು ಪ್ರಯತ್ನಿಸಿದನು. ಸದಾಶಿವರಾಯ ಮತ್ತು ರಾಮರಾಯರಿಬ್ಬರೂ ಬಿಜಾಪುರದ ರಾಯಭಾರಿಯನ್ನು ಆದರದಿಂದ ಸ್ವಾಗತಿಸಿದರು.

ಬ್ರಿಗ್ಸಲೇಖನದಿಂದ ಒಂದು ಸ್ವಾರಸ್ಯವಾದ ವಿಷಯವು ಗೊತ್ತಾಗುವದು. ವಿಜಯನಗರದ ಸಿಂಹಾಸನಾಧಿಪತಿಯು ಸದಾಶಿವರಾಯನಿದ್ದರೂ ಸಹ ಹಿಂದುಸ್ಥಾನದ ಎಲ್ಲ ಶಹರೂ, ರಾಯರೂ, ಸರದಾರರೂ ರಾಮರಾಯನೇ ರಾಜನೆಂದು ತಿಳಿದು ವರ್ತಿಸುತ್ತಿದ್ದರು. ರಾಮರಾಯನಿಗೆ ಹುಟ್ಟಿದ ಗಂಡುಮಗುವು ತೀರಿತು. ಬಿಜಾಪುರದ ಅಲೀ ಆದಿಲ್‌ಶಹನು ಒಂದು ನೂರು ಕುದುರೆ ಸವಾರರೊಡನೆ ವಿಜಯನಗರಕ್ಕೆ ಬಂದನು. ರಾಮರಾಯನಿಗೆ ಮಗ ಸತ್ತ ದುಃಖದಲ್ಲಿ ಸಮಭಾಗಿಯಾದನು, ಅನೇಕ ಸಾಂತ್ವನ ಮಾತುಗಳನ್ನು ಹೇಳಿ ದಂಪತಿಗಳನ್ನು ಸಮಾಧಾನಪಡಿಸಿದನು, ರಾಮರಾಯನ ಪತ್ನಿಗೆ, "ತಾಯಿ ನಾನು ನಿನ್ನ ಮಗನೆಂದು ತಿಳಿದು ಶಾಂತಳಾಗು" ಎಂದನು. ರಾಮರಾಯನೂ ಅವನ ಪತ್ನಿಯೂ ಅಲಿ ಆದಿಲ್‌ಶಹನನ್ನು ಅತ್ಯಂತ ಆದರದಿಂದಲೂ, ಪ್ರೀತಿಯಿಂದಲೂ ಸ್ವಾಗತಿಸಿ ಆದರಿಸಿ ಅರಮನೆಯಲ್ಲಿರಿಸಿಕೊಂಡು ಮಮತೆ ನೀಡಿದರು. ನಾಲ್ಕು ದಿವಸವಿದ್ದು, ಅಲೀ ಆದಿಲ್‌ಶಹನು ಬಿಜಾಪುರಕ್ಕೆ ಹೊರಟನು. ಹೊರಡುವಾಗ ರಾಮರಾಯನು ವಿಜಯನಗರದ ಅಗಸಿ ಬಾಗಿಲದವರೆಗೆ ಕೂಡ ಕಳಿಸಲು ಹೋಗಲಿಲ್ಲ. ಇದರಿಂದ ಶಹನಿಗೆ ಅತ್ಯಂತ ದುಃಖವೂ ಕ್ರೋಧವೂ ಉಂಟಾಯಿತು. ಆದರೆ ಅದನ್ನೊಂದನ್ನೂ ಹೊರಗೆ ತೋರದೆ ಹಸನ್ಮುಖದಿಂದ ಊರಿಗೆ ಹೋದನು ಆದರೆ ಈ ಅಪಮಾನದ ಪರಿಮಾರ್ಜನೆ ಮಾಡದೇ ಗತ್ಯಂತರವಿಲ್ಲವೆಂದು ಮನದಲ್ಲಿಯೇ ಕುದಿಯತೊಡಗಿದನು.

ತನ್ನ ತಂದೆಯು ಕಳೆದುಕೊಂಡ ಪ್ರದೇಶವನ್ನು ಪ್ರೀತಿಯಿಂದದೊರಕಿಸಬೇಕೆಂದು ಮಾಡಿದ ಯುಕ್ತಿಯು ವಿಫಲವಾಯಿತು ರಾಮರಾಯನು

ಅಧಿಕಾರದ ಮದದಲ್ಲಿ ಐಶ್ವರ್ಯ ಸಾಮರ್ಥ್ಯದ ಸೊಕ್ಕಿನಲ್ಲಿ ವ್ಯಕ್ತಿತ್ವೊಂದನ್ನೇ ತಿಳಿದುಕೊಂಡನು. "ಈ ಬಿಜಾಪುರದ ಶಹನ ಸಾಮರ್ಥ್ಯವು ಕುಗ್ಗಿ ಅಂತರಂಗಿತನಾಗಿ ದುರ್ಬಲನಾಗಿರಬೇಕು. ಅಂತಲೇ ನಮ್ರವಾಗಿ ನಮಗೆ ಸಮಾಧಾನ ಹೇಳಿ ನಮ್ಮ ನಮ್ಮ ಮನಸ್ಸನ್ನು ಒಲಿಸಿಕೊಳ್ಳಲು ಬಂದಿದ್ದಾನೆ ಈ ಕಳ್ಳ ಶತ್ರು'' ಎಂದು ನಕ್ಕು ಪರಿಹಾಸ್ಯ ಮಾಡಿದನು.

ಇ. ಸ. ೧೫೫೮ರಲ್ಲಿ ರಾಮರಾಯನು ಮದ್ರಾಸದ ಸನಿಯದಲ್ಲಿಯ ಮೈಲಾಪುರವನ್ನು ಮುತ್ತಿದನು. ಪೂರ್ವ ಸಮುದ್ರ ಕರಾವಳಿಯಲ್ಲಿ ನಾಗಪಟ್ಟಣದಿಂದ ಸೇಂಟ ಥಾಮಸ್ ಕೋಟೆಯವರೆಗಿನ ಪ್ರದೇಶವನ್ನೆಲ್ಲ ವಶಪಡಿಸಿಕೊಂಡು ದಾಳಿ ಮಾಡಿ ಧನ-ಕನಕ ಸುಲಿದನು. ಹಿಂದೂ ಸೈನಿಕರು ಸೇಂಟ ಥಾಮಸ್‌ದಲ್ಲಿಯ ಕ್ರೈಸ್ತ ದೇವಾಲಯವನ್ನು ಮುತ್ತಿದರು. ಅಲ್ಲಿಯೂ ಹೇರಳವಾಗಿ ಹಣವಿರಬಹುದೆಂದು ಅವರು ತಿಳಿದಿದ್ದರು. ಪಾದ್ರಿಗಳು ನೇರವಾಗಿ ರಾಮರಾಯನ ಠಾಣೆಗೆ ಹೋಗಿ ತಾವು ಧರ್ಮಪ್ರಸಾರಕ್ಕೆ ಬಂದವರೆಂದೂ ವಿಜಯನಗರಕ್ಕೆ ನಿಷ್ಠುರರೆಂದು ಪ್ರಾರ್ಥನ ಮಾಡಿಕೊಟ್ಟರು. ಇವರು ಹಣವಿಲ್ಲದ ದರಿದ್ರರೆಂದು ಕಂಡುಬಂದಿತು. ಈ ದಾಳಿಯಲ್ಲಿ ಬ್ರಾಹ್ಮಣರ ಅಗ್ರಹಾರಗಳೂ ನಾಶವಾದದ್ದು ಪಾದ್ರಿಗಳಿಂದಲೇ ರಾಮರಾಯನಿಗೆ ತಿಳಿದು ಬಂದಿತು. ಆಗ ಸ್ವತ: ಆಯಾ ಸ್ಥಳಗಳಿಗೆ ರಾಯನು ಹೋಗಿ ಕಳೆದುಕೊಂಡ ಎಲ್ಲ ಬ್ರಾಹ್ಮಣರಿಗೂ ಮೊದಲಿನಕ್ಕಿಂತ ಹೆಚ್ಚೇ ಧನ-ಭೂಮಿ ಮೊದಲಾದವುಗಳನ್ನು ಕೊಟ್ಟನು. ಮತ್ತು ಪಾದ್ರಿಗಳ ನಿವಾಸಕ್ಕೆ ಹೋಗಬಾರದೆಂದು ಸೈನಿಕರಿಗೆ ಕಟ್ಟಪ್ಪಣೆ ಮಾಡಿಧನು.

ಅಲೀ ಆದಿಲ್‌ಶಹನು ಬಿಜಾಪುರಕ್ಕೆ ಬಂದಕೂಡಲೇ ಹುಸನನಾಯ ಝುಮಾಂಶಹನಿಗೆ ಒಂದು ಪತ್ರವನ್ನು ಕಳಿಸಿ ತನ್ನ ಪೂರ್ವಜರ ಕಲ್ಯಾಣ ಮತ್ತು ಸೊಲ್ಲಾಪುರ ಕೋಟೆಗಳನ್ನೂ ಅದರ ಸುತ್ತಲಿನ ಪ್ರದೇಶವನ್ನೂ ತನಗೆ ತಿರುಗಿ ಕೊಡಬೇಕೆಂದು ಕೇಳಿಕೊಂಡನು. ಇದನ್ನು ತನ್ನ ರಾಯಬಾರಿಯನ್ನು ಅತ್ಯಂತ ಹೀನವಾಗಿ ಕಂಡು ಅವನನ್ನು ಅಪಮಾನ ಮಾಡಿದ್ದಲ್ಲದೇ ಆಡಬಾರದ ಮಾತುಗಳನ್ನು ಸಹ ಆಡಿ ಅಶ್ಲೀಲ ಶಬ್ದಗಳಿಂದ ಬೈದು

ಹೊರಗೆ ಹಾಕಿದನು. ಇವರಿಂದ ಅಲೀ ಆದಿಲ್‌ಶಹನು ಖತಿಗೊಂಡು ರಾಮರಾಯನ ಸಹಾಯ ಯಾಚಿಸಿದನು. ಅವರಿಬ್ಬರೂ ಒಂದೊಂದು ದಿಕ್ಕಿನಿಂದ ಗೋಪಳಕೊಂಡ ರಾಜ್ಯವನ್ನು ಮುತ್ತಬೇಕೆಂದು ನಿಶ್ಚಯಿಸಿದರು ಇ. ಸ. ೧೫೫೮ ಅಕ್ಟೋಬರ ೧೪ನೇ ತಾರೀಖಿನ ದಿನ ಇಡೀ ರಾಜ್ಯವನ್ನೇ ಹಾಳು ಮಾಡಲು ಯುದ್ಧ ಹೂಡಿದರು. ಒಂದು ವರುಷ ಪರಿಯಂತ ಇದು ಸಾಗಿತು.

ಈ ಘೋರ ಯುದ್ಧದಲ್ಲಿ ಪುರಂಧರದಿಂದ ಖೀಬರವರೆಗೆ ಅಹಮದ ನಗರದಿಂದ ದೌಲತಾಬಾದದ ವರೆಗೆ ಇದ್ದ ಸಕಲ ಪ್ರದೇಶದಲ್ಲಿಯ ಗ್ರಾಮ ಗಳನ್ನು ನಾಶ ಮಾಡುವದಲ್ಲದೇ ಒಂದು ಮಾನವ ಪ್ರಾಣಿಯನ್ನು ಬಿಡದೇ ಸಂಹರಿಸಿಬಿಟ್ಟರು. ಈ ನೀಚ ಕಾರ್ಯದಲ್ಲಿ ಹಿಂದೂ ಸೈನಿಕರು ಮಾಡಿದ ಕ್ರೂರ ಕೃತ್ಯಗಳೇ ಉಳಿಯಲಿಲ್ಲ. ಹಿಂದೂ ಸೈನಿಕರು ಮಾಡಿದ ನೀತಿಭ್ರಷ್ಟ ಳಾಗದ ಓರ್ವ ಮುಸ್ಲಿಮ ಹೆಂಗಸು ಕೂಡ ಉಳಿಯಲಿಲ್ಲ. ಎಲ್ಲ ಮಸೀದೆಗ ಳನ್ನೂ ನೆಲಸಮ ಮಾಡಿದರು. ಕುರಾನ ಪುಸ್ತಕಗಳನ್ನು ಸುಟ್ಟರು.

ಇದರಿಂದ ಗೋವಳಕೊಂಡದ ಮುಸಲ್ಮಾನರಷ್ಟೇ ಅಲ್ಲದೇ ವಿಜಯ ನಗರದಲ್ಲಿಯ ಸಕಲ ಮುಸ್ಲಿಮರೂ ಮತ್ತು ಮಿತ್ರ ಮುಸ್ಲಿಂ ರಾಜ್ಯಗಳು ಬಹಳವಾಗಿ ನೊಂದುಕೊಂಡವು. ವಿಜಯನಗರದ ನಾಶಕ್ಕೆ ಇದೇ ಮೂಲ ಕಾರಣವಾಗಿ ಬೀಜಬಿತ್ತಿದಂತಾಯಿತು.

ಇ. ಸ. ೧೫೫೮ರಲ್ಲಿ ಬ್ರಿಗಾಂಝಾ ಎಂಬುವವನು ಗೋವೆಯ ಗವ್ಹ ರ್ನರನಾಗಿ ಬಂದನು. ಇವನು ಮಹಾ ಕ್ರೂರನೂ ನೀಚನೂ ಇದ್ದನು. ೧೫೫೯ರಲ್ಲಿ ಗೋವೆಯ ಸೇನಾಪತಿಯಾದ ಡಿಮೆಲೋ ಎಂಬವನು ಬಲ ಗಾರ ಕರಾವಳಿಯನ್ನೇ ಮುತ್ತಿ ಕೊಲೆ ಸುಲಿಗೆಗಳನ್ನು ಅವ್ಯಾಹತವಾಗಿ ಮಾಡಿದನಲ್ಲದೇ ಗ್ರಾಮಗಳನ್ನು ಕೊಳ್ಳಿಹಚ್ಚಿ ಸುಡುತ್ತ ನಡೆದನು. ಮಂಗ ಳೂರನ್ನು ಮುತ್ತಿ ಅಲ್ಲಿಯ ಸಮಸ್ತ ಪ್ರಜೆಗಳನ್ನು ಕಡಿದೊಗೆದನು. ಒಬ್ಬ ನನ್ನೂ ಕೂಡ ಬಿಡಲಿಲ್ಲ ಡಿಮೆಲೊನಿಗೂ ಬ್ರಿಗಾಂಝಾಗೂ ಮುಸ್ಲಿಮರಂತೆ ಧರ್ಮದ ಹುಚ್ಚು ಇವನನ್ನು ಆವರಿಸಿತು. ಇಡೀ ದೇಶ ಕ್ರಿಶ್ಚಿಯನ್ ಪ್ರಜ

ರನ್ನಾಗಿ ಪರಿವರ್ತಿಸಲು ಹೊರಟನು. ಗೋವೆ ಮತ್ತು ಅದರ ಸುತ್ತಲಿನ ಪ್ರದೇಶದ ಪ್ರಜೆಗಳೆಲ್ಲರನ್ನೂ ಬಲತ್ಕಾರದಿಂದ ಕ್ರೈಸ್ತ ಧರ್ಮಕ್ಕೆ ಪರಿವರ್ತಿಸಿದನು. ಧರ್ಮಾಂತರಕ್ಕೆ ಒಪ್ಪದವರನ್ನು ಅತ್ಯಂತ ಕ್ರೂರ ರೀತಿಯಿಂದ ಚಿತ್ರಹಿಂಸೆಪಡಿಸುತ್ತ ನಡೆದನು. ಈ ಹಿಂಸೆಯನ್ನು ತಾಳಲಾರದೆ ಪ್ರಜೆಗಳು ಕ್ರೈಸ್ತರಾಗುತ್ತ ನಡೆದರು.

ಇ. ಸ. ೧೫೬೪ರಲ್ಲಿ ಗೋವೆಯ ಕ್ರೂರ ಅಧಿಕಾರಿಯು ಹಡಗು ಪಡೆಯೊಂದಿಗೆ ಮಲಬಾರದ ಸಣ್ಣಪುಟ್ಟ ಹಡಗು ನಾವೆ ಮೊದಲಾದವುಗಳನ್ನು ಹಿಡಿದನು. ಅದರಲ್ಲಿರುವ ನಾವಿಕರು ಮೀನು ಹಿಡಿಯುವವರೇ ಮೊದಲಾದವರನ್ನು ಒಬ್ಬೊಬ್ಬರನ್ನೇ ತಂದು ತಲೆ ಒಡೆಯುವಂತೆ ತಲೆಗೆ ಸುತ್ತಿಗೆಯಿಂದ ಹೊಡೆಯುತ್ತ ಕೊಂದು ಸಮುದ್ರದಲ್ಲಿ ಒಗೆದು ಚಲ್ಲಾಟವಾಡಿ ಸಂತೋಷಪಟ್ಟನು. ಈ ಆಟದಲ್ಲಿ ಎರಡು ಸಾವಿರ ಮಲಬಾರಿ ನಾವಿಕರು ಜೀವವನ್ನು ಕೊಟ್ಟರು.

ಇದರಿಂದ ಮಲಬಾರಿಗಳು ಅತ್ಯಂತ ಕ್ರುದ್ಧರಾದರು ಹೇಗೂ ಸಾಯುವದು ನಿಜ. ಹೋರಾಡಿ ಸಾಯೋಣವೆಂದು ಜೀವದ ಹಂಗು ತೊರೆದು ಪೋರ್ಚುಗೀಜರ ವಿರುದ್ಧ ಕಾದಾಡಿದರು. ಸರ್ವ ರೀತಿಯಿಂದಲೂ ಹಿಂದೂ ಜನರನ್ನು ಹಿಂಸಿಸಬೇಕೆಂದು ಪೋರ್ಚುಗೀಜರು ಯೋಚಿಸಿದ್ದರಿಂದ ಕನ್ನನೂರದ ಸುತ್ತಲೂ ನಾಲ್ವತ್ತು ಸಾವಿರ ತೆಂಗಿನ ಗಿಡಗಳನ್ನು ನೆಲಕ್ಕುರುಳಿಸಿದರು. ಸತತ ಯುದ್ಧದಲ್ಲಿರುವದಕ್ಕಿಂತ ಬೇರೆ ಯುಕ್ತಿಯಿಂದ ಈ ಹುಂಬ ದೇಶದ ಜನರನ್ನು ಬಗ್ಗು ಬಡಿಯಬೇಕೆಂದು ವಿಚಾರಿಸಿ ನರೋನಾ ಎಂಬ ಬೇರೆ ಸೇನಾಪತಿಯು ಬಂದು ಮಲಬಾರಿಗಳೊಂದಿಗೆ ಒಪ್ಪಂದ ಮಾಡಿಕೊಂಡನು.

---

## ೧೧. ವಿಜಯನಗರದ ನಾಶ

(ಇ. ಸ. ೧೫೬೫)

ಹಿಂದೆ ಹೇಳಿದಂತೆ ನಾಯಝಾಮನ ರಾಜ್ಯವನ್ನು ಹಾಳುಮಾಡಿದ ಬಳಿಕ ರಾಮರಾಯ ಮತ್ತು ಆದಿಲಶಹರಿಬ್ಬರೂ ಅವನೊಡನೇ ಒಪ್ಪಂದ ಮಾಡಿಕೊಂಡರು. ಇದರಿಂದ ಆದಿಲಶಹನಿಗೆ ನಾಯಝಾಮನು ಕಲ್ಯಾಣ ಕೋಟೆಯನ್ನು ಬಿಟ್ಟುಕೊಡಬೇಕೆಂದು ಗೊತ್ತಾಯಿತು. ಇದನ್ನು ಫಿರಿಸ್ತಾ ಹಾನು ಬಹು ಸ್ವಾರಸ್ಯವಾಗಿ ಬಣ್ಣಿಸಿದ್ದಾನೆ. ವಿಜಯನಗರದ ರಾಮರಾಯನು ಹಸನ ನಾಯಝಾಮ ಶಹನಿಗೆ ಎರಡು ಒಪ್ಪಂದದ ಕರಾರುಗಳನ್ನು ಹಾಕಿದನು. ಒಂದು ಕಲ್ಯಾಣವನ್ನು ಬಿಜಾಪುರದವರಿಗೆ ಬಿಟ್ಟುಕೊಡಬೇಕು. ಎರಡನೆಯದೆಂದರೆ ಶಹನು ರಾಮರಾಯನು ಠಾಣೆಗೆ ಬಂದು ಅವನಿಂದ ವೀಳ್ಯೆಯನ್ನು ಸ್ವೀಕರಿಸಿ ಹೋಗಬೇಕು. ಎಂದು ಇವೆರಡೂ ಅತ್ಯಂತ ಅಪಮಾನ ಕಾರಕವಾದ ಕರಾರುಗಳಾಗಿದ್ದರೂ ಉಪಾಯಗಾಣದೇ ಶಹನು ರಾಮರಾಯನ ಠಾಣೆಗೆ ಹೋದನು. ರಾಮರಾಯನು ಅವನನ್ನು ಸ್ವಾಗತಿಸಲು ತನ್ನ ಡೇರೆಯ ಬಾಗಿಲಿಗೆ ಬರಲಿಲ್ಲ. ನಾಯಝಾಮ ಶಹನು ಡೇರೆಯೊಳಗೆ ಹೊಕ್ಕನು. ರಾಮರಾಯನು ಎದ್ದುನಿಂತನು. ಮತ್ತು ಶಹನ ಹಸ್ತಕ್ಕೆ ಮುದ್ದಿಟ್ಟನು. ಮೂರ್ಖನೂ ಮದೋನ್ಮತ್ತನೂ ಆದ ಶಹನು ಕೂಡಲೇ ನೀರನ್ನೂ ಹರಿವಾಣವನ್ನೂ ತರಲು ಸೂಚಿಸಿದನು. "ಈ ಹಿಂದು ಕಾಫಿರನು ಮುಟ್ಟಿದ ತನ್ನ ಹಸ್ತ ಮಲೀನವಾಯಿತೆಂದೂ ಅದನ್ನು ತೊಳೆಯಬೇಕೆಂದೂ ಇಚ್ಛಿಸಿದನು. ಅವನ ಸೇವಕರು ನೀರು ತಂದರು. ಶಹನು ಕೈತೊಳೆದುಕೊಂಡನು. ಇದನ್ನು ಕಂಡು ಕ್ರೋಧದಿಂದ ಉರಿಯುತ್ತ ಕನ್ನಡ ಭಾಷೆಯಲ್ಲಿ ರಾಮರಾಯನು ನುಡಿದನು. "ಇವನು ನನ್ನ ಅತಿಥಿಯಾಗದಿದ್ದರೆ ಇವನ ವರ್ತನಕ್ಕೆ ಅಸಹನೀಯವಾದ ಪ್ರಾಯಶ್ಚಿತ್ತವನ್ನು ಕೊಡುತ್ತಿದ್ದೆ" ಎನ್ನುತ್ತ ನೀರನ್ನು ತರಿಸಿ ತಾನೂ ಕೈತೊಳೆದುಕೊಂಡನು. ಕಲ್ಯಾಣ ಕೋಟೆಯ ಕೀಲಿಕೈಯನ್ನು ರಾಮರಾಯನಿಗಿತ್ತು ಹಸನನು ಹಿಂತಿರುಗಿದನು.

ಆದರೆ ಈ ಒಡಂಬಡಿಕೆಯು ತುಸು ಕಾಲ ಸಹ ಬಾಳಲಿಲ್ಲ. ಹುಸೇನ ಶಹನು ಇಬ್ರಾಹಿಮ ಕುತುಬಶಹನೊಂದಿಗೆ ಒಪ್ಪಂದವನ್ನು ಮಾಡಿಕೊಂಡು ಅಲ್ಲೀ ಆದಿಲಶಹನ ಮೇಲೆ ದಂಡೆತ್ತಿ ಹೋದನು. ಅಲ್ಲಿಆದಿಲಶಹ ಪುನಃ ರಾಮರಾಯನ ಸಹಾಯವನ್ನು ಯಾಚಿಸಿದನು. ರಾಮರಾಯನು ೫೦ಸಾವಿರ ಕುದುರೆ ಸವಾರ ಮತ್ತು ಅಸಂಖ್ಯ ಕಾಲಾಳುಗಳೊಡನೆ ಸಹಾಯಕ್ಕೆ ಧಾವಿಸಿದನು. ಕಲ್ಯಾಣದ ಹತ್ತಿರ ಘೋರವಾದ ಕದನವಾಯಿತು. ನಿಜಾಂ ಶಹನಿಗೆ ಕುತುಬಶಹನ ಸಹಾಯ ಸಿಗಲಿಲ್ಲ. ಶಹನು ಅಹಮ್ಮದನಗರಕ್ಕೆ ಓಡಿಹೋಗಬೇಕಾಯಿತು. ವೈರೀ ದಂಡು ಅಹಮ್ಮದನಗರವನ್ನೇ ಮುತ್ತಿತು. ಆಗ ರಾಮರಾಯನ ಸೈನಿಕರು ಮುಸಲ್ಮಾನರಲ್ಲಿ ಅಸಹನೀಯ ಅತ್ಯಾಚಾರವನ್ನು ಮಾಡಿದರು. ಮಸೂತಿಗಳಲ್ಲಿ ಮೂರ್ತಿಯನ್ನಿಟ್ಟು ಪೂಜಿಸಿದರು. ಮಳೆಗಾಲ ಪ್ರಾರಂಭವಾದದ್ದರಿಂದ ಮುತ್ತಿಗೆಯನ್ನು ಸಡಲಿಸಿ ಊರಿಗೆ ತೆರಳಿದರು.

. . . . . . . .

ರಾಮರಾಯ ಮತ್ತು ಅವನ ಸೈನಿಕರು ಅಹಮ್ಮದನಗರ ರಾಜ್ಯದಲ್ಲಿ ಮುಸಲ್ಮಾನ ಧರ್ಮದ ವಿರುದ್ಧ ಆಚರಣೆಗಳನ್ನು ಅತಿಯಾಗಿ ಮಾಡಿದರಲ್ಲದೇ ಸ್ವತಃ ರಾಮರಾಯನು ಆ ರಾಜ್ಯದ ರಾಯಭಾರಿಗಳನ್ನು ಅತಿಯಾಗಿ ಕಡೆಗಣಿಸಿದನು. ಆ ರಾಯಭಾರಿಗಳು ದರಬಾರಕ್ಕೆ ಬಂದಾಗ ಅವರಿಗೆ ಕುಳಿತುಕೊಳ್ಳಲು ಸಹ ಹೇಳಲಿಲ್ಲ. ಅಹಂಕಾರಯುಕ್ತವಾದ ಅವಮಾನಕರವಾದ ರೀತಿಯಲ್ಲಿಯೇ ಅವರೊಡನೆ ಸಂಭಾಷಣೆ ಮಾಡಿದನು. ರಾಮರಾಯನು ಈ ಈರ್ವರೂ ಶಹರಿಂದಲೂ ಅನೇಕ ಪ್ರದೇಶಗಳನ್ನು ಕಸಿದುಕೊಂಡನು. ಇದೇ ವಿಜಯನಗರದವರ ಕೊನೆಯ ಜಯವೆಂದು ಹೇಳಬಹುದು.

. . . . . . . .

ಸದಾಕಾಲ ರಾಮರಾಯನ ಉಪಟಳದಿಂದ ಬೇಸತ್ತ ಬಿಜಾಪುರದ ಆದಿಲಶಹನು ತನ್ನ ಜಾತಿಯವರೊಡನೆ ಗೌಪ್ಯವಾದ ಪತ್ರವ್ಯವಹಾರವನ್ನೂ ರಾಯಭಾರಿಗಳಿಂದ ಮಾತುಕತೆಗಳನ್ನೂ ಪ್ರಾರಂಭಿಸಿಬಿಟ್ಟನು. ಈ ಕಾಲಕ್ಕೆ ರಾಮರಾಯನ ರಾಜ್ಯವು ಅತ್ಯಂತ ವಿಸ್ತಾರವಾಗಿದ್ದಿತು. ಇವನಿಗೆ ದೇಶದ

ವಿವಿಧ ಭಾಗಗಳಿಂದ ಅಗಣಿತವಾದ ಸಂಪತ್ತು ಬರತೊಡಗಿತ್ತು. ಅರವತ್ತರ ಮೇಲ್ಪಟ್ಟ ಬಂದರುಗಳು ವಿಜಯನಗರದವರ ಸ್ವಾಧೀನದಲ್ಲಿದ್ದವು. ಸಿರಿವಂತಿಗೆಯಿಂದಲೂ ರಾಜ್ಯವಿಸ್ತಾರದಿಂದಲೂ ಮದೋನ್ಮತ್ತನಾಗಿದ್ದ ರಾಮರಾಯನಲ್ಲಿ ಸೈನ್ಯಸಾಗರವು ಸಾಗರರೂಪದಲ್ಲಿಯೇ ಇದ್ದಿತು. ಯಾವ ಮುಸಲ್ಮಾನ ರಾಜನೂ ಏಕೈಕನಾಗಿ ರಾಮರಾಯನನ್ನು ಎದುರಿಸಲು ಧೈರ್ಯ ಕೂಡ ಮಾಡುವ ಸ್ಥಿತಿಯಲ್ಲಿರಲಿಲ್ಲ. ಆದುದರಿಂದ ಬಿಜಾಪುರದ ಆದಿಲಶಹನು ತನ್ನ ಕಳಕಳಿಯ ನಿವೇದನೆಯನ್ನು ಇಬ್ರಾಹಿಮ ಕುತುಬಶಹನಿಗೆ ತಿಳಿಸಿದನು.

ಇಬ್ರಾಹಿಮು ಕುತುಬಶಹನು ಈ ನಿವೇದನೆಗೆ ಕೂಡಲೇ ಅತ್ಯಂತ ಸಂತೋಷದಿಂದ ಒಪ್ಪಿಕೊಂಡನು. ಬಿಜಾಪುರಕ್ಕೆ ತನ್ನ ಸಕಲ ಸೈನ್ಯ ಧನಗಳ ಸಹಾಯ ಮಾಡುವದಾಗಿ ಒಪ್ಪಿ ತನ್ನ ಶತ್ರುವಾದ ಹಸನ ಶಹನ ಭೆಟ್ಟಿಗೆ ಅಹಮ್ಮದನಗರಕ್ಕೆ ಗುಪ್ತರಾಯಭಾರಿಗಳನ್ನು ಕಳಿಸಿಕೊಟ್ಟನು. ಹಸನಶಹನು ಈ ರಾಯಭಾರಿಗೆ ದರ್ಶನವೀಯಬೇಕೋ ಬೇಡವೋ ಎಂದು ಬಹಳವಾಗಿ ಯೋಚಿಸಿದನು. ಕೊನೆಗೆ ತನ್ನ ಅತ್ಯಂತ ವಿಶ್ವಾಸಿಕ ಅಮಾತ್ಯರ ಗುಪ್ತ ಸಭೆಯಲ್ಲಿ ರಾಯಭಾರಿಗಳನ್ನು ಕಂಡನು. ಕುತುಬಶಹನ ರಾಯಭಾರಿಯು ಬಿಜಾಪುರದ ಆದಿಲಶಹನ ವಿಚಾರ ಮತ್ತು ಯೋಜನೆಗಳನ್ನು ಅವನೆದುರಿಗಿಟ್ಟನು.

"ಹಿಂದಕ್ಕೆ ಬಹಮನೀ ರಾಜರ ದರ್ಪವು ಹಿಂದೂ ರಾಜರೆಲ್ಲರ ದರ್ಪಕ್ಕೂ ಸಮವಾಗಿದ್ದುದರಿಂದ ಎಲ್ಲವೂ ಸರಾಗವಾಗಿ ನಡೆದಿತ್ತು. ಈಗ ಮುಸಲ್ಮಾನರಾದ ನಾವು ಹರಿದು ಹಂಚಿ ಐದುಜನ ಆಗಿದ್ದೇವೆ. ಹಿಂದೂ ಕಾಫೀರನು ಅತ್ಯಂತ ಪ್ರಬಲನಾಗಿದ್ದಾನೆ. ಆದ್ದರಿಂದ ನಾವೆಲ್ಲರೂ ಐಕ್ಯರಾಗದ ಹೊರತು ಗತ್ಯಂತರವಿಲ್ಲ. ಹಿಂದಿನದೆಲ್ಲ ಮರೆತು ಅಂತಃಕರುಣಪೂರ್ವಕವಾದ ಗೆಳೆತನದಿಂದ ನಾವು ಒಂದಾಗಬೇಕು. ಎಲ್ಲರೂ ಏಕಕಾಲಕ್ಕೆ ವಿಜಯನಗರವನ್ನು ಮುತ್ತಿ ಅವನನ್ನು ದಕ್ಷಿಣ ಹಿಂದುಸ್ಥಾನದಿಂದ ಓಡಿಸಬೇಕು. ಅಂದರೆ ಮಾತ್ರ ನಮ್ಮ ಪವಿತ್ರವಾದ ಮಸೂತಿಗಳು ಉಳಿಯುವವು. ಕುರಾಣ ಪಠಣ ನಡೆದೀತು. ನಮ್ಮ ಮುಸಲ್ಮಾನ ಬಾಂಧವರು

ಚಿರಶಾಂತಿಯಿಂದ ದಕ್ಷಿಣದಲ್ಲಿ ಬಾಳಿಯಾರು. ಇಲ್ಲದಿದ್ದರೆ ನಾವು ಹಾ
ಗುವದು ಖಂಡಿತ" ಎಂದು ಮೊದಲಾಗಿ ರಾಯಭಾರಿಯು ಸಂದೇಶವನ್ನು
ಬೀರಿದನು.

ಮತ್ತೂ ಮಿತ್ರತ್ವದ ದ್ಯೋತಕವೆಂದು ಹಸನನಾಯರುಜಾಮಶಹನು
ತನ್ನ ಮಗಳಾದ ಜಾಂದಬೀಯನ್ನು ಬಿಜಾಪುರದ ಆದಿಲಶಹನಿಗೆ ಕೊ
ಬೇಕು. ವರದಕ್ಷಿಣೆಯೆಂದು ಸೋಲ್ಲಾಪೂರ ಕೋಟೆಯನ್ನು ನೀಡಬೇಕು
ಮತ್ತು ಅಲ್ಲಿ ಆದಿಲಶಹನು ತನ್ನ ತಂಗಿಯನ್ನು ಹಸನನ ಮಗನಿಗೆ ಕೊಟ್ಟು
ಮದುವೆ ಮಾಡಬೇಕೆಂದು ಗೊತ್ತಾಯಿತು. ಮುಂದೆ ಕೆಲ ದಿವಸಗಳಲ್ಲಿ
ಇವೆರಡೂ ವಿವಾಹಗಳೂ ಅತ್ಯಂತ ವಿಜೃಂಭಣೆಯಿಂದ ನೆರವೇರಿದವು.
ಈರ್ವರೂ ಅತ್ಯಂತ ಸ್ನೇಹಿತರೂ ಆಪ್ತರೂ ಆದರು. ಇನ್ನು ಧರ್ಮ ಯುದ್ಧ
ಕ್ಕಾಗಿ ಸಿದ್ಧತೆಗಳನ್ನು ಈರ್ವರೂ ಅತ್ಯಂತ ಆಸ್ಥೆಯಿಂದಲೂ ಭ
ದಿಂದಲೂ ನಡೆಸಿದರು.

ಬಿಜಾಪುರದ ಅಲ್ಲಿ ಆದಿಲಶಹನು ರಾಮರಾಯನೊಡನೆ ಒಪ್ಪಂದಮಾಡಿ
ಕೊಂಡು ಮಿತ್ರತ್ವದಿಂದಿದ್ದನು. ಈ ಮಿತ್ರತ್ವವನ್ನು ಮುರಿದೊಗೆದು ಕಾಳ
ಗಕ್ಕೆ ಅಣಿಮಾಡಿಕೊಳ್ಳಬೇಕೆಂಬ ಇಚ್ಛೆಯಿಂದ ತನ್ನ ರಾಯಭಾರಿಯನ್ನು
ವಿಜಯನಗರಕ್ಕೆ ಕಳಿಸಿಕೊಟ್ಟನು. ರಾಯಭಾರಿಯು, ರಾಮರಾಯನು
ಅಲ್ಲೀ ಆದಿಲಶಹನಿಂದ ಪಡೆದುಕೊಂಡ ಬಿಜಾಪುರ ರಾಜ್ಯದ ಕೆಲವು ಪ್ರಾಂತ
ಗಳನ್ನು ತಿರುಗಿ ಕೊಡಬೇಕೆಂದು ರಾಯನನ್ನು ಕೇಳಿದನು. ರಾಮರಾಯನು
ಬಿಜಾಪುರದ ಬೇಡಿಕೆಯನ್ನು ತುಚ್ಛ ರೀತಿಯಿಂದ ತಿರಸ್ಕರಿಸಿದನಷ್ಟೇ ಅಲ್ಲ
ರಾಯಭಾರಿಯನ್ನು ಅನಾದರಿಸಿ ಅಪಮಾನಕಾರಕ ಮಾತುಗಳನ್ನಾಡಿ ದರ
ಬಾರದಿಂದ ಕಳಿಸಿಬಿಟ್ಟನು. ಹೀಗಾಗುವದೆಂದು ಅಲೀ ಆದಿಲಶಹನಿಗೆ
ಗೊತ್ತಿದ್ದಿತು. ಹೀಗಾದದ್ದರಿಂದ ಅವನಿಗೆ ಸಂತೋಷವೂ ಆಯಿತು.
ಬಹಿರಂಗವಾಗಿಯೇ ಯುದ್ಧ ತಯಾರಿಯನ್ನು ಎಲ್ಲ ಮುಸ್ಲಿಮ ಶಹರು
ಅತ್ಯಂತ ದಕ್ಷತೆಯಿಂದ ಮಾಡಿ ಹಿಂದೂ ಕಾಫೀರನ ಹುಟ್ಟನ್ನು ತಗ್ಗಿಸಲು
ಸಿದ್ಧರಾದರು.

ಇಬ್ರಾಹಿಮು ಕುತುಬಶಹನನ್ನೊಳಗೊಂಡು ಉಳಿದೆಲ್ಲ ಮೂವರು ಶಹರು ಕೂಡಿಕೊಂಡು ಅಪಾರವಾದ ಸೈನ್ಯದೊಂದಿಗೆ ಬಿಜಾಪುರದ ವಿಶಾಲವಾದ ಮೈದಾನಕ್ಕೆ ಧಾವಿಸಿ ಅಲ್ಲಿ ಆದಿಲಶಹನ ಬೆಂಬಲಕ್ಕೆ ಬಂದರು. ಇ. ಸ. ೧೫೬೪ ಡಿಶೆಂಬರ ೨೫ನೇ ತಾರೀಖಿನ ದಿವಸ ಸೋಮವಾರದ ಐದೂ ಮಂದಿ ಶಹರ ಸಾಗರೋಪಮ ಸೈನ್ಯವು ದಕ್ಷಿಣಕ್ಕೆ ಧರ್ಮಯುದ್ಧಕ್ಕಾಗಿ ಸಾಗಿತು. ಕೃಷ್ಣಾ ತೀರದ ಸನಿಯದಲ್ಲಿಯ ಅತಿ ಕೋಟೆಯಾಗಿ ನಿಂತ ತಾಳೀಕೋಟಿ ಗ್ರಾಮದ ಹತ್ತಿರ ಬೀಡುಬಿಟ್ಟಿತು.

ಈ ನಿರ್ಣಾಯಕ ಯುದ್ಧವು ತಾಳೀಕೋಟಿಯಲ್ಲಿ ಜರುಗಲಿಲ್ಲ. ತಾಳೀ ಕೋಟಿಯು ಕೃಷ್ಣಾ ನದಿಯ ಉತ್ತರಕ್ಕೆ ೨೫ ಮೈಲು ದೂರದಲ್ಲಿದೆ. ರಾಮರಾಯನ ಠಾಣೆಗೆ ಹತ್ತು ಮೈಲು ದೂರದಲ್ಲಿ (ಕೃಷ್ಣಾನದಿಯ ದಕ್ಷಿಣ ದಲ್ಲಿ) ಜರುಗಿತು. ರಕ್ಕಸತಂಗಡಿಗಿಯಲ್ಲಾಯಿತೆಂದು ಕೆಲವರು ಅಭಿ ಪ್ರಾಯ ಪಟ್ಟರೂ ನಿಶ್ಚಿತವಾದ ಸ್ಥಳವಾವುದೆಂಬುದು ಗೊತ್ತಾಗಿಲ್ಲ. ಬಹುಶಃ ಯುದ್ಧವು ಭದ್ರವಾದ ಕೋಟೆಯೆನಿಸಿದ ಮುದುಗಲ್ಲ ಹತ್ತರದ ಇಂಗಳಗಿ ಹಳ್ಳಿ ಮತ್ತು ಬಾಯಾಪುರ (ಭೋಗಾಪುರ) ನಡುವಿರುವ ವಿಶಾಲವಾದ ಮೈದಾನದಲ್ಲಿ ಯುದ್ಧ ನಡೆಯಿತೆಂದು ರಾಬರ್ಟ ಶಿವೆಲ್ಲನು ಅಭಿಪ್ರಾಯ ಪಡುತ್ತಾನೆ.

ಇಲ್ಲಿ (ಅಂದರೆ ತಾಳೀಕೋಟಿಯ ಮೈದಾನದಲ್ಲಿ) ಅಭ್ಯಾಗತನಾದ ಬಿಜಾಪುರದ ಅಲ್ಲೀ ಆದಿಲಶಹನು ಉಳಿದನಾಲ್ಕು ಶಹರನ್ನು ಅಖಂಡ ಮಾನ ಮರ್ಯಾದೆಗಳಿಂದಲೂ ಅತ್ಯಂತ ವೈಭವದಿಂದಲೂ ರಾಜಮಹಾರಾಜರಿಗೆ ಒಪ್ಪುವ ರೀತಿಯಲ್ಲಿ ಸ್ವಾಗತಿಸಿದನು. ಕೆಲವು ದಿವಸ ವಿಜಯನಗರದ ಮೇಲೆ ಹೇಗೆ ದಂಡೆತ್ತಿ ಹೋಗಬೇಕು. ನದಿಯನ್ನು ಯಾವ ಸ್ಥಳದಲ್ಲಿ ದಾಟಬೇಕು. ಸೈನ್ಯದ ರಚನೆಯನ್ನು ಎಂತು ಮಾಡಬೇಕು. ಮೊದಲಾದ ಅನೇಕ ಯೋಜನೆಗಳನ್ನು ಕಲ್ಪಿಸಿಕೊಳ್ಳತೊಡಗಿದರು. ವಿಜಯನಗರದವ ರಿಗೆ ಇದರ ಪರಿವೆಯೇ ಇರಲಿಲ್ಲ. ಯಾವ ಮುಸ್ಲಿಮನೂ ತಮ್ಮನ್ನು ಎದು ರಿಸಲಾರನೆಂಬ ಗರ್ವದಲ್ಲಿಯೇ ಅವರಿದ್ದರು. ಈ ಎರಡು ನೂರು ವರುಷ

ಗಳಲ್ಲಿ ಅವ್ಯಾಹತವಾಗಿ ಪ್ರಯತ್ನ ನಡೆಸಿದರೂ ಈ ಮುಸ್ಲಿಮರು ಕೃಷ್ಣಾನ ದಕ್ಷಿಣಕ್ಕೆ ಬರಲಾಗಲಿಲ್ಲವೆಂಬ ಬಿಂಕದ ಮಬ್ಬಿನಲ್ಲಿ ಈ ಚಟುವಟಿಕೆಗಳನ್ನು ಕಡೆಗಾಣಿಸಿದರು. ವಿಜಯನಗರದ ಪ್ರಜೆಗಳು ಸಹ ಮುಸಲ್ಮಾನರ ಯುದ್ಧ ಸಿದ್ಧತೆಯ ಭರವನ್ನು ಕಂಡೂ ಕಾಣದವರಂತೆ ತಮ್ಮ ನಿತ್ಯವ್ಯಾಪಾರ ವ್ಯವಸಾಯಗಳಲ್ಲಿ ತೊಡಗಿದ್ದರು. ಗಾದಿಯ ಮಾಲಿಕನಾದ ಸದಾಶಿವರಾಯನು ಸುಖಲೋಲಾಟದಲ್ಲಿ ತನ್ನ ಅರಮನೆಯಲ್ಲಿ ತೇಲಾಡುತ್ತಿದ್ದನು.

ಆದರೆ ರಾಮರಾಯನು ಮಾತ್ರ ಸುಮ್ಮನೆ ಕುಳಿತುಕೊಳ್ಳಲಿಲ್ಲ. ತನ್ನ ರಾಜ್ಯದ ಸಮಸ್ತ ಭಾಗಗಳಿಂದಲೂ ಸೈನ್ಯವನ್ನು ಕರೆಸಿಕೊಂಡನು. ಕರ್ನಾಟಕ, ತೆಲಗುಪ್ರದೇಶ, ಮೈಸೂರ ವಿಭಾಗ, ಪಶ್ಚಿಮ ಮತ್ತು ಮಧ್ಯ ಮಲಬಾರ ಮತ್ತು ತುಟ್ಟತುದಿಯ ದಕ್ಷಿಣದ ತಮಿಳ ದೇಶದಿಂದ ಸಮಸ್ತ ಸೈನಿಕರು ಆನೆ ಕುದುರೆ ಅಗಣಿತ ಧನ ಧಾನ್ಯ ಸಹಿತರಾಗಿ ವಿಜಯನಗರಕ್ಕೆ ಕರೆಯಿಸಿಕೊಂಡನು. ಆಯಾ ಪ್ರಾಂತದ ಸೈನಿಕರ ಮೇಲೆ ಆಯಾ ಅಧಿಕಾರಿಗಳನ್ನೇ ನಿಯಮಿಸಿದನು. ಒಟ್ಟು ಸೈನ್ಯದಲ್ಲಿ ಒಂದು ಲಕ್ಷ ಕುದುರೆ ಸವಾರರೂ ಆರು ಲಕ್ಷ ಕಾಲಾಳುಗಳೂ ಇದ್ದರೆಂದು ಕ್ಯಾಟೋನು ಬರೆಯುತ್ತಾನೆ. ಆನೆಗಳ ಸಂಖ್ಯೆಯನ್ನೂ ಮಾತ್ರ ಹೇಳಲಿಲ್ಲ.

ರಾಮರಾಯನು ಎಲ್ಲಕ್ಕೂ ಮೊದಲು ತನ್ನ ಕೊನೆಯ ತಮ್ಮನಾದ ತಿರುಮಲರಾಯನನ್ನು ಕರೆದು ಅವನ ಸ್ವಾಧೀನಕ್ಕೆ ೨೦ ಸಾವಿರ ಕುದುರೆ ಸವಾರರನ್ನೂ ಒಂದು ಲಕ್ಷ ಕಾಲಾಳುಗಳನ್ನೂ ೫ ನೂರು ಆನೆಗಳನ್ನೂ ಕೃಷ್ಣಾ ನದಿಯನ್ನು ದಾಟಲು ಬರುವ ಸ್ಥಳದಲ್ಲೆಲ್ಲ ಕಾವಲಿರಲು ಹೇಳಿ ಮುಸ್ಲಿಮ ಸೈನ್ಯವು ನದಿಯನ್ನು ದಾಟದಂತೆ ವ್ಯವಸ್ಥೆ ಮಾಡಿದನು. ಆ ಮೇಲೆ ತನ್ನ ಹಿರಿಯ ತಮ್ಮನಾದ ವೆಂಕಟಾದ್ರಿಯನ್ನು ಅಪಾರ ಸೈನ್ಯದೊಂದಿಗೆ ಕಳಿಸಿದನು. ಕೊನೆಗೆ ತಾನೇ ಸ್ವತ: ವಿಜಯನಗರದ ಸಮಸ್ತ ಸೈನಿಕರೊಡಗೂಡಿ ರಣರಂಗಕ್ಕೆ ಧಾವಿಸಿದನು.

ಮುಸ್ಲಿಮ ಶಹರು ತಮ್ಮ ಗುಪ್ತಚಾರರಿಂದ ಇದನ್ನು ತಿಳಿದರು. ಕೃಷ್ಣಾದ ದಕ್ಷಿಣ ತೀರವನ್ನು ವಿಜಯನಗರದವರು ಅತ್ಯಂತ ದಕ್ಷತೆಯಿಂದ ಕಾಯುತ್ತಿರುವರೆಂದೂ ದಾಟಬಹುದಾದ ಸ್ಥಳಗಳಲ್ಲಿ ತೋಪುಗಳನ್ನಿಟ್ಟು ಸನ್ನದ್ಧರಾಗಿರುವರೆಂದೂ ತಿಳಿದರು. ಒಮ್ಮೆಲೇ ನುಗ್ಗಿ ಬಿಡುವದೇ ತಮಗುಳಿದ ಉಪಾಯವೆಂದು ನೆನೆದರು ಈರೀತಿ ನುಗ್ಗಲು ಮೂರುಸಲ ಪ್ರಯತ್ನ ಮಾಡಿ ಹಿಂತಿರುಗಿದರು. ನಾಲ್ಕನೆಯ ಸಲ ರಾತ್ರಿಯಲ್ಲಿ ಅತ್ಯಂತ ಸಾಹಸದಿಂದ ದಾಟಲು ಸಾಧ್ಯವಾದ ಕಡೆಗಳಿಂದ ಸಮಸ್ತ ಸೈನ್ಯದೊಡನೆ ಐವರೂ ಮುಸಲ್ಮಾನ ರಾಜರುಗಳು ನದಿಯನ್ನು ದಾಟಿದರು. ರಾಮರಾಯನ ಅಧಿಪತ್ಯದಲ್ಲಿದ್ದ ಸೈನ್ಯವನ್ನೇ ಮುತ್ತಿಬಿಟ್ಟರು. ಬೆಳಗು ಮುಂಜಾನೆಯ ಹೊತ್ತಿಗೆ ರಾಮರಾಯನ ಠಾಣೆಯಿಂದ ಮುಸ್ಲಿಮ ಸೈನ್ಯವು ಕೇವಲ ಹತ್ತು ಮೈಲು ದೂರದಲ್ಲಿ ಎದುರು ಬರುತ್ತಿತ್ತು- ವೆಂಕಟಾದ್ರಿ ಮತ್ತು ತಿರುಮಲರು ಅತಿ ಸಾಹಸದಲ್ಲಿ ಸೈನ್ಯಸಮೇತ ಬಂದು ಈ ಒಳಗಾಗಿ ತಮ್ಮ ಅಣ್ಣನನ್ನು ಕೂಡಿಕೊಂಡರು. ಮುಸಲ್ಮಾನರು ನದಿಯನ್ನು ದಾಟಿ ಬರುತ್ತಿರುವರೆಂಬ ಸುದ್ದಿಯನ್ನು ಕೇಳಿ ರಾಮರಾಯನಿಗೆ ಆಶ್ಚರ್ಯವಾಯಿತು. ಆದರೆ ಅವನು ಎದೆಗುಂದಲಿಲ್ಲ. ಆತ್ಮ ಮತ್ತು ರಾಜ್ಯ ರಕ್ಷಣೆಯ ಸಕಲ ಉಪಾಯಗಳನ್ನು ತ್ವರಿತದಿಂದ ತೆಗೆದುಕೊಂಡನು.

ಇ. ಸ. ೧೫೬೫ನೇ ಜನೇವರಿ ೨೩ನೇ ತಾರೀಖು ಮಂಗಳವಾರ ಬೆಳಗಿನಲ್ಲಿ ಹಿಂದು ಮುಸ್ಲಿಮ ಸೈನಿಕರು ಕೈಗೆ ಕೈ ಹತ್ತಿ ಕಾದಾಟ ನಡೆಸಿದರು. ಸೈನ್ಯದ ಎಡಗಡೆ ಭಾಗವನ್ನು ತಿರುಮಲನೂ ಬಲಭಾಗವನ್ನು ವೆಂಕಟಾದ್ರಿಯೂ ನೋಡಿಕೊಳ್ಳುತ್ತಿದ್ದರು. ಮಧ್ಯಭಾಗದ ಸೇನಾಧಿಪತ್ಯವನ್ನು ಸ್ವತಃ ರಾಮರಾಯನು ಸ್ವೀಕರಿಸಿದ್ದನು. ತಿರುಮಲನ ಎದುರಿಗೆ ಬಿಜಾಪುರದ ಸಮಸ್ತ ಸೈನ್ಯವು ಅಲೀ ಆದಿಲಶಹನ ನೇತೃತ್ವದಲ್ಲಿತ್ತು. ಹುಸೇನ ನೈಜಾಮಶಹನು ಮುಸಲ್ಮಾನರ ಮಧ್ಯ ಸೈನ್ಯದ ನಾಯಕನಾಗಿದ್ದನು. ಎಡಗಡೆಗೆ ವೆಂಕಟಾದ್ರಿಯ ಎದುರಿಗೆ ಅಹಮ್ಮದನಗರ ಮತ್ತು ಗೋವಳಕೊಂಡದ ಶಹರ ಸೈನ್ಯವು ನಿಂತಿದ್ದವು. ಅಖಂಡವಾದ ಹುಮ್ಮಸದಿಂದ

ನಡೆದ ಕಾಳಗದಲ್ಲಿ ಲೆಕ್ಕವಿಲ್ಲದಷ್ಟು ಸೈನಿಕರು ಹತರಾದರು. ವಿಜಯವಾ ಲೆಯು ರಾಮರಾಯನ ಕೊರಳಿಗೆ ಬರುವಂತಾಯಿತು.

"ಆಗ ರಾಮರಾಯನ ವಯಸ್ಸು ೬೬" ಎಂದು ಕ್ಯೂಟೋ ಬರೆಯು ತ್ತಾನೆ. "ಆದರೂ ಸಹ ೩೦ ವರುಷ ಯುವಕನಂತೆ ಸಮಸ್ತ ಸೈನ್ಯದಲ್ಲಿ ತಿರುಗಾಡಿ ಸೈನಿಕರನ್ನು ಹುರುಪುಗೊಳಿಸುತ್ತಿದ್ದನು. ವೈರಿಗಳು ಎಷ್ಟು ಪ್ರಬಲರಿದ್ದರೂ ಅಂಜಬೇಡಿರಿ ನಮಗೆ ಜಯ ಕಟ್ಟಿಟ್ಟದ್ದು ಹಸನನೈಜಾಮನ ರುಂಡವನ್ನು ಕತ್ತರಿಸಿ ತನ್ನಿರಿ ಆದಿಲಶಹ ಮತ್ತು ಇಬ್ರಾಹಿಮನನ್ನು ಜೀವಂತ ತನ್ನಿರಿ. ಅವರಿಬ್ಬರನ್ನು ಕಬ್ಬಿಣದ ಪಂಜರದಲ್ಲಿಟ್ಟು ಪ್ರದರ್ಶನಕ್ಕೆ ಇಡುವೆನು" ಎಂದು ರಣದಲ್ಲಿ ತಿರುಗಾಡುತ್ತಿದ್ದನು.

ಎಡಬಲ ಸೈನ್ಯದಲ್ಲಿ ತಿರುಮಲ ಮತ್ತು ವೆಂಕಟಾದ್ರಿಯರು ತೋಫು ಗಳಿಂದ ಮುಸಲ್ಮಾನರನ್ನು ಹಣಿಯಹತ್ತಿದರು. ಮಧ್ಯಭಾಗವನ್ನು ಕುದುರೆ ಸವಾರರೂ ಕಾಲಾಳುಗಳೂ ಮುಂದುವರಿಯತೊಡಗಿದರು. ಈ ಭಾಗದಲ್ಲಿಯ ಹತ್ಯಾಕಾಂಡವು ಅಖಂಡವಾಗಿದ್ದಿತು. ರಾಮರಾಯನು ಪಲ್ಲಕ್ಕಿಯನ್ನೇರಿ ರಣರಂಗದಲ್ಲಿ ಅವ್ಯಾಹತವಾಗಿ ಓಡಾಡುತ್ತ ತನ್ನ ಸೈನಿಕರಿಗೆ ಉತ್ಸಾಹ ನೀಡುತ್ತ ಸಾಗತೊಡಗಿದನು. ರಣದ ಮಧ್ಯಭಾಗದಲ್ಲಿಯೂ ಹಿಂದುಗಳು ತೋಫುಗಳನ್ನಿಟ್ಟು ಹಾರಿಸತೊಡಗಿದರು. ಮುಸಲ್ಮಾನರು ಓಡಿಹೋಗುವ ಪ್ರಸಂಗವು ಒದಗತೊಡಗಿತು. ಆಗ ಎಡಬಲದಲ್ಲಿ ಮುಸ್ಲಿಮರು ಏರಿಬಂ ದರು. ಇದರಿಂದ ೫ ಸಾವಿರ ಹಿಂದುಗಳು ನಾಶವಾದರು. ಇದರಿಂದ ಗಾಬರಿಗೊಂಡು ಉಳಿದ ಸೈನ್ಯವು ಮಧ್ಯಭಾಗದಲ್ಲಿ ನುಗ್ಗಿತು. "ಹೀಗೇಕಾ ಯಿತೆಂದು ಮಧ್ಯಭಾಗದ ಹಿಂದೂ ಸೈನಿಕರು ವಿವಂಚನೆಗೊಳಗಾಗಿ ಗಡ ಬಡಿಸತೊಡಗಿದರು. ಇದೇ ಸಮಯವೆಂದರಿತು ೫ ಸಾವಿರ ಮುಸಲ್ಮಾನ ಕುದುರೆ ಸವಾರರು ಸೈನ್ಯದ ಮಧ್ಯದಲ್ಲಿ ಭರದಿಂದ ನುಗ್ಗಿ ರಾಮರಾಯನಿ ರುವ ಸ್ಥಳಕ್ಕೆ ಧಾವಿಸಿದರು.

ಆಗ ನಾಯಜಾಮಶಹನ ಏರಿದ ಆನೆಯು ಮದವೇರಿ ಓಡುತ್ತ ಬಂದು ರಾಮರಾಯನ ಪಲ್ಲಕ್ಕಿಗೆ ಹಾಯ್ದುಬಿಟ್ಟಿತು. ಭೋಯಿಗಳು ಪಲ್ಲಕ್ಕಿಯನ್ನು

ಕೆಡವಿದರು. ರಾಮರಾಯನು ಕೆಳಗೆ ಬಿದ್ದು ಏಳುವಷ್ಟರಲ್ಲಿಯೇ ಹುಸೇನ ನಾಯಜಾಮುಶಹನು ಬಂದು ರಾಮರಾಯನ ಶಿರಚ್ಛೇದನ ಮಾಡಿದನು. ಒಂದು ದೊಡ್ಡದಾದ ಭಲ್ಲೆಗೆ ರುಂಡವನ್ನು ಸಿಕ್ಕಿಸಿ ಕುದುರೆ ಸವಾರನ ಕೈಗಿತ್ತು, ಹಿಂದೂ ಸೈನ್ಯದಲ್ಲಿ ನುಗ್ಗಿ ಮೆರೆಸಲು ಕಳಿಸಿದನು.

ರಾಯನ ಅಂತ್ಯವನ್ನು ಕಂಡು ಹಿಂದೂ ಸೈನ್ಯವು ಬೆದರಿತು. ಜಲ್ಲಾ ಪಿಲ್ಲಿಯಾಯಿತು. ಪ್ರತಿಯೊಬ್ಬನು ತನ್ನ ಪ್ರಾಣ ಉಳಿಸಿಕೊಳ್ಳಲು ರಣದಿಂದ ಕಾಲ್ತೆಗೆದನು. ಮುಸಲ್ಮಾನರು ವಿಜಯಿಯಾದರು. ಹಿಂದೂ ಸೈನ್ಯವನ್ನು ಮುಸಲ್ಮಾನರು ಬೆನ್ನಟ್ಟಿದರು. ಸಿಕ್ಕವರನೆಲ್ಲರನ್ನೂ ಕೊಂದರು. ೧೦ ಲಕ್ಷ ಹಿಂದು ಸೈನಿಕರನ್ನು ಮುಸಲ್ಮಾನರು ಕೊಂದರು. ರಕ್ತದ ಕಾಲುವೆಯು ಹರಿದು ಕೃಷ್ಣಾನದಿಗೆ ಕೂಡಿ ಇಡೀ ನದಿಯೇ ರಕ್ತವರ್ಣದ್ದಾಗಿತ್ತೆಂದು ಇತಿಹಾಸಕಾರರು ಬರೆದಿದ್ದಾರೆ. ಮುಸಲ್ಮಾನರನ್ನು ಎದುರಿಸಲು ಒಬ್ಬರು ಸಹ ನಿಲ್ಲಲಿಲ್ಲ. ಎಲ್ಲರೂ ಪಲಾಯನ ಮಾಡಿ ವೈರಿಗಳಿಗೆ ಮುಕ್ತದ್ವಾರ ಮಾಡಿಕೊಟ್ಟರು.

"ಹಸನ ನಾಯಜಾಮುಶಹನು ಸ್ವತಃ ತನ್ನ ಹಸ್ತದಿಂದಲೇ ರಾಮ ರಾಯನ ರುಂಡವನ್ನು ಹಾರಿಸಿ ಅತ್ಯಂತ ಸಂತೋಷಪರವಶನಾಗಿ ಉದ್ಗಾರ ತೆಗೆದನು. "ಈಗ ನಿನ್ನ ಮೇಲಿದ್ದ ನನ್ನ ದ್ವೇಷದ ಸೇಡನ್ನು ತೀರಿಸಿಕೊಂ ಡೆನು. ಇನ್ನು ದೇವರು ನನಗೇನು ಶಿಕ್ಷೆ ಕೊಡುವನೋ ಕೊಡಲಿ" ಎಂದ ನು. ಆದರೆ ಬಿಜಾಪುರದ ಆದಿಲ್ಲಶಹನು ರಾಮರಾಯನ ಶಿರವನ್ನು ಕಂಡು ಅತ್ಯಂತ ದುಃಖಿತನಾದನು. ಹೀಗೆ ಕ್ಯೂಟೊ ಬರೆಯುತ್ತಾನೆ. ಈ ಮುಸಲ್ಮಾನರು ಹಿಂದುಗಳ ಬಗ್ಗೆ ಇಟ್ಟುಕೊಂಡಿದ್ದ ದ್ವೇಷವು ಅತ್ಯಂತ ಅಗಾಧವಾದದ್ದೂ ನೀಚತನದ್ದೂ ಹೇಯವಾದದ್ದೂ ಆಗಿತ್ತು. ರಾಮರಾಯನ ರುಂಡವು ಅಹಮದನಗರದ ವಶದಲ್ಲಿಯೇ ಇದ್ದಿತು. ಅದನ್ನು ಪ್ರತಿ ವರುಷ ಯುದ್ಧದಲ್ಲಿ ಗೆದ್ದ ಸುದಿನದ ಮಹೋತ್ಸವವೆಂದು ಹೊರತೆಗೆದು ಅದಕ್ಕೆ ಎಣ್ಣೆ ಲೇಪಿಸಿ ಕೆಂಪು ಬಣ್ಣವನ್ನು ಹಚ್ಚಿ ಪ್ರದರ್ಶನಕ್ಕಿಟ್ಟು ಧಾರ್ಮಿಕ ಮುಸಲ್ಮಾನರೆಂದು ಕರೆಯಿಸಿಕೊಳ್ಳುವವರೆಲ್ಲರೂ ತಿರಸ್ಕಾರದ ದರ್ಶನ

ಪಡೆಯುತ್ತಿದ್ದರು. ಈ ಪ್ರಕಾರ ಇದು ಇ. ಸ. ೧೮೫೭ರ ವರೆಗೆ ಅವ್ಯಾಹತ ವಾಗಿ ಸಮಾರಂಭ ರೂಪದಲ್ಲಿ ಅಹಮದನಗರದಲ್ಲಿ ನಡೆಯುತ್ತಿತ್ತು. ನೀತಿ ಭ್ರಷ್ಟರೂ ನೀಚತಮರೂ ಪರಮ ದ್ವೇಷಿಗಳೂ ಆದ ಮುಸಲ್ಮಾನರು ನಡೆಸಿದ ಕಾರ್ಯವಿದು" ಎಂದು ಉದ್ಗಾರ ತೆಗೆದಿದ್ದಾನೆ.

ಈ ಯುದ್ಧದಲ್ಲಿ ಪ್ರತಿಯೊಬ್ಬ ಮುಸಲ್ಮಾನ ಸೈನಿಕನು ತನಗೆ ತೋರುವ ರೀತಿಯಲ್ಲಿ ದಂಗೆ ಸುಲಿಗೆಯನ್ನು ಮಾಡಿದನು. ಅಪಾರ ಹಣ ವನ್ನು ಸುಲಿದನು. ' ಸಿಕ್ಕವರನ್ನು ಸೆರೆಹಿಡಿದು ಸ್ವಾಧೀನಪಡಿಸಿಕೊಂಡನು. ಕೈಗೆಸಿಕ್ಕ ಸ್ತ್ರೀಯರನ್ನು ಭ್ರಷ್ಟಮಾಡಿ ವಶಪಡಿಸಿಕೊಂಡನು. "ಯಾವ ಯಾವ ಸೈನಿಕನಿಗೆ ಈ ಲೂಟಿಯನ್ನು ಧನ ಮತ್ತು ಜನಗಳು ಸಿಕ್ಕಿರುವವೋ ಅವೆಲ್ಲ ಅವನವೇ" ಎಂದು ಐದೂ ಶಹರು ಜಾಹೀರುಪಡಿಸಿದರು. ಸೆರೆಸಿಕ್ಕ ಹಿಂದೂ ಪುರುಷರು ಮುಸಲ್ಮಾನರಿಗೆ ಆಜೀವಗುಲಾಮರಾದರು. ಸ್ತ್ರೀಯರು ಮುಸಲ್ಮಾನರ ತೊತ್ತಾದರು, ಭೋಗ್ಯ ವಸ್ತುಗಳಾದರು.

ವಿಜಯನಗರದ ನಾಗರಿಕರು ಹೌಹಾರಿಬಿಟ್ಟರು. ಇಂಥ ಗಂಡಾಂತ ರವು ಒದಗುವದೆಂದು ಅವರು ಕನಸಿನಲ್ಲಿಯೂ ನೆನೆಸಿರಲಿಲ್ಲ. ಏಕೆಂದರೆ ಶಹರದ ಸಮಸ್ತ ಶಕ್ತಿಯುತ ತರುಣರು ಈ ಸಲ ರಣಕ್ಕೆ ಹೋಗಿದ್ದರು. ವಿಜಯವು ತಮಗೆ ಸಿದ್ಧವೆಂದು ನಾಗರಿಕರು ನಂಬಿ ಸ್ವಸ್ಥವಾಗಿದ್ದರು. ಈವರೆಗೆ ಎಷ್ಟೋಸಲ ಮುಸಲ್ಮಾನರೊಡನೆ ಕದನಗಳಾಗಿದ್ದವು. ಪ್ರತಿ ಸಲವೂ ವಿಜಯನಗರದ ಸೈನಿಕರು ವಿಜಯಿಗತಳಾಗಿ ವೈರಿಗಳಿಂದ ಧನ-ಕನಕಗಳ ರಾಶಿಯನ್ನೇ ತರುತ್ತಿದ್ದರು. ಅಥವಾ ಒಪ್ಪಂದ ಮಾಡಿಕೊಂಡು ಸುರಕ್ಷಿತವಾಗಿ ಹಿಂತಿರುಗುತ್ತಿದ್ದರು. ಆದರೆ ಈಸಲ ಗಾಬರಿಗೊಂಡ ಸೈನಿಕರು ಜೀವ ರಕ್ಷಣೆಗಾಗಿ ಓಡೋಡಿ ಶಹರಕ್ಕೆ ಬಂದು ಅವಿತುಕೊಳ್ಳುವ ದನ್ನು ಕಂಡು ನಾಗರಿಕರಿಗೆ ದಿಕ್ಕೇ ತೋರದಾಯಿತು. ತಮ್ಮ ಆಪ್ತ, ಸ್ತ್ರೀ, ಧನಸಂಪತ್ತುಗಳ ಸ್ಥಿತಿಯೇನಾಗಬಹುದೆಂದು ನೆನೆದು ಹುಚ್ಚರಾದರು. ಅದರಲ್ಲಿಯೂ ರಾಜ ಮನೆತನದವರು ಓಡಿಬಂದದ್ದನ್ನು ಕಂಡು ನಾಗರಿಕರ ಎದೆಗೆ ಸಿಡಿಲು ಬಡಿದಂತಾಯಿತು.

ರಾಜಮನೆತನದವರು ಓಡಿಬಂದು ಕೈಗೆಸಿಕ್ಕ ಸಂಪತ್ತನ್ನೆಲ್ಲವನ್ನೂ ಆನೆ, ಕುದುರೆಗಳ ಮೇಲೆ ಹೇರಿಕೊಂಡು ಕೆಲವೇ ತಾಸುಗಳಲ್ಲಿ ಅರಮನೆಯನ್ನು ಬಿಟ್ಟು ಓಡಿಹೋದರು. ೫೫೦ ಆನೆಗಳ ಮೇಲೆ ಬಂಗಾರ ವಜ್ರ ವೈಢೂರ್ಯಗಳೇ ಮೊದಲಾದ ಅಗಣಿತಸಂಪತ್ತನ್ನು ಅಮೂಲ್ಯವಾದ ಸಿಂಹಾಸನ ಮೊದಲಾದವುಗಳನ್ನೂ ಹೇರಿಕೊಂಡು ಸಾಗಿದರು. ಇದು ಬಹುಶಃ ನೂರು ಮಿಲಿಯನ್ ಸ್ಟರ್ಲಿಂಗ್ ಆಗಬಹುದೆಂದು ಪಾಶ್ಚಾತ್ಯ ಇತಿಹಾಸಕಾರನು ಹೇಳುತ್ತಾನೆ. ಈ ರೀತಿ ವಿಜಯನಗರವನ್ನು ರಕ್ಷಿಸಲು ದೇವರಿಗೇ ಹೇಳಿ ಹೊರಟುಹೋದರು. ಆದರೆ ಸದಾಶಿವರಾಯನು ತನ್ನ ಸುಖವಿಲಾಸದ ಅರಮನೆಯಲ್ಲಿ ಇನ್ನೂ ಇದ್ದನು. ರಣರಂಗದಿಂದ ಓಡಿಬಂದವನು ತಿರುಮಲರಾಯನೊಬ್ಬನೇ ರಾಜಸಂಬಂಧಿಕನಾಗಿದ್ದನು. ಅವನು ಸದಾಶಿವರಾಯನನ್ನು ಕರೆದುಕೊಂಡು ಮತ್ತಷ್ಟು ಇದ್ದುದನ್ನು ಸವರಿಕೊಂಡು ಕೋಟೆಗೆ ಓಡಿಬಂದರು.

ಆ ಮೇಲೆ ಮುಸಲ್ಮಾನರು ವಿಜಯನಗರವನ್ನು ಮುತ್ತಿದರು. ನಾಗರಿಕರಿಗೆ ನಿಜವಾದ ಗಂಡಾಂತರ ಪ್ರಾಪ್ತವಾಯಿತೆಂದು ಅನ್ನುವದಕ್ಕಿಂತ ಇಡೀ ನಗರವು ಪ್ರಳಯಕ್ಕೆ ಆಹುತಿಯಾಯಿತೆಂದರೆ ಸರಿಕಂಡೀತು. ಯಾರೂ ರಕ್ಷಕರಿಲ್ಲದ ನಗರದಲ್ಲಿ ಮುಸಲ್ಮಾನರ ವಿಜಯದ ದಾಳಿಯನ್ನು ವರ್ಣಿಸಲು ಸಾಧ್ಯವಿಲ್ಲ. ರಕ್ಷಕರಿಲ್ಲ, ಓಡಿಹೋಗಲು ನಾಗರಿಕರಿಗೆ ಅನುವಿದ್ದಿಲ್ಲ. ಏನೂ ದಾರಿತೋರದೇ ತಮ್ಮಲ್ಲಿದ್ದ ಧನಕನಕಗಳನ್ನೆಲ್ಲ ಮನೆಯಲ್ಲಿಯೇ ಆಳವಾದ ತೆಗ್ಗು ತೆಗೆದು ನೆಲದಲ್ಲಿ ಹೂಳಿಬಿಟ್ಟರು. ಕಳ್ಳರು-ಕಾಕರು, ಲಮಾಣಿಗಳು ಬೇಡರು, ಹರಿಣಶಿಕಾರಿಗಳು ನಗರದಲ್ಲಿ ಪ್ರವೇಶಿಸಿ ಅವ್ಯಾಹತವಾಗಿ ಲೂಟಿ ಮಾಡಿಕೊಂಡು ಎಲ್ಲವನ್ನೂ ಬಳೆದುಕೊಂಡು ಅರಣ್ಯದ ತಮ್ಮ ನಿವಾಸಗಳನ್ನು ಸೇರಿದರು.

ಇನ್ನು ತಮ್ಮನ್ನೆದುರಿಸುವವರಾರೂ ಇಲ್ಲವೆಂದು ಐವರು ಶಹರಿಗೂ ಅನಿಸಿದ್ದರಿಂದ ತಮ್ಮ ಠಾಣೆಗಳಲ್ಲಿ ಹತ್ತು ದಿವಸ ಪರಿಯಂತ ಇದ್ದರು. ಶಕ್ಯವಿದ್ದ ವಿಲಾಸ ಸುಖದಲ್ಲಿ ತೇಲಾಡಿದರು. ಮದ್ಯದಲ್ಲಿ ಈಸಾಡಿದರು.

ಹಿಂದೂ ಸ್ತ್ರೀಯರನ್ನು ಯಥೇಷ್ಟವಾಗಿ ಸಕಲ ಮುಸ್ಲಿಮ ಸೈನಿಕನೂ
ಭೋಗಿಸಿ ತಣಿದುಹೋದರು. ಆಮೇಲೆ ವಿಜಯನಗರಕ್ಕೆ ಬಂದರು. ಅಲ್ಲಿ
ಪ್ರಜೆಗಳನ್ನು ತುಂಡರಿಸಿದರು. ಸುಂದರ ವನಗಳನ್ನೂ ದೃಶ್ಯಗಳನ್ನೂ
ಮಂದಿರಗಳನ್ನೂ ಅರಮನೆ ಮೊದಲ್ಗೊಂಡ ಸಮಸ್ತ ಗೃಹಗಳನ್ನೂ ಕೆಡ
ದರು. ಯಾವ ದೇವಾಲಯವನ್ನೂ ಉಳಿಸದೆ ನುಚ್ಚುನೂರು ಪಾಲು ಮಾ
ದರು. ಕಂಡ ಮೂರ್ತಿಗಳನ್ನು ತುಂಡರಿಸಿ ಒಗೆದರು. ಕೊಳ್ಳೆ ಹಚ್ಚಿದರು.
ಲೂಟಿ ಮಾಡಿದರು, ಪ್ರಳಯ ತಾಂಡವಾಡಿದರು. ಈ ರೀತಿ ಹಗಲು ರಾತ್ರಿ
ಯೆನ್ನದೆ ಐದು ತಿಂಗಳುಗಳ ವರೆಗೆ ವಿಜಯನಗರವನ್ನು ನಾಶಮಾಡಿದರು.
ವಿಜಯವಿಠ್ಠಲ ದೇವಾಲಯವನ್ನು ಹುಲ್ಲಿನಿಂದ ಮುಚ್ಚಿ ಬೆಂಕಿಕೊಟ್ಟು
ಅಖಂಡವಾಗಿ ಅದನ್ನು ದಗದಹಿಸಿ ಅಲ್ಲಿಯ ಅಮೂಲ್ಯವಾದ ಕಲಾಕೃತಿ
ಗಳನ್ನು ಸುಟ್ಟುಬಿಟ್ಟರು.

"ಜಗತ್ತಿನಲ್ಲಿಯೇ ಅತ್ಯಂತ ಸುಂದರವಾದದ್ದೂ ಶಿರಿವಂತವಾದುದೂ
ಅತ್ಯಂತ ನಿಬಿಡವಾದ ವಸತಿಯಿಂದ ಶೋಭಿಸುವಂಥಹದೂ ಆಗಿದ್ದ
ಕೆಲವೇ ತಿಂಗಳಲ್ಲಿ ಸಂಪೂರ್ಣ ನಾಶವಾಗಿ ಜನವಸತಿಯಿಲ್ಲದೆ ದುರ್ದೈವದಿಂದ
ನಿಂತ ಕರಾಳ ಸ್ಥಿತಿಯು ಬಂದ ಉದಾಹರಣೆಯು ವಿಶ್ವವು ಹುಟ್ಟಿದಾಗಿನಿಂದ
ಯಾವ ರಾಜಧಾನಿಗೂ ಒದಗಿದ್ದಿಲ್ಲವೆಂದು ಕ್ಯೂಟೋ ಬರೆಯುತ್ತಾನೆ.

ಹಾಳಾಗಿ ಹೋದ ವಿಜಯನಗರವು ಪುನಃ ಮೇಲಕ್ಕೇಳಲೇ ಇಲ್ಲ
ತಿರುಮಲರಾಯನು ತನ್ನ ಎಲ್ಲ ಪ್ರಜರನ್ನೂ ನಗರಕ್ಕೆ ಬಂದು ವಾಸಿಸಲು
ಕರೆದನು. ಮನವೊಲಿಸಿದನು. ಆದರೆ ಯಾರೂ ಅಲ್ಲಿ ಬಂದು ವಾಸಿಸಲಿಲ್ಲ
ಇವತ್ತಿಗೂ ಅದು ಹಾಳಾದ ಹಂಪೆಯೆಂದು ಕರೆಯಲ್ಪಡುತ್ತಿದೆ. ಈ ರೀತಿ
ಗತಿಗಾಣಿಸಿ ಐವರು ಶಹರು ತಮ್ಮ ತಮ್ಮ ರಾಜಧಾನಿಗಳಿಗೆ ಹೊರಟು
ಹೋದರು.

ಏಕತ್ರವಾದದ್ದೂ ಬಲಾಢ್ಯವಾದದ್ದೂ ಎಂದು ಹೆಸರಾಗಿದ್ದ ವಿಜಯ
ನಗರವು ಕ್ಷಣದಲ್ಲಿ ಮಾಯವಾಯಿತು. ಕೇಳುವರೇ ಗತಿಯಿಲ್ಲದಾಯಿತು

ಇಡೀ ದೇಶದ ತುಂಬ ಕಳ್ಳರು, ದರೋಡೆಖೋರರೂ, ಸುಳಿದಾಡತೊಡಗಿದರು. ರಾಜ್ಯದ ಮಾಂಡಲೀಕರೂ ಸರದಾರರೂ ನಾಯಕರೂ ತಮ್ಮಷ್ಟಕ್ಕೆ ತಾವು ಸ್ವತಂತ್ರರೆಂದು ಸಾರಿಬಿಟ್ಟರು. ತಿರುಮಲರಾಯನು ಪೆನುಗೊಂಡೆಯಲ್ಲಿ ಸದಾಶಿವನೊಡನೆ ಕುಳಿತನು. ಐವರು ಮುಸಲ್ಮಾನರು ವಿಜಯಿಗಳಾದರು ನಿಜ ಆದರೆ ಅವರಲ್ಲಿ ಪರಸ್ಪರರಲ್ಲಿ ದ್ವೇಷ ವೈರತ್ವಗಳು ಕೂಡಲೇ ಬೆಳೆದುಬಿಟ್ಟವು. ಒಂದನ್ನೊಂದು ಹಾಳು ಮಾಡಬೇಕೆಂದೂ ಹವಣಿಸತೊಡಗಿದರು. ತಿರುಮಲರಾಯನು ಮುಸಲ್ಮಾನರಿಗೆ ಹೇಳಿಕಳಿಸಿದನು. "ನನ್ನ ಅಣ್ಣನು ನಿಮ್ಮಿಂದ ತೆಗೆದುಕೊಂಡ ಪ್ರದೇಶಗಳೆಲ್ಲವನ್ನೂ ನಿಮಗೆ ನಾನು ಬಿಟ್ಟುಕೊಡುತ್ತೇನೆ. ನಿಮ್ಮ ನಿಮ್ಮ ಪ್ರದೇಶಗಳನ್ನು ನೀವೇ ನೋಡಿಕೊಂಡು ಹಂಚಿಕೊಳ್ಳಿರಿ. ಶಾಂತಿ ಒಪ್ಪಂದ ಮಾಡಿಕೊಳ್ಳಿರಿ" ಶಹರು ಇದಕ್ಕೆ ತೃಪ್ತರಾದರು.

ರಾಜ್ಯದಲ್ಲಿಯ ಮುಸ್ಲಿಮರ ದಾಳಿಯಿಂದ ತಪ್ಪಿಸಿಕೊಂಡು ಹಿಂದುಗಳಲ್ಲಿ ಕೆಲವರು ಗೋವೆ ಪ್ರದೇಶವನ್ನು ಹೊಕ್ಕರು. ಆಗ ಪೋರ್ಚುಗೀಜರು ಸಹ ಮುಸ್ಲಿಮರ ಕಾಯಕವನ್ನೇ ಹೂಡಿದರು. ಹಿಂದು ಪ್ರಜೆಗಳನ್ನು ಒತ್ತಾಯದಿಂದ ಕ್ರಿಸ್ತರನ್ನಾಗಿ ಮಾಡತೊಡಗಿದರು. ಒಪ್ಪದವರ ರುಂಡವನ್ನು ಹಾರಿಸಿದರು. ನರಕಯಾತನೆಯಿಂದ ಕೊಂದರು. ಹಿಂದು ಧಾರ್ಮಿಕ ಗ್ರಂಥಗಳನ್ನು ಸುಟ್ಟರು. ತಮ್ಮ ಕೈಗೆ ಸಿಕ್ಕ ದೇವಾಲಯಗಳನ್ನು ಕೆಡವಿದರು. ಅತ್ಯಾಚಾರ ಅನಾಚಾರಗಳನು ಅವರೂ ಸಹ ಮಾಡಿದರು. ವಿಜಯನಗರದ ರಾಜ್ಯವು ಹಾಳಾದ್ದರಿಂದ ಪೋರ್ಚುಗೀಜರ ವ್ಯಾಪಾರವು ಹಾಳಾಗಿ ಹೋಗಿ ನಷ್ಟಕ್ಕೆ ಗುರಿಯಾದರು.

---

## ೧೨. ಮುಂದೇನಾಯಿತು !

ಇ. ಸ. ೧೫೭೧ರಲ್ಲಿ ಗೋವಳಕೊಂಡದ ಕುತುಬಶಹನ ಸೇನಾಪತಿಯು ಈ ವರೆಗೂ ಹಿಂದುಗಳ ವಶದಲ್ಲಿಯೇ ಇದ್ದ ರಾಜಮಹೇಂದ್ರಿಯನ್ನು ಮುತ್ತಿ ಕೈವಶಮಾಡಿಕೊಂಡನು. ಕೆಲವು ತಿಂಗಳುಗಳ ನಂತರ ವಿಜಾಪುರದ ಅಲೀ ಆದಿಲಶಹನುವಿಜಯನಗರವನ್ನು ಮತ್ತೆ ಲೂಟಿಮಾಡಲು ಹೊರಟನು. ಆದರೆ ಅಹಮ್ಮದನಗರದ ಸುಲ್ತಾನನು ಅದೇ ವೇಳೆಗೆ ವಿಜಾಪುರವನ್ನು ಮುತ್ತಿದ್ದರಿಂದಆದಿಲಶಹನು ಹಿಂತಿರಗಬೇಕಾಯಿತು. ಗೋವೆಗೆ ಲಗ್ಗೆ ಇಟ್ಟನು. ಅದರಿಂದ ಪ್ರಯೋಜವಾಗಲಿಲ್ಲ. ಆಮೇಲೆ ಆದಿಲಶಹನು ಆದವಾನಿಯನ್ನು ಮುತ್ತಿದನು. ಆದವಾನಿಯು ವಿಜಯನಗರದವರ ಪ್ರದೇಶವು. ಅದು ನಾಶವಾದ ಬಳಿಕ ಆದವಾನಿಯ ನಾಯಕನು ಸ್ವಾತಂತ್ರ್ಯವನ್ನು ಸಾರಿದ್ದನು. ಆದವಾನಿಯು ಈ ಮುತ್ತಿಗೆಯಲ್ಲಿ ವಿಜಾಪುರದವರ ವಶವಾಯಿತು. ನಾಯಿಝಾಮಶಹನಿಗೂ ಆದಿಲಶಹನಿಗೂ ಒಪ್ಪಂದವಾಯಿತು. ಬಿಜಾಪುರದವರು ಕೃಷ್ಣಾ ನದಿಯ ದಕ್ಷಿಣ ಪ್ರದೇಶದ ಮೇಲೆ ದಾಳಿ ಕೈಕೊಂಡರೆ ತಾನು ಏರಿಬರುವದಿಲ್ಲವೆಂದೂ ತಾನು ಉತ್ತರದಲ್ಲಿ ಅಂದರೆ ಬಿಹಾರದ ಮೇಲೆ ದಾಳಿ ಮಾಡಿದರೆ ಬಿಜಾಪುರವು ಸ್ವಸ್ಥವಾಗಿರಬೇಕೆಂಬುದೇ ಒಪ್ಪಂದದ ಕರಾರಾಗಿದ್ದಿತು.

ಆದ್ದರಿಂದ ಅಲೀ ಆದಿಲಶಹನು ೧೫೭೩ರಲ್ಲಿ ಧಾರವಾಡ ಮತ್ತು ಬಂಕಾಪೂರ ಕೋಟೆಗಳನ್ನು ಮುತ್ತಿದನು. ಧಾರವಾಡವು ಕೈವಶವಾಯಿತು. ಬಂಕಾಪುರದ ಎಲ್ಲಪ್ಪ ನಾಯಕನು ವಿಜಯನಗರದ ತರುವಾಯ ಸ್ವತಂತ್ರನಾಗಿ ಬಲಾಢ್ಯನಾಗಿದ್ದನು. ಆದರೆ ೮ಲ ತಿಂಗಳು ಮುತ್ತಿಗೆಯಿಂದ ಆವನು ಹಣ್ಣಾದನು. ಮುಸಲ್ಮಾನರ ತೋಫುಗಳು ಬಂಕಾಪೂರ 'ಕೋಟೆಯನ್ನು ಹಾಳುಗೆಡವಿದವು ಬಂಕಾಪುರದ ಮಧ್ಯದಲ್ಲಿಯ ಸರ್ವಾಂಗ ಸುಂದರವಾದ ಸರ್ವಾಂಗ ಪರಿಪೂರ್ಣವಾದ ದೇವಾಲಯವನ್ನು ನಾಶಮಾಡಿ ಆ ಸ್ಥಳದಲ್ಲಿ ಒಂದು ಮಸೂದಿಯನ್ನು ಕಟ್ಟಿಸಲು ಅಡಿಗಲ್ಲನ್ನಿಟ್ಟು ಬಂಕಾಪುರವನ್ನು ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಂಡು ಬಿಜಾಪುರಕ್ಕೆ ಹೊರಟು ಹೋದನು.

ಆಮೇಲೆ ಆದಿಲಶಹನು ಅನೇಕ ವಿಜಯಗಳನ್ನು ಪಡೆದನು. ಕೊಂಕಣಪಟ್ಟಿಯು ಅವನ ಸ್ವಾಧೀನವಾಯಿತು. ಮುಂದೆ ಮೂರು ವರುಷಗಳ ತರುವಾಯ ಬೆಳ್ಳಮಗೊಂಡವನ್ನು ಇದೇ ರೀತಿ ಮುತ್ತಿದನು. ಇನ್ನು ತನ್ನ ಮೇಲೆಯೂ ಈ ದಂಡಯಾತ್ರೆಯು ತಪ್ಪಿದ್ದಲ್ಲವೆಂದು ಅಂಜಿ ತಿರುಮಲರಾಯನು ಪೆನುಗೊಂಡದಿಂದ ಚಂದ್ರಗಿರಿಗೆ ಓಡಿಹೋದನು. ಆದರೆ ಗೋವಳಕೊಂಡದ ಶಹನು ಹಿಂದುಗಳ ಸಹಾಯಕ್ಕೆ ಧಾವಿಸಿದ್ದರಿಂದ ವಿಜಾಪುರದವರ ವಿಜಯಯಾತ್ರೆಯು ಇಲ್ಲಿಗೇ ಕೊನೆಗೊಂಡಿತು. ಇ. ಸ. ೧೫೭೯ರಲ್ಲಿ ಗೋವಳಕೊಂಡದ ಶಹನು ಬಿಜಾಪುರದವರೊಡನೆ ಮಾಡಿಕೊಂಡ ಒಪ್ಪಂದವನ್ನು ಮುರಿದು ಕೃಷ್ಣಾನದೀ ದಕ್ಷಿಣಕ್ಕೆ ಬಂದು ಪೆನಗೊಂಡಾ, ಕೊಂಡವೀಡು, ಕರ್ಚರ್ಲಕೋಟಾ ಮತ್ತು ಕಮ್ಮಂ ಕೋಟೆಗಳನ್ನು ವಶಪಡಿಸಿಕೊಂಡನು.

ಇ. ಸ. ೧೫೮೦ರಲ್ಲಿ ಬಿಜಾಪುರದಲ್ಲಿ ಆದಿಲಶಹನ ಕೊಲೆಯಾಯಿತು. ಅದು ಎಪ್ರಿಲ ೧೧ನೇ ತಾರೀಖಿನ ಸೋಮವಾರವಾಗಿತ್ತು. ಅದೇ ವರುಷ ಗೋವಳಕೊಂಡದ ಇಬ್ರಾಹಿಮ ಕುತುಬಶಹನು ಸತ್ತನು. ಇವನ ಮೂರನೆಯ ಮಗನಾದ ಮಹಮ್ಮದ ಖಿಲ್ಜಿ ಎಂಬವನು ಪಟ್ಟವೇರಿದನು. ೧೫೮೯ರಲ್ಲಿ ಇವನು ಭಾವನಗರವೆಂಬ ಶಹರವನ್ನು ಕಟ್ಟಿಸಿದನು. ಅದೇ ಈಗ ಹೈದರಾಬಾದವೆಂಬ ಹೆಸರು ಹೊತ್ತಿದೆ. ಇವನು ಮಹಾ ಪರಾಕ್ರಮಶಾಲಿಯಾಗಿದ್ದನು. ಇವನು ದಂಡಯಾತ್ರೆಯನ್ನು ಕೈಕೊಂಡು ಕರ್ನೂಲ, ನಂದ್ಯಾಲ, ಡೋಲೆಗುಂಡೀ ಕೋಟೆಗಳನ್ನು ಗೆದ್ದನಲ್ಲದೇ ಪೂರ್ವಕ್ಕೆ ಮತ್ತೆ ಸಾಗಿ ನೆಲ್ಲೂರ ವರೆಗಿನ ಪ್ರದೇಶವನ್ನು ತನ್ನ ಆಧೀನಕ್ಕೆ ತೆಗೆದುಕೊಂಡನು.

ವಿಜಯನಗರದ ತಿರುಮಲರಾಯನು ೧೫೭೫ರಲ್ಲಿ ಸತ್ತನು. ಇವನ ಎರಡನೆಯ ಮಗನಾದ ಎರಡನೆಯ ರಂಗರಾಯನು ಪಟ್ಟವೇರಿದನು. ೧೫೮೬ರಲ್ಲಿ ಇವನ ತರುವಾಯ ಇವನ ತಮ್ಮನಾದ ಮೊದಲನೆಯ ವೆಂಕಟರಾಯನು ಗಾದಿಗೆ ಬಂದನು. ಇವನು ೨೮ ವರುಷ ರಾಜ್ಯವಾಳಿ ಮುದುಕನಾಗ ೧೬೧೪ರಲ್ಲಿ ತೀರಿದನು. ಇವನ ಕಾಲದಲ್ಲಿ ದಕ್ಷಿಣದಲ್ಲೆಲ್ಲ ಅರಾಜ

ಕತೆ ಹೊಡೆದಾಟ, ಕಾದಾಟ, ಕೊಲೆಸುಲಿಗೆ ಗಂಡಾಂತರ ಕೊಳ್ಳೆಗಳೇಮೊದಲಾದವುಗಳು ವಿಪರೀತವಾಗಿದ್ದವು. ಹಿಂದೂ ರಾಜನ ಸ್ವಾಧೀನದಲ್ಲಿದ್ದ ಮೈಸೂರನ್ನು ಇ. ಸ. ೧೫೫೩ರಲ್ಲಿ ಬಿಜಾಪುರದ ಇಬ್ರಾಹಿಮ ಆದಿಲಶಹನೇ ಮುತ್ತಿದನು. ಮೂರು ತಿಂಗಳ ವರೆಗಿನ ಅವ್ಯಾಹತವಾದ ಹೋರಾಟದಲ್ಲಿ ಮೈಸೂರು ಮುಸ್ಲಿಮರ ವಶವಾಯಿತು. ಇದೇ ವೇಳೆಗೆ ಬೆಳಗಾವಿ ಕೋಟೆಯಲ್ಲಿ ಬಂದಿಯಾಗಿದ್ದ ಆದಿಲಶಹನ ತಮ್ಮನು ಬಂಡೆಬ್ಬಿಸಿದನು. ಆ ಭಾಗಕ್ಕೆಲ್ಲ ತಾನೇ ಸ್ವತಂತ್ರ ಸುಲ್ತಾನನೆಂದು ಸಾರಿದನು. ಅಲ್ಲಿಗೆ ಬಾದಶಹನು ಧಾವಿಸಿ ಬೆಳಗಾವಿಯನ್ನು ಮುತ್ತಿದರೂ ಪ್ರಯೋಜನವಾಗಲಿಲ್ಲ. ಕೆಲವು ಕಾಲದ ವರೆಗೆ ಆ ಪ್ರದೇಶವೆಲ್ಲವೂ ಆದಿಲಶಹನ ತಮ್ಮನಾದ ಇಸ್ಮಾಯಿಲನ ವಶದಲ್ಲಿಯೇ ಇದ್ದಿತು. ಕೊನೆಗೆ ಆದಿಲಶಹನು ಬೆಳಗಾಂವಿಯನ್ನು ಮುತ್ತಿ ಇಸ್ಮಾಯಿಲನನ್ನು ಸಂಹರಿಸಿದನು. ಈ ವೇಳೆಗೆ ಹಿಂದುಗಳು ಆದವಾನಿಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿ ವಿಫಲರಾದರು. ಬಿಜಾಪುರ ಅಹಮ್ಮದನಗರದವರಲ್ಲಿ ಯುದ್ಧ ಸಾರಲಾಯಿತು.

೧೭ನೆಯ ಶತಮಾನದ ಕೊನೆಕೊನೆಗಂತೂ ಹಿಂದೂ ರಾಜರೆಲ್ಲರೂ ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ಬಿಟ್ಟರು. ಧನಕನಕಗಳು ಹೋದವು. ರಾಜ್ಯವಂತೂ ಎಷ್ಟೂ ಇದಲಿಲ್ಲ. ಕೇವಲ ಅವರಲ್ಲಿ ಬಿರುದುಗಳು ಮಾತ್ರ ಉಳಿದಿದ್ದವು. ಬಿದನೂರ ಒಡೆಯರು ೧೬೫೦ರ ವರೆಗೆ ರಾಜ್ಯವಾಳಿದರು. ವಿಜಯನಗರದಿಂದ ನಿಯಮಿಸಲ್ಪಟ್ಟ ನಾಯಕನು ೧೬೧೦ರ ವರೆಗೆ ಮೈಸೂರ ಪ್ರದೇಶವನ್ನಾಳಿದರು. ಅವನ ತರುವಾಯದವರು ಸ್ವತಂತ್ರವಾಗಿ ಮೈಸೂರ ರಾಜರೆಂದು ಮೆರೆದರು. ೧೬೦೨ ಮಧುರಾ ಮತ್ತು ತಂಜಾವೂರ ನಾಯಕರು ಸ್ವತಂತ್ರರಾಗಿ ಆಳತೊಡಗಿದರು.

೧೭ನೇ ಶತಮಾನದ ಕೊನೆಗೆ ದಿಲ್ಲಿ ಮೊಗಲರ ಪ್ರಚಂಡ ಸೇನಾಸಾಗರವು ದಕ್ಷಿಣಕ್ಕೆ ಬಂದು ಐದೂ ಮುಸಲ್ಮಾನರನ್ನು ಮಣ್ಣುಮುಕ್ಕಿಸಿ ಎಲ್ಲ ರಾಜ್ಯವನ್ನೂ ತನ್ನ ಸ್ವಾಧೀನಕ್ಕೆ ಪಡಿಸಿಕೊಂಡಿತು. ಇಡೀ ದಕ್ಷಿಣ ಹಿಂದುಸ್ಥಾನವು ಆಗ ಮೊಗಲರ ಸ್ವಾಧೀನವಾಯಿತೆಂದರೂ ಅಡ್ಡಿಯಿಲ್ಲ. ಇದೇ

ಮಹಾರಾಷ್ಟ್ರರು ಮೇಲೆದ್ದರು ೧೬೭೪ರಲ್ಲಿ ಶಿವಾಜಿಯು ಕೊಂಕಣಪಟ್ಟಿಯನ್ನು ಗೆದ್ದುಕೊಂಡನು. ಮುಂದೆ ನಾಲ್ಕು ವರುಷಗಳ ತರುವಾಯ ವಿಜಯನಗರದ ಅವಶೇಷಗಳೆಂದೂ ಸ್ಮಾರಕಗಳೆಂದೂ ಉಳಿದಿದ್ದ ಕರ್ನೂಲು, ಗಿಂಜಿ, ವೆಲ್ಲೂರ ಮೊದಲಾದವುಗಳನ್ನೆಲ್ಲವನ್ನೂ ಶಿವಾಜಿಯು ನುಂಗಿ ನೀರು ಕುಡಿದನು. ಇದಕ್ಕಿಂತಲೂ ಪೂರ್ವದಲ್ಲಿ ವೆಂಕೋಜಿಯು ಶಿವಾಜಿಯ ತಮ್ಮನು ೧೬೭೪ರಲ್ಲಿ ವಿಜಯನಗರದಲ್ಲಿ ಶೇಷವಾಗಿದ್ದ ತಂಜಾವೂರನ್ನು ಆಕ್ರಮಿಸಿ ಅಲ್ಲಿ ಆಳತೊಡಗಿದನು. ಅಲ್ಲಿ ಇವನ ವಂಶಜರು ಒಂದುನೂರು ವರುಷ ರಾಜ್ಯವಾಳಿದರು. ಇದೊಂದನ್ನುಬಿಟ್ಟರೆ ಮಹಾರಾಷ್ಟ್ರೀಯನು ದಕ್ಷಿಣದಲ್ಲಿ ಅಧಿಪತ್ಯವನ್ನು ಎಲ್ಲಿಯೂ ನಡೆಸಲಿಲ್ಲ.

ಇ. ಸ. ೧೭೪೯ರ ವರೆಗೆ ಮೈಸೂರ ಪ್ರದೇಶವನ್ನು ಹಿಂದೂ ರಾಜರೇ ಆಳುತ್ತಿದ್ದರು. ಹೈದರಲಿಯು ಬಲಾಢ್ಯನಾಗಿ ಮೈಸೂರ ಸಿಂಹಾಸನವನ್ನು ಆಕ್ರಮಿಸಿದನು. ಅವನ ತರುವಾಯ ಅವನ ಮಗನಾದ ಟೀಪೂಸುಲ್ತಾನನು ಪಟ್ಟವೇರಿದನು. ಇವರೀರ್ವರು ಕೂಡಿ ೪೦ ವರುಷ ಮಾತ್ರ ಮೈಸೂರನ್ನು ಆಳಿದರು. ೧೭೯೯ರಲ್ಲಿ ಶ್ರೀರಂಗ ಪಟ್ಟಣದಲ್ಲಿ ಟೀಪುವಿನ ಕೊಲೆಯಾಯಿತು. ಬ್ರಿಟಿಷರು ಇಡೀ ರಾಜ್ಯವನ್ನು ತಮ್ಮ ಸ್ವಾಧೀನದಲ್ಲಿ ತೆಗೆದುಕೊಂಡು ಮೊದಲಿನ ಹಿಂದೂ ರಾಜನ ಪೀಳಿಗೆಯವನ್ನೇ ಮತ್ತೆ ಸಿಂಹಾಸನದಲ್ಲಿರಿಸಿದರು. ಚಂದ್ರಗಿರಿಯನ್ನಾಳುತ್ತಿದ್ದ ೬ನೇ ದೇವರಾಯನು ಇ. ಸ. ೧೬೩೯ ಮಾರ್ಚ ತಿಂಗಳಲ್ಲಿ ಮದ್ರಾಸದ ಸನಿಯದಲ್ಲಿಯ ಪ್ರದೇಶವನ್ನು ಇಂಗ್ಲೀಷರಿಗೆ ವ್ಯಾಪಾರ ರಕ್ಷಣೆಗಾಗಿ ಕೋಟೆಯನ್ನು ಕಟ್ಟಿಸಿಕೊಳ್ಳಲು ಫ್ರಾನ್ಸಿಸ್ ಡೇ ಎಂಬುವವನಿಗೆ ಕೊಟ್ಟನು. ಈ ರೀತಿ ಮೊಟ್ಟಮೊದಲಿನ ಇಂಗ್ಲೀಷ ಕಾರಖಾನೆಯು ಮದ್ರಾಸದಲ್ಲಿ ೧೬೪೦ರಲ್ಲಿ ಸ್ಥಾಪಿಸಲ್ಪಟ್ಟಿತು. ಕೋಟೆ ಕಟ್ಟಲಾಯಿತು. ಅದಕ್ಕೆ ಫೋರ್ಟ ಸೇಂಟ ಜಾರ್ಜ ಎಂದು ಹೆಸರಿಟ್ಟರು.

———

## ೧೩. ಎಚ್ಚಮ ನಾಯಕ

೧ನೇ ವೆಂಕಟರಾಯನು ರಾಜನಾಗಿ ೨೮ ವರುಷ ರಾಜ್ಯವನ್ನಾಳಿದರೂ ಸಹ ಅವನಿಗೆ ಮಕ್ಕಳಾಗಲಿಲ್ಲ. ಅವನು ಜಗ್ಗರಾಯನೆಂಬ ಓರ್ವ ಶೂರ ಸರದಾರನ ಮಗಳಾದ ಬಾಯಮ್ಮ ಎಂಬುವಳನ್ನು ಲಗ್ನವಾಗಿದ್ದನು. ಅವಳೇ ಪಟ್ಟದರಾಣಿ. ಮಕ್ಕಳಾಗಲಿಲ್ಲವೆಂದು ರಾಜರಾಣಿಯರು ಬಹುವಾಗಿ ನೊಂದು ಸಕಲ ದೇವರಿಗೂ ಹರಕೆ ಹೊತ್ತರು. ಬ್ರಾಹ್ಮಣರನ್ನು ಪೂಜಿಸಿದರು. ಮಂತ್ರ ತಂತ್ರ ಮಾಟ ಮದ್ದು ಎಲ್ಲವೂ ಮಾಡಿ ಮುಗಿಸಿದರು. ಮಹಾರಾಣಿ ಯಾವದೇ ದಾರಿಯಾಗಲೊಲ್ಲದೇಕೆ ತನಗೊಬ್ಬ ಮಗಬೇಕೆಂದು ಹಂಬಲಿಸಿ ಅಳುತ್ತಿದ್ದಳು. ಸನ್ಮಾರ್ಗ ದುರ್ಮಾರ್ಗಗಳನ್ನು ಚಲಿಸಿದಳು. ಮಕ್ಕಳಾಗ ಲಿಲ್ಲ. ಒಂದಾನೊಂದು ದಿನ ಓರ್ವ ಬ್ರಾಹ್ಮಣ ಹೆಣ್ಣುಮಗಳು ಬಾಯಮ್ಮ ನನ್ನು ಕಂಡಳು. "ಮಹಾರಾಣಿ ನೀವು ಚಿಂತಿಸಬೇಡಿರಿ. ಈಗ ನಾನು ಒಂದು ತಿಂಗಳು ಗರ್ಭಿಣಿ ಇದ್ದೇನೆ. (ಇದು ನಿಜವಾಗಿದ್ದರೆ) ನನ್ನ ಉದರಲ್ಲಿ ಜನಿಸಿದ ಮಗುವನ್ನೂ ನಿಮಗೆ ತಕ್ಷಣ ಕೊಟ್ಟುಬಿಡುವೆನು. ಅದನ್ನು ನಿಮ್ಮ ಮಗನೆಂದು ಸಾಕಿರಿ. ಈಗ ನೀವು ಒಂದು ತಿಂಗಳ ಗರ್ಭಧರಿಸಿರುವಿರೆಂದು ಸಾರಿಬಿಡಿರಿ. ಗರ್ಭಬೆಳೆದಂತೆ ತೋರುವ ಸೋಗು ತಾಳಿರಿ" ಎಂದು ಉಪ ದೇಶಿಸಿದಳು. ಇದನ್ನು ಕೇಳಿ ರಾಣಿಗೆ ಪರಮ ಸಂತೋಷವಾಯಿತು. ಹಾಗೇ ಆಗಲೆಂದು ಒಪ್ಪಿ ಬ್ರಾಹ್ಮಣ ಯುವತಿಗೆ ಹೇರಳವಾಗಿ ದಕ್ಷಿಣೆಕೊಟ್ಟು ಕಳಿಸಿದಳು.

ಇತ್ತ ಅರಮನೆಯಲ್ಲೆಲ್ಲ ವಾರ್ತೆಯಾಯಿತು. ಬಾಯಮ್ಮ ಮಹಾರಾ ಣಿಯು ಗರ್ಭಿಣಿಯರಿದ್ದಾರೆಂದು. ತಿಂಗಳುಗಳು ಜಾರತೊಡಗಿದವು. ಬ್ರಾಹ್ಮಣ ಯುವತಿಯ ಮನೆಯಿಂದ ಅರಮನೆಗೆ ಬರುವ ದಾರಿಯನ್ನು ಅತ್ಯಂತ ಗೌಪ್ಯವಾಗಿ ಕಾದಿರಿಸಲಾಯಿತು. ನವಮಾಸ ತುಂಬಿ ಬ್ರಾಹ್ಮಣ ಯುವತಿಯು ಗಂಡುಮಗುವನ್ನು ಹೆತ್ತಳು. ಅದನ್ನು ಇದ್ದಕ್ಕಿದ್ದಂತೆ ಅರಮನೆಗೆ ಒಯ್ದು ಮಹಾರಾಣಿಯ ಮಗ್ಗುಲಲ್ಲಿಡಲಾಯಿತು. ರಾಜನಿಗೆ ಪುತ್ರಸಂತಾನವಾದ ಶುಭವಾರ್ತೆಯು ರಾಜ್ಯದಲ್ಲಿ ಹಬ್ಬಿತು. ರಾಜಪುತ್ರ

ಜನನದ ಮಾನಮರ್ಯಾದೆಗಳು ಸಮಾರಂಭಗಳು ಸಮಸ್ತ ಕಡೆಗೆಲ್ಲಜರುಗಿದವು. ಮಗು ರಾಜಕುಮಾರನಾಗಿ ಬೆಳೆಯತೊಡಗಿದನು.

ಆದರೆ ರಾಜನಿಗೆ ಮಾತ್ರ ಇದರ ಸಂಶಯವು ಬಂದಿತ್ತು. ಈ ಬಾಲಕನು ತನ್ನ ಮಗನಲ್ಲವೆಂದೂ ಎಲ್ಲಿಂದಲೋ ಇದನ್ನು ಎತ್ತಿ ತಂದು ತನ್ನ ಮಗನೆಂದು ಸಾರಲು ರಾಣಿಯು ಮಾಡಿದ ಕುತಂತ್ರವೆಂದೂ ಅದನ್ನು ಮನಃಪೂರ್ವಕವಾಗಿ ನಂಬಿದ್ದನು. ಆದರೆ ಅವನು ಮಹಾರಾಣಿಯನ್ನು ಅತ್ಯಂತವಾಗಿ ಪ್ರೀತಿಸುತ್ತಿದ್ದನಾದ್ದರಿಂದ ಅವಳ ಮನಸ್ಸನ್ನು ನೋಯಿಸಬಾರದೆಂದು ಸುಮ್ಮನಿದ್ದನು. ಬಾಲಕನನ್ನು ತನ್ನ ಮಗನೆಂದೂ ನಡೆಯಿಸಿಕೊಳ್ಳುತ್ತಿದ್ದರೂ ಅಂತರಂಗದಿಂದ ಇವನನ್ನು ದೂರದಲ್ಲಿಯೇ ಇರಿಸಿದ್ದನು. ಇಷ್ಟೇ ಅಲ್ಲ, ಅವನನ್ನು ಚಂದ್ರಗಿರಿಯ ಅರಮನೆಗಳಲ್ಲಿ ಒಂದರಲ್ಲಿ ಇಟ್ಟು ಬಿಟ್ಟಿದ್ದನು. ರಾಜನ ಅಪ್ಪಣೆಯಿಲ್ಲದೆ ಅರಮನೆಯನ್ನು ಬಿಟ್ಟು ಹೊರಗೆ ಬಿಡಕೂಡದೆಂದು ಕಾವಲುಗಾರರಿಗೆ ಅಪ್ಪಣೆ ಕೊಡಿಸಿದ್ದನು. ಮಹಾರಾಣಿಯ ಜೊತೆಗೆ ಬೇಕಾದಲ್ಲಿಗೆ ಹೋಗಲು ಅವನಿಗೆ ಪರವಾನಿಗೆ ಇತ್ತು. ಇವನಿಗೆ ಚಿಕ್ಕರಾಯನೆಂದು ನಾಮಕರಣ ಮಾಡಿದ್ದರು. ಚಿಕ್ಕರಾಯನು ೧೪ ವರುಷದವನಾದ ಕೂಡಲೇ ೧ನೇ ವೆಂಕಟರಾಯನು ತನ್ನ ತಂಗಿಯ (ಅವಳ ಪತಿ ಓಬರಾಯ)ನ ಮಗಳನ್ನು ತಂದು ಲಗ್ನ ಮಾಡಿದನು. ವಿವಾಹ ಸಮಾರಂಭವು ರಾಜಕುಮಾರನಿಗುಚಿತವಾದ ರೀತಿಯಲ್ಲಿ ಅತ್ಯಂತ ವೈಭವದಿಂದ ಜರುಗಿಸಿದನು.

೧ನೇ ವೆಂಕಟರಾಯನು ಮರಣ ಶಯ್ಯೆಯಲ್ಲಿ ಮಲಗಿದ್ದನು. ಇನ್ನೂ ಸಾಯುವದು ಮೂರು ದಿವಸಗಳು ಉಳಿದಿದ್ದವು ಆಗ ತನ್ನ ಅಣ್ಣನ ಮಗನನ್ನು ಕರೆಸಿದನು. ರಾಜ್ಯದ ಸಕಲ ಅಮಾತ್ಯರನ್ನೂ ಸೇನಾಪತಿ ಸರದಾರರನ್ನೂ ಕರೆಸಿದನು. ಎಲ್ಲರೂ ಹಾಸಿಗೆಯ ಸುತ್ತಲೂ ನೆರೆದರು. ಆಗ ರಾಯನು ತನ್ನ ಅಣ್ಣನ ಮಗನ ಕಡೆಗೆ ಬಲಗೈಮಾಡಿ ಬೆರಳಲ್ಲಿ ಧರಿಸಿದ್ದ ರಾಜಮುದ್ರಿಕೆಯ ಉಂಗುರವನ್ನು ತೆಗೆದುಕೊಳ್ಳಲು ಸನ್ನೆ ಮಾಡಿದನು. ತನ್ನ ತರುವಾಯ ಇವನೇ ರಾಜನಾಗಬೇಕೆಂದು ಸೂಚಿಸಿದನು. ಬಾಲಕನು

ಕಣ್ಣುತುಂಬಾ ನೀರನ್ನು ತಂದನು. ಕರಜೋಡಿಸಿ, "ಕಾಕಾ ನನಗಿದು ಬೇಡ. ನನಗೆ ಪಟ್ಟದ ಆಶೆಯಿಲ್ಲ. ಇದರ ಮಾಲಿಕನು ಬೇರೆ ಇದ್ದಾನೆ. ಅವನಿಗೆ ಕೊಡು" ಎಂದು ರಾಜನ ಪಾದಗಳ ಮೇಲೆ ಮಸ್ತಕವನ್ನಿಟ್ಟು ದೊಡ್ಡ ಧ್ವನಿಯಲ್ಲಿ ಅಳಹತ್ತಿದನು. ಅತ್ಯಂತ ನಿತ್ರಾಣನಾಗಿದ್ದ ರಾಜನಿಗೆ ಮಾತಾಡಲು ಶಕ್ತಿಯೂ ಇಲ್ಲದೇ ಬಾಲಕನವೃತ್ತಿನೋಡಿ ಮತ್ತಿಷ್ಟು ಸಂಕಟ ಪಡುತ್ತಾ ಸರದಾರರಿಗೆ ಅವನನ್ನು ಮೇಲಕ್ಕೆತ್ತಲು ಹೇಳಿದನು. ಸರದಾರರು ರಾಜಕುಮಾರನನ್ನು ಮೇಲಕ್ಕೆ ಎಬ್ಬಿಸಿ ರಾಜನ ಪಕ್ಕದಲ್ಲಿ ಕುಳ್ಳಿರಿಸಿದರು. ಆಗ ಮತ್ತೆ ರಾಜನ ಬಾಲಕನೆಡೆಗೆ ಕೈಮಾಡಿದನು. "ಕಾಕಾ ಇದು ನನಗೆ ಬೇಡ, ರಾಜನಾಗುವದು ಬೆಂಕಿಯಲ್ಲಿ ಹಾರಿಕೊಂಡಂತೆ ಈ ಊಗುರವು ಎಷ್ಟು ಜನರನ್ನು ಆಹುತಿ ತೆಗೆದುಕೊಂಡಿದೆಯೆಂಬುದು ನಿನಗೆ ಗೊತ್ತಿದೆ. ನಾನೊಲ್ಲೆನು" ಎಂದು ಎರಡೂ ಕೈಗಳಿಂದ ತನ್ನ ತಲೆಯನ್ನು ಹಿಡಿದುಕೊಂಡು ಅಳುತ್ತ ಕುಳಿತನು.

ರಾಜನಿಗೆ ಮಾತಾಡಲು ಶಕ್ತಿಯಿರಲಿಲ್ಲ. ದುಃಖದಿಂದ ಅವನ ಕಂಠವು ಬಿಗಿದು ಬಂದಿತ್ತು. ತನ್ನ ಬೆರಳಲ್ಲಿಯ ಉಂಗುರವನ್ನು ತೆಗೆದು ಕರದಲ್ಲಿ ಹಿಡಿದು ಮತ್ತೆ ರಾಜಕುಮಾರನ ಮುಖಕ್ಕೆ ಹಿಡಿದನು. ಸರದಾರರೂ ಸೇನಾಪತಿಗಳೂ ಉಂಗುರ ತೆಗೆದುಕೊಳ್ಳಲು ಹೇಳಿದನು. ಬಾಲಕನು ಸ್ವೀಕರಿಸಿದನು. ಇವನ ಹೆಸರೂ ಚಿಕ್ಕರಾಯ.ನೆಂದೇ ಇದ್ದಿತು. ಆ ಮೇಲೆ ರಾಜನು ರಾಜ ಮುಕುಟ, ರಾಜಪೋಷಾಕು, ರತ್ನ, ವಜ್ರ ವೈಢೂರ್ಯ ಮುತ್ತುಗಳ ರಾಜಭೂಷಣಗಳನ್ನೆಲ್ಲವನ್ನೂ ತಳಿಸಿದರು. ಅವುಗಳನ್ನೆಲ್ಲವನ್ನೂ ಧರಿಸಲು ಚಿಕ್ಕರಾಯನಿಗೆ ಹೇಳಿದನು. ಅವು ೨ಲಕ್ಷ ವರಹಗಳ ಬೆಲೆಯುಳ್ಳವಾಗಿದ್ದವು. ೬ ಲಕ್ಷ ವರಹ ಬೆಲೆಯುಳ್ಳ ವಜ್ರವನ್ನೂ ರಾಜನು ತನ್ನ ಕಿವಿಯಲ್ಲಿ ಇಟ್ಟಿದ್ದನು. ಅದನ್ನು ತೆಗೆದು ಬಾಲಕನಿಗೆ ಇಡಿಸಿದನು. ೨ ಲಕ್ಷ ವರಾಹ ಬೆಲೆಯ ಕರ್ಣಕುಂಡಲಗಳನ್ನು ಅವನಿಗೆ ಕೊಟ್ಟನು. ಇವಲ್ಲದೇ ಮುತ್ತಿನ ಸರಗಳನ್ನು ತನ್ನ ಕೊರಳೊಳಗಿಂದ ತೆಗೆದು ಅಣ್ಣನ ಮಗನನ್ನು ಸಿಂಗರಿಸಿದನು. ನೆರೆದ ಸರದಾರ ಸೇನಾಪತಿಗಳೆಲ್ಲರೂ ಚಿಕ್ಕದೇವರಾಯನೇ ಮುಂದಿನ ರಾಜನೆಂದು ಒಪ್ಪಿ ಜಯ ಜಯಕಾರ ಮಾಡಿ ಘೋಷಿಸಿದರು.

ಮರಣ ಶಯ್ಯೆಯಲ್ಲಿಯ ರಾಜನು ಸಂತೋಷದಿಂದ ಆನಂದ ಬಾಷ್ಪಗಳನ್ನು ಸುರಿಸಿದನು. ಇದರಿಂದ ಬಹಳ ಮಂದಿಗೆ ಸಂತೋಷವಾದರೆ ಕೆಲವರಿಗೆ ಅಸಂತೋಷವೂ ಆಯಿತು.

ಮೂರು ದಿವಸಗಳ ತರುವಾಯ ರಾಜನು ಸತ್ತನು. ಆಗ ಅವನಿಗೆ ಅರವತ್ತೇಳು ವರ್ಷ ವಯಸ್ಸಾಗಿದ್ದಿತು. ಇವನ ಅಣ್ಣನ ಮಗನಾದ ಚಿಕ್ಕ ದೇವರಾಯನು ಸಿಂಹಾಸನವನ್ನೇರಿದನು. ರಾಜ್ಯದ ಸಕಲ ಪ್ರಜೆಗಳೂ ಸರದಾರರೂ ಅಮಾತ್ಯರೂ ಅತ್ಯಂತ ಆದರದಿಂದಲೂ ಭಕ್ತಿಯಿಂದಲೂ ಇವನನ್ನು ಸ್ವಾಗತಿಸಿದರು. ಆದರೆ ಮೂರು ಮಾತ್ರ ವಿರೋಧಿಗಳಾದರು. ೧ನೇ ವೆಂಕಟರಾಯನ ಮಾವ ಅರ್ಥಾತ್ ಮಹಾರಾಣಿ ಬಾಯಮ್ಮನ ತಂದೆ ಜಗ್ಗ ರಾಯನು ಮೊದಲಿಗನು. ತಿಮ್ಮನಾಯಕ ಮತ್ತು ಬುಕ್ಕರಾಯನ ಇಬ್ಬರು ಒಟ್ಟು ಮೂವರು ವಿರೋಧಿಗಳಾದರು. ಜಗ್ಗರಾಯನು ೨೦ಸಾವಿರ ಸೈನಿಕರನ್ನು ಇಟ್ಟುಕೊಂಡಿದ್ದನಲ್ಲದೇ ಇವನ ಜಾಹಗೀರಿಯಿಂದ ಪ್ರತಿವರುಷ ೬೦ ಲಕ್ಷ ವರಾಹದ ಉತ್ಪನ್ನವು ಬರುತ್ತಿತ್ತು. ತಿಮ್ಮನಾಯಕನಿಗೆ ೪೦ಲಕ್ಷ ವರಾಹ ಉತ್ಪನ್ನವಿತ್ತು. ಮತ್ತು ಅವನಲ್ಲಿ ೧೨ ಸಾವಿರ ಸೈನ್ಯ ಮತ್ತು ಮುಕ್ಕರಾಯನಲ್ಲಿ ೬ ಸಾವಿರ ಸೈನಿಕರಿದ್ದರು. ಅವನಿಗೆ ೨೦ ಲಕ್ಷ ವರಹ ಉತ್ಪನ್ನವನ್ನು ತರುವಷ್ಟೇ ಜಾಹಗೀರನ್ನು ಇಟ್ಟುಕೊಂಡಿದ್ದನು.

ಈ ಮೂವರು ಹೊಸ ರಾಜನಿಗೆ ಎಂದೂ ಮರ್ಯಾದೆ ತೋರತಕ್ಕದ್ದಲ್ಲವೆಂದೂ ಜಗ್ಗರಾಯನ ಮೊಮ್ಮಗ ಬಾಯಮ್ಮನ ಮಗನೆಂದು ಪ್ರಖ್ಯಾತನಾದ ಚಿಕ್ಕನನ್ನೇ ಪಟ್ಟಕ್ಕೆ ತರಬೇಕೆಂದು ಪ್ರತಿಜ್ಞೆ ಮಾಡಿದರು. ಇದಕ್ಕಾಗಿ ಒಳಸಂಚು ನಡೆಯಿತು. ಇದಕ್ಕೆ ಜಗ್ಗರಾಯನೇ ಅಗ್ರಗಣ್ಯನು. ಈ ಸಂಚಿಗೆ ಅನುಕೂಲ ಪ್ರಸಂಗವೂ ಒದಗಿತು. ಮುಖ್ಯ ಸೇನಾಪತಿಯ ಸ್ವಾಧೀನದಲ್ಲಿ ೩ ಕೋಟೆಗಳಿದ್ದವು. ಅವುಗಳೆಲ್ಲವನ್ನು ತನ್ನ ಇಬ್ಬರು ಮಕ್ಕಳಿಗಾಗಿ ಬಿಟ್ಟುಕೊಡಬೇಕೆಂದು ರಾಜನು ಕೇಳಿದನು. ರಾಜನು ಮುಖ್ಯಮಂತ್ರಿಯು ಗತಿಸಿದ ರಾಜನಲ್ಲಿದ್ದ ೧೦ ಲಕ್ಷ ವರಹಗಳನ್ನು ಕದ್ದಿರುನೆಂದು ಆರೋಪ ಹೊರಿಸಿ ಅದನ್ನು ವಾಪಸು ಕೇಳಿದನು. ಮೂರನೆಯವನು ನರಪತಿರಾಯ

ಬಾಯಮ್ಮನ ತಮ್ಮನು ಜಗ್ಗರಾಯನ ಮಗನು. ಇವನು ಬಾಯಮ್ಮನಿಂದ ತನ್ನ ಕಕ್ಕನ ಖಜಾನೆಯಲ್ಲಿಯ ಅಮೂಲ್ಯ ರತ್ನಗಳನ್ನು ತೆಗೆದುಕೊಂಡದ್ದು ಅವುಗಳನ್ನು ವಾಪಸು ಕೊಡಲು ಕೇಳಿದನು. ಇನ್ನೆರಡು ದಿವಸಗಳಲ್ಲಿ ಕೊಡುವೆನೆಂದು ಮೂವರೂ ಹೇಳಿಕೊಟ್ಟು ದರಬಾರದಿಂದ ಹೊರ ಹೊಟರು. ಅವರು ನೇರವಾಗಿ ಜಗ್ಗರಾಯನಲ್ಲಿಗೆ ಹೋಗಿ ಇವನನ್ನು ಪಟ್ಟದಿಂದ ತಳ್ಳಬೇಕೆಂದೂ ಬಾಯಮ್ಮನ ಮಗನನ್ನು ರಾಜನನ್ನಾಗಿ ಮಾಡಬೇಕೆಂದೂ ಸಂಚು ಹೂಡಿದರು.

ಮರುದಿನವೇ ಜಗ್ಗರಾಯನು ಚಿಕ್ಕದೇವರಾಯನಿಗೆ ಸಂದೇಶವೊಂದನ್ನು ಕಳಿಸಿದನು. ತನಗೂ ತಿಮ್ಮನಾಯಕನಿಗೂ ಮುಕ್ಕರಾಯನಿಗೂ ಈವರೆಗೆ ಬಿರುಸು ರೀತಿಯಿಂದ ನಡೆದುಕೊಂಡಿದ್ದಕ್ಕಾಗಿ ಪಶ್ಚಾತ್ತಾಪವಾಗಿದೆಯೆಂದೂ ರಾಜನಿಷ್ಠೆಯನ್ನು ವ್ಯಕ್ತಪಡಿಸಲು ತಾವು ಮೂವರೂ ಬರುವರೆಂದೂ ಆದಕ್ಕೆ ಅಪ್ಪಣೆಯನ್ನೂ ದಯಪಾಲಿಸಬೇಕೆಂದೂ ಬೇಡಿಕೊಂಡನು ಪಾಪ ಚಿಕ್ಕದೇವರಾಯನು ಇದನ್ನು ನಂಬಿದನು. "ಆಗಲಿ ಆಗಬಹುದು" ಎಂದು ಹೇಳಿಕಳಿಸಿದನು. ಚಂದ್ರಗಿರಿಗೆ ಎರಡು ಕೋಟೆಯ ಗೋಡೆಗಳಿದ್ದವು. ಜಗ್ಗರಾಯನು ತನ್ನ ಇಡೀ ಸೈನ್ಯದೊಂದಿಗೆ ಐದು ಸಾವಿರ ಶೂರ ಸರದಾರರನ್ನೂ ಜೊತೆಗೆ ಕರೆದುಕೊಂಡು ಉಳಿದ ಸೈನ್ಯಕ್ಕೆಲ್ಲ ಕೋಟೆಯ ಸುತ್ತಲೂ ಮುತ್ತಿಕೊಂಡಿರಲು ಹೇಳಿದನು. ಉಳಿದಿಬ್ಬರು ಸಹ ಅದರಂತೆಯೇ ಮಾಡಿ ತಮ್ಮೊಡನೆ ಎರಡೆರಡು ಸಾವಿರ ಶೂರ ಸೈನಿಕರನ್ನು ಅವರು ಕರೆದುಕೊಂಡು ಕೋಟೆಯನ್ನು ಪ್ರವೇಶಿಸಿದರು. ಜಗ್ಗರಾಯನು ಮೊದಲನೆಯ ಕೋಟೆಯ ಬಾಗಿಲಿಗೆ ಒಂದು ಸಾವಿರ ಸೈನಿಕರನ್ನೂ ಎರಡನೆಯ ಕೋಟೆಯ ಬಾಗಿಲಿಗೆ ಒಂದು ಸಾವಿರ ಸೈನಿಕರನ್ನು ಬಿಟ್ಟು ಉಳಿದವರೊಡನೆ ಒಳಗೆ ಪ್ರವೇಶಿಸಿದನು. ದಳವಾಯಿ ತಿಮ್ಮನಾಯಕನು ಮತ್ತೊಂದು ದಿಕ್ಕಿಗಿರುವ ಎರಡು ಬಾಗಿಲುಗಳಿಗೆ ತನ್ನ ಸೈನಿಕರನ್ನು ನಿಲ್ಲಿಸಿಕೊಂಡು ಸಜ್ಜಾದನು. ಇಷ್ಟರಲ್ಲಿಯೇ ಗದ್ದಲವಾಗಿ ರಾಜದ್ರೋಹವೆಸಗಿತೆಂಬ ಬೊಬ್ಬಾಟವೂ ಚೀರಾಟವೂ ಪ್ರಾರಂಭವಾಯಿತು. ರಾಜನು

ಅರಮನೆಯ ಬಾಗಿಲುಗಳನ್ನು ಮುಚ್ಚಲು ಹೇಳಿದನು. ಆದರೆ ಅಷ್ಟರಲ್ಲಿ ಮುಕ್ಕರಾಯನು ತನ್ನ ಸರದಾರರೊಂದಿಗೆ ಅರಮನೆಯನ್ನು ಪ್ರವೇಶಿಸಿದನು.

"ಯಾವ ಆತಂಕವಿಲ್ಲದೇ ಶರಣಾಗತರಾದರೆ ನಾವು ನಿಮ್ಮ ಜೀವಕ್ಕೆ ಧಕ್ಕೆ ತರುವದಿಲ್ಲ. ನನ್ನನ್ನು ಅನುಸರಿಸಿರಿ ಮತ್ತು ಜಗ್ಗರಾಯನ ಮೊಮ್ಮಗನಿಗೆ ಪಟ್ಟವನ್ನು ಬಿಟ್ಟುಬಿಡಿರಿ" ಎಂದು ಗದ್ದರಿಸಿದನು. ರಾಜನು ಶರಣು ಬಂದನು.

ರಾಜನು ತನ್ನ ಹೆಂಡತಿ ಮಕ್ಕಳು ಸಹಿತವಾಗಿ ಅರಮನೆಯಿಂದ ಹೊರಬಿದ್ದು ಸಾಗಿದನು. ಎಡಬಲದಲ್ಲಿಯ ಶತ್ರು ಸೈನಿಕರ ನಡುವೆ ತಲೆ ತಗ್ಗಿಸಿಕೊಂಡು ಅತ್ಯಂತ ದುಃಖದಿಂದ ಸಾಗಿದ ರಾಜಮನೆತನದವರಿಗೆ ಒಬ್ಬನೂ ಕೂಡ ನಮಸ್ಕರಿಸಲಿಲ್ಲ. ಮರ್ಯಾದೆ ತೋರಲಿಲ್ಲ ಜಗ್ಗರಾಯನು ಅತ್ಯಂತ ಹರ್ಷಭರಿತನಾಗಿ ತನ್ನ ಮೊಮ್ಮಗನಾದ ಚಿಕ್ಕರಾಯನನ್ನು ಪಟ್ಟದ ಮೇಲೆ ಕುಳ್ಳರಿಸಿ ಕಿರೀಟವನ್ನು ಅವನ ತಲೆಯ ಮೇಲಿಟ್ಟನು. ಎಲ್ಲ ರಾಜ ಪೋಷಾಕುಗಳನ್ನು ತೊಡಿಸಿದನು. ರಾಜ್ಯದ ಸಕಲ ಸರದಾರರನ್ನೂ ಕರೆಸಿ ನೂತನ ರಾಜನಿಗೆ ನಿಷ್ಠೆಯನ್ನು ಅವರಿಂದ ಕೊಡಿಸಿದನು. ಜಗ್ಗರಾಯನು ಅರಮನೆಯನ್ನು ತಾನೇ ಆಕ್ರಮಿಸಿದನು. ಅಖಂಡವಾದ ಐಶ್ವರ್ಯವನ್ನು ಸ್ವಾಧೀನಪಡಿಸಿಕೊಂಡನು. ನೂತನ ಚಿಕ್ಕರಾಯನಿಗೆ ಬಲವಾದ ಕಾವಲಿಡಿಸಿ ಅವನನ್ನು ಹೆಸರಿಗೆ ಪಟ್ಟದಲ್ಲಿಟ್ಟನು.

ಎಲ್ಲ ಸರದಾರರೂ, ಸ್ವಾಮಿನಿಷ್ಠೆ ತೋರಿದರು. ಆದರೆ ಎಚ್ಚಮ ನಾಯಕನು ಮಾತ್ರ ಜಗ್ಗರಾಯನ ವಿನಂತಿಯನ್ನು ತಿರಸ್ಕರಿಸಿದನು. "ಈ ರಾಜದ್ರೋಹವನ್ನು ನಾನೆಂದೂ ಸಹಿಸಲಾರೆನು. ನಿನ್ನ ಮೊಮ್ಮಗನು ರಾಜಪಿಂಡವಲ್ಲ. ನಿಜವಾದ ರಾಜನನ್ನು ಪುನಃ ಪಟ್ಟಕ್ಕೆ ತರುವವರೆಗೆ ನಾನು ವಿಶ್ರಮಿಸುವದಿಲ್ಲ" ಎಂದು ಜಗ್ಗರಾಯನಿಗೆ ಹೇಳಿಕಳಿಸಿದನು. ಇವನಲ್ಲಿ ಎಂಟು ಶೂರ ಸೈನಿಕರಿದ್ದರು. ಎಚ್ಚಮನಾಯಕನು ಇನ್ನೂ ಸೈನ್ಯಸಂಗ್ರಹ ಮಾಡುವದರಲ್ಲಿ ತೊಡಗಲು ತನ್ನ ಕೋಟೆಗೆ ತೆರಳಿದನು. ಎಚ್ಚಮನಾಯ

ಕನು ದರ್ಬಾರಕ್ಕೆ ಬಂದರೆ ಅವನಿಗೆ ಅಖಂಡ ಮಾನಮರ್ಯಾದೆ ಮಾಡುವ ದಾಗಿಯೂ ಅನೇಕ ಜಹಾಗೀರುಗಳನ್ನು ಕೊಡುವದಾಗಿಯೂ ಅಮೂಲ್ಯ ರತ್ನ ವಜ್ರ, ವೈಢೂರ್ಯ, ಮುತ್ತಿನ ರಾಶಿಗಳನ್ನು ಕಾಣಿಕೆಯಾಗಿ ನೀಡುವ ದಾಗಿಯೂ ಇನ್ನೂ ಏನೇನೋ ಸ್ವಾಂತನ ಮಾತುಗಳನ್ನು ಜಗ್ಗರಾಯನು ಹೇಳಿಕಳಿಸಿದನು. ಅವೆಲ್ಲವುಗಳನ್ನು ನಾಯಕನು ತಿರಸ್ಕರಿಸಿದನು. "ನಿನ್ನ ಮೊಮ್ಮಗನನ್ನು ಯಾರು ಹಡೆದರು, ಅವನ ಜಾತಿ ಯಾವುದು ಅವನು ರಾಜನು ಹೇಗಾದನು ? ಇದನ್ನು ತಿಳಿಸಲು ನೀನು ರಣಕ್ಕೆ ನಿನ್ನ ಸಕಲ ಸರದಾರರನ್ನೂ ಸೈನಿಕರನ್ನೂ ಕೂಡಿಕೊಂಡು ಬಾ. ನನ್ನನ್ನು ಎದುರಿಸಿ ನಿರ್ನಾಮಮಾಡು. ಇಲ್ಲದಿದ್ದರೆ ನಾನು ನಿಮ್ಮನ್ನೆಲ್ಲ ಕೊಂದು ನಿಜವಾದ ಪಿಂಡವನ್ನು ಸಿಂಹಾಸನದಲ್ಲಿರಿಸಿ ಆಮೇಲೆ ಕಾಣಿಕೆ ಸ್ವೀಕರಿಸುತ್ತೇನೆ" ಎಂದು ಹೇಳಿಕಳಿಸಿದನು. ಜಗ್ಗರಾಯನು ತನಗೆ ಎದುರಾಗಿ ನಿಂತ ಉಳಿದೆಲ್ಲ ಸರ ದಾರರನ್ನೂ ಬಗಲಲ್ಲಿ ಹಾಕಿಕೊಂಡನು.

ರಾಜ್ಯದಲ್ಲಿ ತನಗೆದುರಾದವರ ಮನಸ್ಸನ್ನು ಒಲಿಸಲು ಜಗ್ಗರಾಯನು ಧನ-ಕನಕ, ಜಹಾಗೀರು, ಬಿರುದಾವಳಿ ಬೆದರಿಕೆ ಮೊದಲಾದ ಉಪಾಯ ಗಳಿಂದ ಒಬ್ಬೊಬ್ಬ ಸರದಾರರನ್ನೇ ತನ್ನೆಡೆಗೊಲಿಸುವ ಕಾರ್ಯದಲ್ಲಿ ನಿರತ ನಾದಾಗ ಇತ್ತ ಎಚ್ಚಮನಾಯಕನು ಬಂದಿಯಲ್ಲಿದ್ದ ರಾಜಕುಟುಂಬವನ್ನು ಪಾರುಮಾಡಲು ಅನೇಕ ಯುಕ್ತಿ-ಪ್ರಯುಕ್ತಿಗಳನ್ನು ಮಾಡಿದನು. ಆದರೆ ಯಾವದೂ ಯಶಸ್ವಿಯಾಗಲಿಲ್ಲ. ಕೊನೆಗೆ ರಾಜಮನೆತನದ ಒಂದು ಜೀವಿ ಯಾದರೂ ತನಗೆ ದೊರೆತರೆ ಸಾಕೆಂದು ಹವಣಿಸಿದನು.

ಯಚ್ಚಮನಾಯಕನು ಇದಕ್ಕಾಗಿ ಒಂದು ಯುಕ್ತಿಯನ್ನು ಹುಡುಕಿ ತೆಗೆದನು. ಕಾರಾಗಾರದಲ್ಲಿಟ್ಟ ರಾಜದಂಪತಿಗಳ ಅರಿವೆಗಳನ್ನು ಒಗೆದು ಕೊಡಲು ಒಬ್ಬ ಅಗಸನನ್ನು ಜಗ್ಗರಾಯನು ನಿಯಮಿಸಿದ್ದನು. ಆ ಅಗಸನು ವಾರಕ್ಕೊಮ್ಮೆ ತುರಂಗಕ್ಕೆ ಹೋಗಿ ಒಗೆದು ಗಂಜಿಮಾಡಿದ ಅರಿವೆಗಳನ್ನು ರಾಜನ ಮನೆತನದರಿಗೆ ಕೊಡುವದೂ ಅವರಿಂದ ಹೊಲಸಾದ ಅರಿವೆಗಳ ದೊಡ್ಡ ಗಂಟನ್ನು ಮಾಡಿಕೊಂಡು ಒಗೆಯಲು ಒಯ್ಯುವದು ವಾಡಿಕೆಯಾಗಿ

ಗಿತ್ತು. ಈ ಅಗಸನನ್ನು ಯಾರೂ ತಡವುತ್ತಿದ್ದಿಲ್ಲ. ಆದ್ದರಿಂದ ಇವನನ್ನು ಯಜ್ಜಮನಾಯಕನು ಗೌಪ್ಯವಾಗಿ ಕರೆಸಿಕೊಂಡನು. ರಾಜಕುಮಾರರಲ್ಲಿ ಒಬ್ಬನನ್ನು ತಂದುಕೊಟ್ಟರೆ ಅವನಿಗೆ ಅಗಣಿತ ಧನಸಂಪತ್ತು ಕೊಡುವದಲ್ಲದೇ ಮುಂದೆ ರಾಜ್ಯಸಂಪಾದನೆ ಮಾಡಿದಬಳಿಕ ಬಹುದೊಡ್ಡ ಜಾಹಗೀರನ್ನು ಹಾಕಿಕೊಡುವದಾಗಿ ವಚನವಿತ್ತನು. ಅಗಸನು ರಾಜಕುಮಾರನನ್ನು ತರಲು ಒಪ್ಪಿದನು. ತಾಡವಾಲಿ ಎಲೆಯ ಮೇಲೆ ಯಜ್ಜಮನಾಯಕನು ರಾಜನಿಗೆ ಪತ್ರ ಬರೆದು ಕೊಟ್ಟನು. "ಒಬ್ಬ ರಾಜಕುಮಾರನನ್ನು ನನ್ನಡೆಗೆ ಕಳಿಸಿರಿ. ಈ ಅಗಸನು ನನಗೆ ಮುಟ್ಟಿಸುವನು. ಅವನೊಬ್ಬನು ನನಗೆ ಸಿಕ್ಕರೆ ರಾಜ್ಯ ಪುನಃ ದೊರಕಿಸಲು ಅನುಕೂಲವಾಗುವದು'' ಎಂದು ಬರೆದಿದ್ದನು.

ಗೊತ್ತುಪಡಿಸಿದ ದಿವಸ ಅಗಸನು ಒಗೆದ ಅರಿವೆಯ ದೊಡ್ಡ ಮೂಟೆಯೊಂದಿಗೆ ಕಾರಾಗಾರಕ್ಕೆ ಹೋದನು. ಅರಿವೆಗಳ ಜೊತೆಗೆ ಪತ್ರವನ್ನೂ ಕೊಟ್ಟನು. ರಾಜನು ಮಕ್ಕಳಲ್ಲಿ ಒಬ್ಬನನ್ನು ಕರೆದೊಯ್ಯಲು ಸಂತೋಷದಿಂದ ಅಗಸನಿಗೆ ಹೇಳಿದನು. ಹಿರಿಯ ಮಗನು ೧೮ ವರುಷದವನಿದ್ದುದರಿಂದ ಅವನು ಬೇಡ. ಎರಡನೆಯವನು ೧೨ ವರುಷದವನನ್ನು ಒಯ್ಯಲು ಅಗಸನು ಒಪ್ಪಿ ಅವನನ್ನು ಹೊಲಸು ಅರಿವೆಗಳ ಮಧ್ಯ ಕುಳ್ಳಿರಿಸಿ ದೊಡ್ಡ ಗಂಟನ್ನು ಮಾಡಿ ಹೆಗಲಿಗೇರಿಸಿ "ಸರಿಯಿರಿ, ದಾರಿಬಿಡಿರಿ'' ಎನ್ನುತ್ತ ಕಾವಲುಗಾರರ ಮಧ್ಯದಲ್ಲಿ ಪಾರಾಗಿ ಬಂದನು. ಅಗಸನು ರಾಜಕುಮಾರನನ್ನು ಮೂರು ದಿವಸ ತನ್ನ ಮನೆಯಲ್ಲಿ ಗೌಪ್ಯವಾಗಿಟ್ಟುಕೊಂಡು ಆರೈಕೆ ಮಾಡಿದನು. ನಾಲ್ಕನೆಯ ದಿವಸ ರಾಜಧಾನಿಯಿಂದ ಒಂದು ಹರದಾರಿಯ ಮೇಲೆ ಬೀಡುಬಿಟ್ಟಿದ್ದ ಯಜ್ಜಮನಾಯಕನ ಠಾಣೆಗೆ ಕುಮಾರರನ್ನು ಒಯ್ದು ಮುಟ್ಟಿಸಿದನು. ನಾಯಕನಿಗೆ ಅತ್ಯಂತ ಸಂತೋಷವಾಯಿತು. ಅವನೂ ಅವನ ಸಕಲ ಸೈನಿಕರೂ ಜಯಜಯಕಾರ ಮಾಡಿ ರಾಜಮರ್ಯಾದೆಯಿಂದ ಬಾಲಕನನ್ನು ಸ್ವಾಗತಿಸಿದರು.

ಕಾರಾಗೃಹರೂಪದಲ್ಲಿದ್ದ ರಾಜನ ಅರಮನೆಯಿಂದ ರಾಜನ ೨ನೆಯ ಮಗನು ಪಾರಾದ ಸುದ್ದಿಯು ಕರ್ಣೋಪಕರ್ಣವಾಗಿ ಜಗ್ಗರಾಯನಿಗೆಗೊತ್ತಾ

ಯಿತು ಸಿಟ್ಟಿನಿಂದ ಉರಿದೆದ್ದುಬಿಟ್ಟನು. ಅರಮನೆಯನ್ನು ಚನ್ನಾಗಿ ಶೋಧಿಸಿದನು. ರಾಜಪಿಂಡವೊಂದು ಪಾರಾದದ್ದು ನಿಜವಾಗಿತ್ತು. ಜಗ್ಗರಾಯನು ಅತ್ಯಂತ ನೊಂದುಕೊಂಡು ನಾಲ್ಕು ದಿವಸ ಮನೆಹಿಡಿದುಬಿಟ್ಟನು. ಕೊನೆಗೆ ನಿರಾಶೆ ಕ್ರೋಧ ದ್ವೇಷಗಳಿಂದ ಬಿರಿಯುತ್ತ ಅರಮನೆಗೆ ಮೊದಲಿನ ಎರಡರಷ್ಟು ಕಾವಲು ಇರಿಸಿದನು. ರಾಜಕುಟುಂಬಕ್ಕೆ ಅನ್ನ ಸಾರು ಇವೆರಡರ ವಿನಃ ಏನನ್ನೂ ಆಹಾರ ಕೊಡಬಾರದೆಂದು ಆಜ್ಞೆ ವಿಧಿಸಿದನು.

ರಾಜಕುಮಾರನು ಯಚ್ಚಮನಾಯಕನ ಸ್ವಾಧೀನದಲ್ಲಿರುವನೆಂಬ ಸುದ್ದಿಯನ್ನು ಜಗ್ಗರಾಯನ ದರಬಾರದಲ್ಲಿಯ ಸರದಾರರಿಗೆ ಗೊತ್ತಾಯಿತು ಅವರಲ್ಲಿ ಮೂಲ ರಾಜಮನೆತನಕ್ಕೆ ನಿಷ್ಠರಿದ್ದ ನಾಲ್ಕು ಸರದಾರರು ತಮ್ಮ ಸೈನ್ಯಸಮೇತ ಯಚ್ಚಮನಾಯಕನನ್ನು ಎದುರಿಸಲು ಬಹಳ ಧೈರ್ಯ ಬಂದಿತು. ಈಗ ಯಚ್ಚಮನಾಯಕನ ಸೈನ್ಯ ಸಂಖ್ಯೆಯು ೧೨ ಸಾವಿರಕ್ಕೆ ಮೀರಿದ್ದಿತು.

ನಾಯಕನು ರಾಜನನ್ನು ಪಾರುಮಾಡುವ ಬಗೆಯನ್ನು ಹುಡುಕತೊಡಗಿದನು. ಯುದ್ಧ ಹೂಡಿದರೆ ಅತ್ತ ಜಗ್ಗನು ರಾಜಕುಟುಂಬವನ್ನು ಮೊದಲು ಸಂಹರಿಸಿ ಯುದ್ಧಕ್ಕೆ ಬರಬಹುದು. ಏನು ಮಾಡಬೇಕೆಂದು ಯೋಚಿಸುತ್ತಿರುವಾಗ ಇವನ ಸೈನ್ಯದಲ್ಲಿಯ ಇಪ್ಪತ್ತು ಸೈನಿಕರು ತಮಗೆ ಅಪ್ಪಣೆ ಕೊಟ್ಟರೆ ತಾವುರಾಜನನ್ನು ತರುವೆವೆಂದು ನುಡಿದರು. ನಾಯಕನು ಅವರನ್ನು ಸಂತೋಷದಿಂದ ಬೀಳ್ಕೊಟ್ಟನು. ಆ ಇಪ್ಪತ್ತು ಸೈನಿಕರು ನೇರವಾಗಿ ಚಂದ್ರಗಿರಿಗೆ ಬಂದರು. ದಳವಾಯಿಯನ್ನು ಕಂಡರು. ತಾವು ಜಗ್ಗರಾಯನ ಸೈನ್ಯದಲ್ಲಿರಲು ಬಯಸಿರುವದಾಗಿಯೂ ತಮ್ಮ ಸೇವೆಯನ್ನು ಸ್ವೀಕರಿಸಬೇಕೆಂದೂ ಬೇಡಿಕೊಂಡರು. ದಳವಾಯಿಯು ಅವರನ್ನು ನಿಯಮಿಸಿಕೊಂಡರು.

ರಾಜಕುಟುಂಬವು ಬಂದಿಯಾಗಿರುವ ಅರಮನೆಗೆ ಗೌಪ್ಯವಾಗಿ ನೆಲದಲ್ಲಿ ದಾರಿ ತೋಡುವದಾಗಿ ಯೋಚಿಸಿ ಅರಮನೆಯ ಸನಿಯದಲ್ಲಿಯ ಗೃಹ

ದಲ್ಲಿ ವಾಸಿಸಿದರು. ನೆಲದಾರಿಯನ್ನು ದಿನವೂ ತೋಡುತ್ತ ಭರದಿಂದ ಕೆಲಸ ಸಾಗಿಸಿದರು. ನೆಲದಾರಿಯು ಸಿದ್ಧವಾಯಿತು. ಅದರೊಳಗಿಂದ ಈ ಸೈನಿಕರು ಅರಮನೆಯ ಬಂದೀವಾಸವನ್ನು ಪ್ರವೇಶಿಸಿದರು. ರಾಜನು ಇವರನ್ನು ಕಂಡು ಆಶ್ಚರ್ಯಚಕಿತನಾದನು. ಅದರಲ್ಲಿಯೂ ಈ ಸೈನಿಕರು ನೆಲಮುಟ್ಟಿ ರಾಜನಿಗೆ ನಮಸ್ಕರಿಸಿದ್ದನ್ನು ಕಂಡು ವಿಸ್ಮಿತನಾದನು. ಯಚ್ಚಮನಾಯಕನಿಂದ ರಾಜನಿಗೆ ತಂದ ಪತ್ರವನ್ನು ಸೈನಿಕರು ಕೊಟ್ಟರು. "ಇವರು ನನ್ನ ಸೈನಿಕರು ಅವರ ಹೇಳಿಕೆಯಂತೆ ನಿರ್ಭಯದಿಂದ ನಡೆಯಿರಿ" ಎಂದು ಬರೆದಿದ್ದನು. ರಾಜನು ಸಂತೋಷಭರಿತನಾದನು. ನೆಲದಾರಿಯಿಂದ ಹೊರಟು ಬರಬೇಕೆಂದು ಸೈನಿಕರು ಸಂಜ್ಞೆಮಾಡಿ ತಾವು ಲಗುಬಗೆಯಿಂದ ಮುಂದೆ ನಡೆದರು. ರಾಜನು, ಪತ್ನಿ, ಇರ್ವರು ಗಂಡುಮಕ್ಕಳು, ಒಬ್ಬಳು ಹೆಣ್ಣುಮಗಳ ಅಪ್ಪಣೆ ಪಡೆದು ಹೊರಟು ಅರ್ಧದಾರಿ ಬಂದಿದ್ದರು.

ದೈವದ ದುರ್ವಿಪಾಕವು ವಿಚಿತ್ರವಾದುದು ಅರಮನೆಯ ಪಹರೆಮಾಡುತ್ತಿದ್ದ ಸೈನಿಕನ ತುಳಿತದಿಂದ ನೆಲದಾರಿಯ ಮೇಲಿನ ಭೂಮಿ ಕುಸಿಯಿತು. ಇಳಿದು ನೋಡಲಾಗಿ ಏನೋ ದಾರಿಯಿದ್ದಂತೆ ಕಂಡಿತು. ಭಯದಿಂದ ಚೀರಿಕೊಂಡರು ಅನೇಕ ಸೈನಿಕರು ಬಂದು ಒಳಹೊಕ್ಕರು. ಬಂದೀವಾಸದ ರಾಜನು ಅವರ ಕೈಗೆಸಿಕ್ಕುಬಿದ್ದನು. ಜಗ್ಗರಾಯನು ಬಂದನು. ಕೂಡಲೇ ಅವರನ್ನು ಬೇರೆ ಮನೆಗೆ ಸ್ಥಳಾಂತರಿಸಿದನು.

ಈ ಯುಕ್ತಿಯೂ ಫಲಿಸಲಿಲ್ಲವಾದ್ದರಿಂದ ಚಂದ್ರಗಿರಿಯಲ್ಲಿ ನೆಲಸಿದ್ದ ಐತೇ ಓಬಲೇಶ್ವರನೆಂಬ ದಳವಾಯಿಯನ್ನು ಯಚ್ಚಮನಾಯಕನು ಏಕಾಂತದಲ್ಲಿ ಕರೆಸಿದನು. ಅವನಿಗೆ ಅಖಂಡವಾದ ಮಾನ ಮರ್ಯಾದೆಯನ್ನೂ ಹೇರಳವಾದ ಹಣವನ್ನೂ ಕೊಟ್ಟನು. ರಾಜಧಾನಿಯಿಂದ ಹೇಗಾದರೂಮಾಡಿ ರಾಜ ಕುಟುಂಬವನ್ನು ತನಗೆ ತಪ್ಪಿಸಿದರೆ ದೊಡ್ಡ ಜಹಾಗೀರನ್ನು ಕೊಡುವದಾಗಿ ಹೇಳಿದನು. ಐತೇ ಓಬಲನು ಇದಕ್ಕೆ ಒಪ್ಪಿದನು. ರಾಜಕುಟುಂಬದವರನ್ನು ಅತ್ಯಂತ ಗೂಢವಾದ ಸ್ಥಳದಲ್ಲಿ ಜಗ್ಗನು ಇಟ್ಟಿರುವನಾದರೂ ತಾನು

ಈ ಕೆಲಸ ಮಾಡುವದಾಗಿ ವಚನವಿತ್ತು ಸಾಗಿದನು. ಒಂದಾನೊಂದು ದಿ
ಓರ್ವ ಸರದಾರನು ಜಗ್ಗರಾಯನಿಗೆ ಶರಣು ಬಂದದ್ದರಿಂದ ಅವನ ಸ
ನಾರ್ಥವಾಗಿ ರಾಯನು ತನ್ನ ಸಕಲ ಅನುಚರರೊಡನೆ ನಗರದಿಂದ ಹೊ
ಹೋಗಿದ್ದನು. ನಗರದಲ್ಲಿ ಆಗ ಕೇವಲ ೩ ನೂರು ಸೈನಿಕರು ಮಾತ್ರ
ಇದ್ದರು. ಇದೇ ಸಮಯವೆಂದರಿತು ಐತೇ ಓಬಲೇಶ್ವರನು ತನ್ನ ೫ ನೂ
ಶೂರ ಸೈನಿಕರೊಂದಿಗೆ ಕೋಟೆಯ ಪೂರ್ವ ಪಶ್ಚಿಮ ಬಾಗಿಲನ್ನು ವಶಪಡಿ
ಕೊಂಡನು. ಕೂಡಲೇ ಕೋಟೆಯನ್ನು ಮುತ್ತಬೇಕೆಂದು ಯಚ್ಚ
ನಾಯಕನಿಗೆ ಕುದುರೆ ಸವಾರನಿಂದ ಹೇಳಿಕಳಿಸಿದನು. ಆದರೆ ಜಗ್ಗರಾಯ
ನಿಗೆ ಎದೆಯೊಡಿಕೆಯಿದ್ದೇ ಇದ್ದಿತು. ಸಮಾರಂಭವನ್ನು ತೀರಿಸಿಕೊಂಡ
ವನೇ ಪರಿವಾರ ಸಹಿತ ಕೋಟೆಗೆ ಧಾವಿಸಿದನು. ಪರಿಸ್ಥಿತಿಯನ್ನರಿತನು
ಕೋಟೆಯ ಗುಪ್ತದ್ವಾರದಿಂದ ಒಳಹೊಕ್ಕನು. ಈ ಗುಪ್ತದ್ವಾರವು ಐತೇ
ಓಬಲೇಶ್ವರನಿಗೆ ಗೊತ್ತಿರಲಿಲ್ಲ. ಜಗ್ಗರಾಯನು ಓಬಲೇಶ್ವರನನ್ನೂ ಅವನ
ಸೈನಿಕರನ್ನೂ ಒಬ್ಬರನ್ನೂ ಬಿಡದೇ ಸಂಹರಿಸಿಬಿಟ್ಟನು.

ಇದರಿಂದ ಜಗ್ಗರಾಯನು ಕ್ರೋಧಾವಿಷ್ಟನಾಗಿ ಏನು ಮಾಡಬೇಕೆಂ
ಬುದೇ ತಿಳಿಯದಾಗಿ ಜಿಗಿದಾಡತೊಡಗಿದನು. ತನ್ನ ಮೊಮ್ಮಗನಿಗೆ ಗಾದಿಯು
ಸ್ಥಿರವಾಗಿ ಉಳಿಯಬೇಕಾದರೆ ಕಾರಾಗಾರದಲ್ಲಿಯ ರಾಜಕುಟುಂಬವನ್ನು
ಯಮಸದನಕ್ಕೆ ಕಳಿಸುವದೊಂದೇ ಉಪಾಯವೆಂದು ನಿಶ್ಚಯಿಸಿದನು.
ಕೂಡಲೇ ತನ್ನ ಅತ್ಯಂತ ವಿಶ್ವಾಸಿಕನಾದ ಸೇನಾಪತಿಗಳಲ್ಲಿ ಒಬ್ಬನಾದ
ಚಿನ್ನ ಓಬಲರಾಯನನ್ನು ಕರಸಿ ರಾಜಕುಟುಂಬವನ್ನು ಸಂಹರಿಸಿ ಬಂದು
ತನ್ನಿಂದ ಮರ್ಯಾದೆ ಕಾಣಿಕೆ ಮೊದಲಾದವುಗಳನ್ನು ಸ್ವೀಕರಿಸಲು ಹೇಳಿ
ದನು. ಈ ರಾಕ್ಷಸೀ ಮನೋವೃತ್ತಿಯ ಚಿನ್ನ ಓಬಲನು ಜಿಗಿದಾಡುತ್ತ
ರಾಜ ಬಂದಿವಾಸಕ್ಕೆ ಬಂದನು. ರಾಜನಿಗೆ ತಾನು ಬಂದಕಾರಣವನ್ನು ಹೇಳಿ
ದನು. "ಈ ಸಂಚು ವಗೈರೆ ಯಾವುದೂ ನನಗೆ ಗೊತ್ತಿಲ್ಲ. ನನಗೆ ರಾಜ್ಯವೇ
ಬೇಡ ನಮ್ಮನ್ನು ಬಿಟ್ಟುಬಿಡಿರಿ ನಾನು ಎಲ್ಲಿಯಾದರೂ ಹೋಗುತ್ತೇವೆ"
ಎಂದು ಪರಿಪರಿಯಾಗಿ ಹೇಳಿಕೊಂಡರು. ಎಲ್ಲವೂ ನಿರರ್ಥಕವಾಯಿತು.

ಓಬಲನು ಮೊದಲು ರಾಜನ ಚಿಕ್ಕ ಮಗಳ ಶಿರಸ್ಸನ್ನು ಹಾರಿಸಿದನು. ಆ ಮೇಲೆ ಕೊನೆಯ ಮಗ, ಮೊದಲನೆಯ ಮಗ, ಅವನ ಹೆಂಡತಿ ರಾಣಿ ಕೊನೆಗೆ ರಾಜನ ಚಂಡಾಡಿ ರಕ್ತರಂಜಿತನಾಗಿ ಜಗ್ಗರಾಯನೆದುರು ಬಂದು ನಿಂತನು.

ಭಯಂಕರವಾದ ಹತ್ಯಾಕಾಂಡವನ್ನೂ ಕ್ರೂರ ರಾಕ್ಷಸೀ ಕೃತ್ಯವನ್ನೂ ಕೇಳಿದ ದರಬಾರದಲ್ಲಿಯ ಅನೇಕ ಸರದಾರರು ಸೈನ್ಯಸಮೇತವಾಗಿ ಯಚ್ಚಮನಾಯಕನನ್ನು ಕೂಡಿಕೊಂಡರು. ರಾಜವಂಶವನ್ನೇ ಧ್ವಂಸ ಮಾಡಿದ ಈ ನೀಚನ ಉಪಟಳವನ್ನು ಮುಗಿಸಿಯೇ ಬಿಡಬೇಕೆಂದು ಯಚ್ಚಮನಾಯಕನು ಕ್ರೋಧಾವಿಷ್ಟನಾಗಿ ತನ್ನ ಅತಿ ಶ್ರೇಷ್ಠ ಸೈನ್ಯವನ್ನು ಸಜ್ಜುಗೊಳಿಸಿ ಜಗ್ಗರಾಯನಿಗೆ ಹೇಳಿಕಳಿಸಿದನು. "ಎಲೈ ನೀಚನೇ, ನೀನು ನಿನ್ನ ಕಾರಾಗಾರದಲ್ಲಿಯ ಎಲ್ಲ ರಾಜಮನೆತನದವರನ್ನು ಕೊಂದಿರುವಿ, ಒಂದೇ ಒಂದು ರಾಜಪಿಂಡವು ನನ್ನಲ್ಲಿದೆ ಬಾ, ನಿನ್ನ ಸಕಲ ಸೈನ್ಯದೊಂದಿಗೆ ನನ್ನಲ್ಲಿಗೆ ಬಾ, ನನ್ನನ್ನೂ ಈ ರಾಜಕುಮಾರನನ್ನು ಸಂಹರಿಸು ಆ ಮೇಲೆಯೇ ನಿನ್ನ ಮೊಮ್ಮಗನಿಗೆ ಗಾದಿಯು ಸ್ಥಿರವಾಗುವದು" ಎಂದು ತಿಳಿಸಿದನು. ಯಚ್ಚಮನಾಯಕನು ಹತ್ತು ಸಾವಿರ ಸೈನಿಕರೊಂದಿಗೆ ರಣರಂಗದಲ್ಲಿ ಸಜ್ಜಾಗಿ ನಿಂತನು. ಜಗ್ಗರಾಯನಲ್ಲಿ ೬೦ ಸಾವಿರ ಕಾಲಾಳುಗಳೂ ಅನೇಕ ಆನೆಗಳೂ ಕುದುರೆ ಸವಾರರೂ ಇದ್ದರು.

ಯುದ್ಧವನ್ನು ತಪ್ಪಿಸಬೇಕೆಂದು ಜಗ್ಗರಾಯ ಬಹಳವಾಗಿ ಹವಣಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಅವನಲ್ಲಿ ಅಸಂಖ್ಯಾತ ಸೈನ್ಯವಿದ್ದಿತು. ನಾಯಕನನ್ನು ಸಹಜವಾಗಿ ಗೆದ್ದು ಅವನನ್ನೂ ಆ ರಾಜಪುತ್ರನನ್ನೂ ಸೆರೆಹಿಡಿದರಾಯಿತೆಂದು ರಣರಂಗಕ್ಕೆ ಬಂದನು. ಯಚ್ಚಮನಾಯಕನು ರಾಜಪುತ್ರನನ್ನು ರಣರಂಗದಿಂದ ಒಂದು ಹರದಾರಿ ದೂರದಲ್ಲಿ ಹತ್ತು ಸಾವಿರ ಸೈನಿಕರಿಂದ ರಕ್ಷಿಸಲ್ಪಟ್ಟವನಾಗಿಟ್ಟು ಉಳಿದ ಸೈನ್ಯದೊಂದಿಗೆ ಜಗ್ಗರಾಯನ ಮೇಲೆ ಮೊದಲು ತಾನೇ ಏರಿ ಹೋಗಿಬಿಟ್ಟನು. ಭೀಕರ ಕದನವಾಯಿತು. ಜಗ್ಗರಾಯನು ಅವನ ಮೊಮ್ಮಗ ಮೊದಲಾದವರನ್ನು ಮುಖ್ಯ ಸೈನ್ಯದಿಂದ ಬೇರ್ಪಡಿಸಿ ರಾಯನು ಸೈನ್ಯಸಮೇತ ನುಗ್ಗಿಬಿಟ್ಟನು. ಜಗ್ಗ

ರಾಯ ನ ಸೈನ್ಯದಲ್ಲಿ ಅಸಂಖ್ಯಾತರು ಮಡಿದರು. ಜಗ್ಗರಾಯನು ಪರಿವಾರ ಸಹಿತ ಬಹಳ ದೂರ ಹಿಂದೆ ಸರಿದನು. ನಾಯಕನು ನೇರವಾಗಿ ಜಗ್ಗರಾಯನ ರಾಣಿಯನ್ನು ಕೈವಶಮಾಡಿಕೊಂಡನು. ಅಲ್ಲಿ ಹಳೆಯ ರಾಜನಾದ ಚಿಕ್ಕದೇವರಾಯನ ವಜ್ರವೈಢೂರ್ಯ ರಾಜಮುಕುಟ ದರಬಾರ ಪೋಷಾಕು ಮತ್ತು ಮೊದಲಾದ ಸಕಲ ಸಂಪತ್ತೂ ಇದ್ದವು ಅವುಗಳನ್ನೆಲ್ಲವನ್ನೂ ಈ ಚಿಕ್ಕಬಾಲಕ ರಾಜನಿಗೆ ಅರ್ಪಿಸಿ ಜಯಘೋಷ ಮಾಡಿದನು. ಈ ಯುದ್ಧದಿಂದ ಯಚ್ಚಮನಾಯಕನು ಹೇಳಲಸಾಧ್ಯವಾದಷ್ಟು ಧನಕನಕ ವಜ್ರ ವೈಢೂರ್ಯ ಸಂಪತ್ತನ್ನು ದೊರಕಿಸಿದನೆಂದು ಇತಿಹಾಸದಿಂದ ಗೊತ್ತಾಗುವದು.

ಈ ವಿಜಯವಾರ್ತೆ ಕೇಳಿ ಅನೇಕ ಸರದಾರರೂ ಜಹಗೀರದಾರರೂ ಯಚ್ಚಮನನ್ನು ಕೆಲವೇ ಕಾಲದಲ್ಲಿ ಕೂಡಿಕೊಂಡರು ಅವನ ಸೈನ್ಯವು ೫೦ ಸಾವಿರಕ್ಕೆ ಮೀರಿತು ಜಗ್ಗರಾಯನು ೧೫ಸಾವಿರ ಅನುಚರರೊಡನೇ ಅಡವೀ ಪಾಲಾದನು. ಆಗಾಗ ಸಣ್ಣಪುಟ್ಟ ಉಪಟಳವನ್ನು ಯಚ್ಚಮನಾಯಕನಿಗೆ ಕೊಡುತ್ತಲೇ ಎರಡು ವರುಷ ಕಾಲಕಳೆದನು. ಈ ಚಿಕ್ಕರಾಜನು ರಾಜಾಧಿರಾಜನೆಂದು ಎಲ್ಲರಿಂದಲೂ ಸನ್ಮಾನಿತನಾದನು. ಇವನೇ ೪ನೇ ರಂಗರಾಯನು ಇದೆಲ್ಲವೂ ೧೬೧೪ರಿಂದ ೧೬೧೬ರ ವರೆಗೆ ಜರುಗಿತು.

ಮಧುರಾದಲ್ಲಿ ಮುತ್ತು ವೀರಪ್ಪನಾಯಕನೆಂಬುವವನು ವಿಜಯನಗರದವರಿಗೆ ಮಾಂಡಲೀಕನಾಗಿದ್ದ ನಾಯಕ ವಂಶದವನು, ಈ ನಾಯಕರು ಅತ್ಯಂತ ಶಿರಿವಂತರೂ ಬಲಾಢ್ಯರೂ ಇದ್ದರು. ವಿಜಯನಗರಕ್ಕೆ ಪ್ರತಿವರುಷ ೬ ಲಕ್ಷ ವರಹಗಳನ್ನು ಕಪ್ಪಕಾಣಿಕೆಯೆಂದು ಅರ್ಪಿಸುತ್ತಿದ್ದರು. ಅಳಿಯ ರಾಮರಾಯನು ರಣದಲ್ಲಿ ಕೊಲ್ಲಲ್ಪಟ್ಟು ವಿಜಯನಗರವು ನಾಶವಾದ ಬಳಿಕ ಮಧುರೆಯ ನಾಯಕರು ಸ್ವತಂತ್ರರಾದರು. ಈಗ ಈ ಮನೆತನದ ಮುತ್ತು ವೀರಪ್ಪನಾಯಕನು ಜಗ್ಗರಾಯನ ಪಕ್ಷಗಟ್ಟಿದನು. ತ್ರಿಚನಾಪಳ್ಳಿಯ ಮೈದಾನದಲ್ಲಿ ಮುತ್ತುವೀರಪ್ಪನಾಯಕನು ಒಂದು ನೂರು ಕೋಟಿ ಸೈನ್ಯಸಮೇತವಾಗಿ ಬಂದು ನಿಂತು ೪ನೇ ದೇವರಾಯನನ್ನು ಅರ್ಥಾತ್ ಯಚ್ಚಮನಾಯಕನನ್ನು ಯುದ್ಧಕ್ಕೆ ಕರೆದನು. ಯಚ್ಚಮನಾಯಕನು ಒಟ್ಟು ಒಂದು

ಕೋಟಿ ಸೈನಿಕರೊಂದಿಗೆ ಎದುರಾಗಿ ಮಧುರೆಯ ನಾಯಕನ ಹುಟ್ಟನ್ನು ಸಂಪೂರ್ಣವಾಗಿ ಅಡಗಿಸಿಬಿಟ್ಟನು. ಆ ನಂತರ ಜಗ್ಗರಾಯನ ಸದ್ದು ಎಲ್ಲಿಯು ಕೇಳಿಬರಲಿಲ್ಲ.

ಇ. ಸ. ೧೬೧೬ರಿಂದ ೧೬೩೪ರ ವರೆಗಿನ ಸರಿಯಾದ ಇತಿಹಾಸವು ಸಿಕ್ಕಿಲ್ಲ. ೨ನೇ ಪೆದ್ದ ವೆಂಕಟರಾಯನು ಎಂದು ಸಿಂಹಾಸನವನ್ನೇರಿದ ಬಗ್ಗೆ ಸರಿಯಾಗಿ ಗೊತ್ತಾಗಿಲ್ಲ. ೧೬೩೬ರ ವರೆಗೆ ಇವನು ರಾಜ್ಯವಾಳಿದನು. ಇವನ ತರುವಾಯ ೬ನೇ ರಂಗರಾಯನು ಚಂದ್ರಗಿರಿ ಪಟ್ಟವನ್ನೇರಿ ೧೬೪೪ರ ವರೆಗೆ ಆಳಿದನು. ವಿಜಯನಗರ ಸಾಮ್ರಾಜ್ಯದ ರಾಜನೆಂದು ಕರೆಯಿಸಿಕೊಳ್ಳುತ್ತ ಚಂದ್ರಗಿರಿಯಲ್ಲಿ ಇ. ಸ. ೧೩೮೩ರ ವರೆಗೆ ಆಳಿದನೆಂದು ತಿಳಿಯುವದು. ವೆಂಕಟರಾಯನೆಂಬುವವನು ಕೊನೆಯವನು.

---

## ೧೪. ವಿವರಣೆ

ವಿಜಯನಗರವನ್ನು ಆಳಿದ ರಾಜರ ಹೆಸರು ಮತ್ತು ಅವರ ಕಾಲ—

### ಸಂಗಮ ವಂಶ

| | | | | |
|---|---|---|---|---|
| ೧ನೇ ಹರಿಹರರಾಯ | ಇ. ಸ. | ೧೩೩೬ | ರಿಂದ | ೧೩೪೩ |
| ೧ನೇ ಬುಕ್ಕರಾಯ | ” | ೧೩೪೩ | ” | ೧೩೭೯ |
| ೨ನೇ ಹರಿಹರರಾಯ | ” | ೧೩೭೯ | ” | ೧೩೯೯ |
| ೨ನೇ ಬುಕ್ಕರಾಯ | ” | ೧೩೯೯ | ” | ೧೪೦೬ |

| | | | | |
|---|---|---|---|---|
| ೧ನೇ ದೇವರಾಯ | ಇ. ಸ. | ೧೪೧೬ | ರಿಂದ | ೧೪೧೩ |
| ವೀರವಿಜಯರಾಯ | ” | ೧೪೧೩ | ” | ೧೪೧೯ |
| ೨ನೇ ದೇವರಾಯ | ” | ೧೪೧೯ | ” | ೧೪೪೯ |
| ಮಲ್ಲಿಕಾರ್ಜುನ | ” | ೧೩೪೯ | ” | ೧೪೬೫ |
| ರಾಜಶೇಖರ | ” | ೧೫೬೫ | ” | ೧೪೬೯ |
| ೧ನೇ ವಿರುಪಾಕ್ಷ | ” | ೧೪೬೯ | ” | ೧೪೭೧ |
| ಪ್ರೌಢ ದೇವರಾಯ | ” | ೧೪೭೧ | ” | ೧೪೭೭ |
| ೨ನೇ ರಾಜಶೇಖರ | ” | ೧೪೭೭ | ” | ೧೪೮೦ |
| ೨ನೇ ವಿರುಪಾಕ್ಷ | ” | ೧೪೮೦ | ” | ೧೪೮೪ |
| ೩ನೇ ರಾಜಶೇಖರ | ” | ೧೪೮೪ | ” | ೧೪೮೭ |

---

ಇಲ್ಲಿಂದ ಕೆಳಗಿನ ರಾಜರ ಆಳಿಕೆಯು ಬಗ್ಗೆ ನಿಶ್ಚಿತವಾದ ಕಾಲವು ಗೊತ್ತಾಗಿಲ್ಲ ಶಿಲಾಲೇಖನಗಳಿಂದ ಸರಾಸರಿಯಾಗಿ ಕಂಡುಹಿಡಿದಿದೆ.

## ಸಾಳುವ ವಂಶ

| | | | | |
|---|---|---|---|---|
| ನರಸಿಂಹ | ಇ. ಸ. | ೧೪೯೦ | ರಿಂದ | (?) |
| ವೀರನರಸಿಂಹ | ” | (?) | ” | ೧೫೦೯ |
| ಕೃಷ್ಣದೇವರಾಯ | ” | ೧೫೦೯ | ” | ೧೫೩೦ |
| ಅಚ್ಚುತರಾಯ | ” | ೧೫೩೦ | ” | ೧೫೪೨ |

ಸದಾಶಿವರಾಯ (ಇವನು ಇಡೀ ಆಯುಷ್ಯವನ್ನು ಬಂದೀ ವಾಸದಲ್ಲಿ ಕಳೆದರೂ ಹೆಸರಿಗೆ ರಾಜನಾಗಿದ್ದನು) ಇ. ಸ. ೧೫೪೨ ರಿಂದ ೧೫೬೭

## ಮೂರನೆಯ ಮನೆತನ

ರಾಮರಾಯ(ಸರ್ವಾಧಿಕಾರಿಯಾಗಿ ರಾಜನಂತೆ ಇದ್ದನು) ೧೫೪೨ರಿಂದ ೧೫೬೫
ತಿರುಮಲ ” ” ” ೧೫೬೫ ” ೧೫೬೭.

| | | | | |
|---|---|---|---|---|
| ತಿರುಮಲ (ಸಿಂಹಾಸನವನ್ನೇರಿ ರಾಜನಾಗಿ) | ಇ. ಸ. | ೧೫೬೭ | ರಿಂದ | ೧೫೭೩ |
| ೨ನೇ ರಂಗರಾಯ | ,, | ೧೫೭೩ | ,, | ೧೫೮೬ |
| ೧ನೇ ರಂಗರಾಯ | ,, | ೧೫೮೬ | ,, | ೧೬೧೪ |
| ೪ನೇ ರಂಗರಾಯ | ,, | ೧೬೧೪ | ,, | ೧೬೧೯ |
| ರಾಮರಾಯ | ,, | ೧೬೧೯ | ,, | ೧೬೨೨ |
| ರಂಗ ಮತ್ತು ವೆಂಕಟ | ,, | ೧೬೨೨ | ,, | ೧೬೨೩ |
| ರಾಮರಾಯ | ,, | ೧೬೨೩ | ,, | ೧೬೨೯ |
| ೧ನೇ ಪೆದ್ದ ವೆಂಕಟರಾಯ | ,, | ೧೬೨೯ | ,, | ೧೬೩೬ |

ಇವನ ತರುವಾಯ ಆಳಿದ ಅರಸರುಗಳ ಬಗ್ಗೆ ಶಿಲಾಲೇಖಗಳಲ್ಲಿ ಕಾಲವು ಹೇಳಲ್ಪಟ್ಟಿದೆ. ಆಯಾ ಕಾಲದಲ್ಲಿ ಆಯಾ ರಾಜರು ಆಳಿರಬಹುದೆಂದು ಬರೆದಿದ್ದೇವೆ. ಇದು ನಿಶ್ಚಿತವೆಂದು ಹೇಳಲಾರೆವು.

| | | | | |
|---|---|---|---|---|
| ರಂಗರಾಯ | ಇ. ಸ. | ೧೬೪೪ | ರಿಂದ | ೧೬೭೮ |
| ವೆಂಕಟ | ,, | ೧೬೭೮ | ,, | ೧೬೮೦ |
| ರಂಗರಾಯ | ,, | ೧೬೮೦ | ,, | ೧೬೯೨ |
| ವೆಂಕಟ | ,, | ೧೬೯೨ | ,, | ೧೭೦೬ |
| ರಂಗರಾಯ | ,, | ೧೭೦೬ | ,, | ೧೭೧೬ |
| ಮಹಾದೇವರಾಯ | ,, | ೧೭೧೬ | ,, | ೧೭೨೪ |
| ರಂಗರಾಯ | ,, | ೧೭೨೪ | ,, | ೧೭೨೯ |
| ವೆಂಕಟ | ,, | ೧೭೨೯ | ,, | ೧೭೩೨ |
| ರಾಮರಾಯ | ,, | ೧೭೩೨ | ,, | ೧೭೩೯ (?) |
| ವೆಂಕಟ | ,, | ೧೭೩೯ | ,, | ೧೭೪೪ |
| ಮತ್ತೊಬ್ಬ ವೆಂಕಟ | ,, | ೧೭೪೪ | ,, | ೧೭೯೩ |

ಇವರೆಲ್ಲರೂ ಹೆಸರಿಗೆ ಮಾತ್ರ ರಾಜರಾಗಿದ್ದರು. ಇವರಿಗೆ ರಾಜ್ಯವು ಇರಲಿಲ್ಲ, ಸೈನ್ಯವಿರಲಿಲ್ಲ, ಉತ್ಪನ್ನವಿರಲಿಲ್ಲ ಪ್ರಜೆಗಳಿರಲಿಲ್ಲ. ಈಗಿನ ಕಾಲದ ದೇಶಪಾಂಡೆ ದೇಸಾಯಿಗಳಿದ್ದಂತೆ ಶೋಭಿಸಿ ತಮ್ಮಷ್ಟಕ್ಕೆ ತಾವೇ ರಾಜರೆಂದು ಹೇಳಿಕೊಳ್ಳುತ್ತ ಮೆರೆದರು.

ಇನ್ನು ವಿಜಯನಗರದ ರಾಜರ ವಂಶಾವಳಿಯನ್ನು ಬರೆಯುವೆವು. ರಾಜ್ಯಸ್ಥಾಪನೆಯ ಮೂಲ ಪುರುಷನು ಸಂಗಮ ವಂಶದವನು. ಅವರ ವಂಶಾವಳಿಯು ಈ ರೀತಿ ಇದೆ:—

## ಸಂಗಮ ವಂಶ



# ತುಳುವ ವಂಶ

ತಿಮ್ಮರಾಯ (ದೇವಕೀರಾಣಿ)

ಈಶ್ವರರಾಯ (ಬುಕ್ಕಮ್ಮ ರಾಣಿ)

ನರಸಿಂಹ (ಮೂವರು ರಾಣಿಯರು)



# ಅರವೀಡು ವಂಶ




(ಮುಂದುವರಿಯುವುದು)



೩ನೇ ಚಿನ್ನ ವೆಂಕಟರಾಯ
ವೀರವೆಂಕಟ
ತಿರುಮಲ
೬ನೇ ರಂಗರಾಯನನ್ನು ಗೋಪಾಲನು ದತ್ತಕ ತೆಗೆದುಕೊಂಡನು.
ರಾಮರಾಯ
ಇವನಿಗೆ ರಂಗನೆಂದೂ ಕರೆಯುತ್ತಿದ್ದರು.
ರಂಗರಾಯ
ಇವನಿಗೆ ವೆಂಕಟನೆಂದೂ ಕರೆಯುತ್ತಿದ್ದರು.
ರಾಮ
ತಿರುಮಲ
ವೆಂಕಣ್ಣ
ಚಿನ್ನರಾಜ
ರಾಮ
ರಾಮ
ಗೋಪಾಲ
ಪೆದ್ದದಾಸ
ಚಿನ್ನದಾಸ
ವೀರವೆಂಕಟ ಚಿನ್ನದಾಸನು ದತ್ತಕ ತೆಗೆದುಕೊಂಡನು.
ರಾಮ
ವೀರವೆಂಕಟ ಗೋಪಾಲನ ಮಗ ದತ್ತಕನು,
ತಿರುಮಲ
ಚಲ್ಲಮ್ಮ
ನರಸಿಂಹ
ವೀರವೆಂಕಟ
ಪೆದ್ದಪಂಪಾಪತಿ
ಚಿನ್ನಪಂಪಾಪತಿ
ಕೇಶವಮ್ಮ
ರಂಗ
ತಿರುಮಲ
ಕುಮಾರರಾಘವ

ಕುಮಾರ ರಾಘವ

ಸದಾಶಿವ — ಕೋದಂಡರಾಮ — ಕುಪ್ಪಮ್ಮ — ನರಸ — ಪಂಪಾಪತಿ

ಸದಾಶಿವ: ಕುಮಾರ ರಾಘವ

ಕುಪ್ಪಮ್ಮ: ಹಿರಿಯ ಮನೆತನದ ಕೃಷ್ಣದೇವರಾಯನ ಪತ್ನಿ

ಪಂಪಾಪತಿ: ಕುಪ್ಪಮ್ಮ ದತ್ತಕ ತೆಗೆದುಕೊಂಡಳು.

---

‡ ಕೇಶವಮ್ಮ

ಚಿನ್ನ ತಿರುಮಲ — ಲಕ್ಷ್ಮೀದೇವಿ

ಚಿನ್ನ ತಿರುಮಲ: ವೆಂಕಟ — ಕೃಷ್ಣರಾಯ — ಹೆಣ್ಣು

೨ ಹೆಣ್ಣು ಸಂತತಿ ಪಂಪಾಪತಿಯನ್ನು ದತ್ತಕ ತೆಗೆದುಕೊಂಡ ಕುಪ್ಪಮ್ಮನು ರಾಣಿ

ಲಕ್ಷ್ಮೀದೇವಿ: ನರಸಿಂಹ

ನರಸಿಂಹ: ಕೃಷ್ಣ ಚಿಕ್ಕವನಿದ್ದಾಗ ಸತ್ತನು.

ಇಲ್ಲಿಯವರೆಗೆ ವಿಜಯನಗರದವರ ವಂಶಾವಳಿಯು ಲಬ್ಧವಿದೆ. ಇನ್ನು ವಿಜಯನಗರದ ಇತಿಹಾಸಕ್ಕೆ ಅತ್ಯಂತ ನಿಕಟಸಂಬಂಧಿಗಳು ಕಲಬುರ್ಗಿಯ ಬಹಮನೀ ಸುಲ್ತಾನರು. ಬಿಜಾಪುರ, ಅಹಮುದನಗರ ಮತ್ತು ಗೋವಳಕೊಂಡ ಸುಲ್ತಾನರು. ಆದುದರಿಂದ ಅವರ ವಂಶಾವಳಿಯನ್ನೂ ಆಳಿದ ಸುಲ್ತಾನರ ವಂಶ ವಿವರವನ್ನೂ ಇಲ್ಲಿ ಕೊಡುವೆವು.

ಬಹಮನೀ ಸುಲ್ತಾನರ ಹೆಸರು ಮತ್ತು ಅವರು ಆಳಿದ ಕಾಲ—

(ಫಿರಿಸ್ತಿಹಾನ ಲೇಖನದ ಪ್ರಕಾರ)

| | |
|---|---|
| ೧ನೇ ಅಲ್ಲಾವುದ್ದೀನ ಹಸನ | ಇ. ಸ. ೧೩೪೭ ರಿಂದ ೧೩೫೮ |
| ೧ನೇ ಮಹಮ್ಮದ | ,, ೧೩೫೮ ,, ೧೩೭೫ |

| | |
|---|---|
| ಮುಜಾಹಿದ | ಇ. ಸ. ೧೩೭೫ ರಿಂದ ೧೩೭೮ |
| ದಾವುದ | ೧೬ ಎಪ್ರಿಲ ೧೩೭೮ ರಿಂದ ಮೇ ವರೆಗೆ |
| ಮಹಮೂದ | " ೧೩೭೮ " ೧೩೯೭ |
| ಘಿಯಾಸುದ್ದೀನ | ೨೦ ಎಪ್ರಿಲ ರಿಂದ ೧೪ ಜೂನದ ವರೆಗೆ |
| ಶಮ್ಸದ್ದೀನ | ೧೪ ಜೂನದಿಂದ ೧೫ ನವ್ಹಂಬರ ೧೩೯೭ |
| ಫಿರೋಜಶಹ | ಇ. ಸ. ೧೩೯೭ ರಿಂದ ೧೪೨೨ |
| ೧ನೇ ಅಹಮ್ಮದ | " ೧೪೨೨ " ೧೪೩೫ |
| ೨ನೇ ಅಲ್ಲಾವುದ್ದೀನ | " ೧೪೩೫ " ೧೪೫೮ |
| ಹುಮಾಯೂನ | " ೧೪೫೮ " ೧೪೬೧ |
| ನಾಯಜಾಂಶಹ | " ೧೪೬೧ " ೧೪೬೩ |
| ಮೊಹಮ್ಮದ | " ೧೪೬೩ " ೧೪೮೨ |
| ೨ನೇ ಮಹಮ್ಮೂದ | " ೧೪೮೨ " ೧೫೧೮ |
| ೨ನೇ ಅಹಮ್ಮದ * | " ೧೫೧೮ " ೧೫೨೧ |
| ೩ನೇ ಅಲ್ಲಾವುದ್ದೀನ | " ೧೫೨೧ (?) |
| ವಾಲಿಉಲ್ಲಾ | " ೧೫೨೧ (?) ೧೫೨೬ |
| ಕಲೀಮುಉಲ್ಲಾ | " ೧೫೨೬ ರಿಂದ ೧೫೨೮ ಸುಮಾರು |

* ೨ನೇ ಅಹಮ್ಮದಶಹನಿಂದ ಉಳಿದವರೆಲ್ಲರೂ ಹೆಸರಿಗೆ ಮಾತ್ರ ಸುಲ್ತಾನರಾಗಿದ್ದರು. ಇವರಿಗೆ ಪ್ರಜರಾಗಲೀ, ರಾಜ್ಯವಾಗಲೀ, ಸರದಾರರಾಗಲೀ ಯಾರೂ ಇರಲಿಲ್ಲ.

———

# ಬಹಮನೀ ವಂಶ

೧ನೇ ಅಲ್ಲಾವುದ್ದೀನ ಹಸನ




ಇನ್ನು ಗೋವಳಕೊಂಡದ ಸುಲ್ತಾನರ ಹೆಸರು ಮತ್ತು ಅವರು ಆಳಿದ ಕಾಲ ವಿವರಣೆ—

| | |
|---|---|
| ಖ್ವಲಿ ಕುತುಬಶಹ | ಇ. ಸ. ೧೫೧೨ ರಿಂದ ೧೫೪೩ |
| ಜಮ್ಶೀದ | ,, ೧೫೪೩ ,, ೧೫೫೦ |
| ಇಬ್ರಾಹಿಮು | ,, ೧೫೫೦ ,, ೧೫೮೧ |
| ಮೊಹಮ್ಮದ | ,, ೧೫೮೧ ,, ೧೬೧೧ |
| ಅಬ್ದುಲ್ಲಾ | ,, ೧೬೧೧ ,, ೧೬೭೨ |
| ಅಬುಹಸನ | ,, ೧೬೭೨ ,, ೧೬೮೮ |

ಕೊನೆಯ ಇಬ್ಬರು ಪಟ್ಟಕ್ಕೆ ಎಲ್ಲಿಂದ, ಹೇಗೆ ಬಂದರೆಂಬುದು ಗೊತ್ತಾಗಿಲ್ಲ

# ಗೋವಳಕೊಂಡದ ವಂಶ




ಅಹಮ್ಮದನಗರದ ಸುಲ್ತಾನರ ಹೆಸರು ಮತ್ತು ಅವರು ಆಳಿದ ಕಾಲ ವಿವರಣೆ:—

| | |
|---|---|
| ಅಹಮ್ಮದಶಹ | ಇ. ಸ. ೧೪೯೦ ರಿಂದ ೧೫೦೮ |
| ೧ನೇ ಬಿಹ್ರಾನ | ,, ೧೫೦೮ ,, ೧೫೫೩ |
| ಹುಸೇನ | ,, ೧೫೫೩ ,, ೧೫೬೫ |
| ಮುರ್ತಾಝಾ | ,, ೧೫೬೫ ,, ೧೫೮೭ |
| ಮಿರಾನ | ,, ೧೫೮೭ ,, ೧೫೮೮ |
| ಇಸ್ಮಾಯಿಲ | ,, ೧೫೮೮ ,, ೧೫೯೦ |
| ೨ನೇ ಬಹ್ರಾನ | ,, ೧೫೯೦ ರಿಂದ ೧೮-೪-೯೫ |
| ಇಬ್ರಾಹಿಮ | ಎಪ್ರಿಲ ೧೮ರಿಂದ ಅಗಷ್ಟ ೬ರ ವರೆಗೆ |
| ಅಹಮ್ಮದ ಇಬನ್‌ಶಹತಾಹೀರ | ಇ.ಸ. ೧೫೯೫ ರಿಂದ ೧೫೯೬ |
| ಬಹದ್ದೂರಶಹ | ,, ೧೫೯೬ ,, ೧೫೯೯ |

# ಅಹಮ್ಮದನಗರದ ನೈಜಾಂಶಹನ ವಂಶ




ಬಿಜಾಪುರ ಸುಲ್ತಾನರ ಹೆಸರು ಮತ್ತು ಅವರು ಆಳಿದ ಕಾಲದ ವಿವರಣೆ—

| | |
|---|---|
| ಯುಸೂಫ ಆದಿಲಶಹ | ಇ. ಸ. ೧೪೮೯ ರಿಂದ ೧೫೧೦ |
| ಇಸ್ಮಾಯಿಲ | ,, ೧೫೧೦ ,, ೧೫೩೪ |
| ಮಾಲು | ೨೭ ಅಗಸ್ಟ ೧೫೩೪ ರಿಂದ ಫೆಬ್ರುವರಿ ೧೫೩೫ |
| ೧ನೇ ಇಬ್ರಾಹಿಮ | ಇ. ಸ. ೧೫೩೫ ರಿಂದ ೧೫೫೭ |
| ೧ನೇ ಅಲೀಆದಿಲಶಹ | ,, ೧೫೫೭ ,, ೧೫೮೦ |
| ೨ನೇ ಇಬ್ರಾಹಿಮ | ,, ೧೫೮೦ ,, ೧೬೨೬ |
| ಮೊಹಮ್ಮದ | ,, ೧೬೨೬, ,, ೧೬೫೬ |
| ೨ನೇ ಅಲೀಆದಿಲಶಹ | ,, ೧೬೫೮ ,, ೧೬೫೯ |
| ಶಿಕಂದರಶಹ | ,, ೧೬೫೯ ,, ೧೬೮೬ |

# ಬಿಜಾಪುರ ಆದಿಲಶಹನ ವಂಶ

ಅಬ್ದುಲ್ ಮುಜಾಫರ ಯುಸುಫ ಆದಿಲಶಹ

- ಇಸ್ಮಾಯಿಲ
  - ಮಾಲು
  - ಇಬ್ರಾಹಿಮ
    - ಅಲ್ಲೀ
    - ತಹಮಸ್ಪ
      - ಇಬ್ರಾಹಿಮ
        - ಮೊಹಮ್ಮದ
          - ಅಲ್ಲೀ
            - ಶಿಕಂದರಶಹ
      - ಇಸ್ಮಾಯಿಲ
  - ಹೆಣ್ಣು ಬಿಹಾರದ ಅಲ್ಲಾವುದ್ದೀನ ಇಮಾಮಶಹನ ಪತ್ನಿ
- ಹೆಣ್ಣು ಅಹಮ್ಮದಶಹ ಬಹಮನೀ ಪತ್ನಿ
- ಹೆಣ್ಣು ಮರಿಯಂ ಅಹಮ್ಮದನಗರದ ಬುಹ್ರಾನಶಹನ ಪತ್ನಿ



# ೧೫. ಶೇಷ ಸಂಗ್ರಹ

ನ್ಯೂನಿಜ್ಜನು ವಿಜಯನಗರದ ರಾಜರು ಯುದ್ಧ ಭೂಮಿಯಲ್ಲಿ ಹೂಡಿದ ಠಾಣೆಯನ್ನು ಬಹುಸ್ವಾರಸ್ಯವಾಗಿ ವರ್ಣಿಸಿದ್ದಾನೆ. ನಟ್ಟನಡುವೆ ಮಹಾರಾಜನು ತನ್ನ ಪತ್ನಿಯೊಂದಿಗೆ ಇರುವ ಡೇರೆ ಇರುವದು. ಅದರಲ್ಲಿ ರಾಜ ಠಾಣೆಯಲ್ಲಿದೇ ಸೇವಕಿಯರೂ ಮತ್ತು ಡೇರೆಯ ಹೊರಗೆ ಹೋಗಿ ಅವಶ್ಯಕ ಪದಾರ್ಥಗಳನ್ನು ತರಲು ಬೇಕಾಗುವ ನಪುಂಸಕರೂ ಇರುವರು. ಬ್ರಾಹ್ಮಣರು ತಮ್ಮ ದೇವರುಗಳ ಸಹಿತವಾಗಿ ಇದ್ದು ದಿನವೂ ಪೂಜೆ ಮಾಡಿ ರಾಜ ರಾಣಿಯರಿಗೆ ಪ್ರಸಾದ ತೀರ್ಥಗಳನ್ನು ಕೊಡುವರು. ರಾಜನ ಡೇರೆಯ ಸುತ್ತಲೂ ಅತಿ ನಿಬಿಡವಾಗಿಯೂ ಎತ್ತರವಾಗಿಯೂ ಸುತ್ತಲೂ ಮುಳ್ಳಿನ ಬೇಲಿಯನ್ನು ಹಾಕಿರುವರು. ಒಂದೇ ಕಡೆಗೆ ಪ್ರವೇಶವನ್ನಿಟ್ಟು ಅದಕ್ಕೆ ಭದ್ರವಾದ ಕಾವಲಿರುವದು ಮುಳ್ಳಿನ ಬೇಲಿಯ ಸುತ್ತಲೂ ಸಶಸ್ತ್ರ ಕಾವಲು ಹಗಲು ರಾತ್ರಿ ಇರುವದು. ಅದರಿಂದ ತುಸು ದೂರದಲ್ಲಿ ಡೇರೆಯ ಸುತ್ತಲೂ ಸಾದಾ ಪೋಷಾಕದ ಕಾವಲು ಗುಪ್ತ ರೀತಿಯಲ್ಲಿರುವದು. ಗುಪ್ತಚಾರರು ಮೊದಲಾದವರನ್ನು ಶೋಧಿಸುವದು ಇವರ ಕರ್ತವ್ಯವು. ಮುಂದೆ ತುಸು ದೂರದಲ್ಲಿ ಮಂತ್ರಿಗಳು ಮುಖ್ಯ ಸರದಾರರ, ನಾಯಕರ ಡೇರೆಗಳು ಇರುವವು. ಅದರಿಂದಾಚೆ ಪೇಟೆಯು ಪ್ರಾರಂಭವಾಗುವದು. ಶಹರದಂತೆ ವಿಶಾಲವಾದ ದಾರಿಯನ್ನು ನಿರ್ಮಿಸಿ ವಿಜಯನಗರದಲ್ಲಿ ಸಿಗತಕ್ಕ ಸಕಲ ಪದಾರ್ಥಗಳ ಪೇಟೆಯು ಇಲ್ಲಿ ಇರುವದು. ಎಲ್ಲ ಪ್ರಾಣಿಗಳ ಮಾಂಸ, ಕಾಳುಕಡಿ, ಮಸಾಲೆ ಮೊದಲಾದದ್ದು ಬೇಡಿದ್ದೆಲ್ಲವೂ ಸಿಗುವದು.

ಇವಲ್ಲದೆ ಬೆಳ್ಳಿ ಬಂಗಾರದ ಅಂಗಡಿಗಳು ಮುತ್ತುರತ್ನ ವಜ್ರ ವೈಢೂರ್ಯದ ಅಂಗಡಿಗಳು ವಿಶಾಲವಾಗಿರುವವು. ಕುಶಲ ಕೈಗಾರಿಕೆಯ ನಿಪುಣರು ಅಸಂಖ್ಯದಲ್ಲಿ ಕೆಲಸ ಮಾಡುತ್ತಿರುವರು. ಇದಲ್ಲದೇ ಹುಲ್ಲಿನ ಬಹು ದೊಡ್ಡ ಪೇಟೆಯು ಶೋಭಿಸುತ್ತಿರುವದು. ಲಕ್ಷಗಟ್ಟಲೆ ಕುದುರೆ ಲಕ್ಷಗಟ್ಟಲೆ

ಆನೆಗಳಿಗೂ ಹುಲ್ಲು ಬೇಕು, ಇದಲ್ಲದೆ ಡೇರೆ ಮೊದಲ್ಗೊಂಡು ಸಕಲ ವಸ್ತುಗಳನ್ನು ಸಾಗಿಸಲು ಜೋಡೆತ್ತಿನ ಚಕ್ಕಡಿಗಳು ಸುಮಾರು ೨೦ ಲಕ್ಷಕ್ಕೂ ಮೇಲಿದ್ದು ೪೦ ಲಕ್ಷ ಎತ್ತುಗಳು, ಹೇಸರಗತ್ತೆ, ಝಿಬ್ರಾ ಮೊದಲಾದವುಗಳೂ ಇರುವದನ್ನು ನೋಡಿದರೆ ಇದು ಯುದ್ಧ ತಯಾರಿಗೆ ಸ್ಥಾಪಿಸಲ್ಪಟ್ಟಿದೆಯೆಂದೂ ಯಾರೂ ತಿಳಿಯಲು ಸಾಧ್ಯವಿಲ್ಲ, ಇದಲ್ಲದೆ ಸ್ತ್ರೀ ಸಮುದಾಯವೂ ಅಷ್ಟೇ ಪ್ರಮಾಣದಲ್ಲಿರುವದು. ವಾರಾಂಗನೆಯರೂ, ನರ್ತಕಿಯರೂ, ಗಾಯಕಿಯರೂ, ನಟಿಯರು, ವೇಶ್ಯೆಯರು, ದಾಸಿಯರೂ ಸೇವಕಿಯರು ಸೈನಿಕರ ಎರಡರಷ್ಟು ಸಂಖ್ಯೆಯಲ್ಲಿರುವರು. ಇವರೆಲ್ಲರೂ ಪರಮ ಸುಂದರಿಯರು. ಸೌಂದರ್ಯದಲ್ಲಿ ಒಬ್ಬರನ್ನೊಬ್ಬರು ಮೀರಿಸುವಂಥವರಿರುವರು.

ನಗಾರಿ, ನೌಬತ್ತ, ತುತೂರ್ರಿ, ಝಾಗಟೆ ಮೊದಲಾದವುಗಳು ರಣಕಹಳೆಗಳೂ ಅಸಂಖ್ಯಾತವಾಗಿದ್ದು ಅವುಗಳನ್ನು ಏಕಕಾಲಕ್ಕೆ ಬಾರಿಸಲು ಪ್ರಾರಂಭಿಸುವರು. ಅದರ ಸಪ್ಪಳದಿಂದ ಕರ್ಣರಂಧ್ರಗಳು ಹರಿದು ಹೋಗುವವೋ ಆಕಾಶವು ಕಳಚಿಕೊಂಡು ಬೀಳುವದೋ ಎಂದೆನಿಸುವದು ಇದು ಯುದ್ಧ ಸನ್ನಾಹವ ಮುನ್ನ ಸೂಚನೆಯು. ಕೂಡಲೇ ಸೈನಿಕರು ಸಮವಸ್ತ್ರ ಧರಿಸಿ ಆಯುಧ ಸಹಿತರಾಗಿ ಯುದ್ಧರಂಗಕ್ಕೆ ಬರುವರು.

## ೨

ಕೃಷ್ಣದೇವರಾಯನು ರಾಯಚೂರ ಕೋಟೆಯನ್ನು ಕೈವಶಮಾಡಿಕೊಂಡನಂತರ ಯುದ್ಧರಂಗದಲ್ಲಿ ಎಸಗಿದ ಕಾರ್ಯಗಳು ಈ ಪ್ರಕಾರ ಇದ್ದವು—

ಕೃಷ್ಣದೇವರಾಯನು ತನ್ನ ಡೇರೆಗೆ ಬಂದ ನಂತರ ರಣರಂಗದಲ್ಲಿ ಸಿಕ್ಕವರನ್ನೂ ಸಂಪತ್ತನ್ನೂ ತಂದು ತೋರಿಸಲು ಆಜ್ಞೆ ವಿಧಿಸಿದನು ಮುಖ್ಯ ಸೇನಾಧಿಕಾರಿಗಳೆಲ್ಲರೂ ಸತ್ತಿದ್ದರು. ಸಲಾಬತ್‌ಖಾನನು ಮಾತ್ರ ಜೀವದಿಂ

ದಿದ್ದು ಸೆರೆಸಿಕ್ಕಿದ್ದನು. ಮತ್ತು ಶತ್ರು ಪಕ್ಷದಿಂದ ನಾಲ್ಕು ಸಾವಿರ ಕುದುರೆಗಳು ಒಂದು ನೂರು ಆನೆಗಳು ನಾಲ್ಕು ನೂರು ದೊಡ್ಡ ತೋಪುಗಳಲ್ಲದೇ ಅನೇಕ ನೂರು ಚಿಕ್ಕ ತೋಪುಗಳೂ ಡೇರೆಗಳೂ ವಿಶಾಲವಾದ ಅರಮನೆಗಳಂತಿರುವ ತಂಬುಗಳೂ ದೊರೆತವು. ಇದಲ್ಲದೇ ಎತ್ತು ಬಂಡಿಗಳು ಕತ್ತೆ ಹೇಸರಗತ್ತೆಗಳೂ ಲೆಕ್ಕವಿಲ್ಲದಷ್ಟು ಇದ್ದವು. ಸೈನಿಕರಲ್ಲದ ನಾಗರಿಕ ಪುರುಷರೂ ಬಾಲಕರೂ, ಅಗಣಿತ ಸ್ತ್ರೀ ಸಮೂಹವು ಇದ್ದಿತು. ಎಲ್ಲವನ್ನೂ ವಿಜಯನಗರದ ಭಂಡಾರಕ್ಕೆ ಸಾಗಿಸಲಾಯಿತು- ಆದರೆ ನಾಗರಿಕರನ್ನೂ ಬಾಲಕರನ್ನೂ ಸ್ತ್ರೀಯರನ್ನೂ ಬಿಟ್ಟುಬಿಡಲು ಕೃಷ್ಣದೇವರಾಯನು ಆಜ್ಞೆ ವಿಧಿಸಿದನು.

ಆಮೇಲೆ ರಣರಂಗದಲ್ಲಿ ಒಂದು ದೊಡ್ಡ ಚಿತೆಯನ್ನು ನಿರ್ಮಿಸಿ ರಾಯನು ತನ್ನ ಮತ್ತು ಶತ್ರು ಪಕ್ಷದಲ್ಲಿ ಸತ್ತುಬಿದ್ದಂಥ ಎಲ್ಲ ಶವಗಳನ್ನೂ ಸಂಪೂರ್ಣ ದಹನ ಮಾಡಿಸಿದನು. ತನ್ನ ಪಕ್ಷದಲ್ಲಿ ಸತ್ತವರಿಗಾಗಿ ಸವಿಸ್ತಾರವಾದ ಶ್ರಾದ್ಧ ಕರ್ಮಾದಿಗಳನ್ನು ಬ್ರಾಹ್ಮಣರಿಂದ ಮಾಡಿಸಿದನು. ದೇವಾಲಯಗಳಿಗೂ ಧಾರ್ಮಿಕ ಸಂಸ್ಥೆಗಳಿಗೂ ಬ್ರಾಹ್ಮಣರಿಗೂ ಸತ್ತವರ ಹೆಸರಿನಲ್ಲಿ ದಾನಧರ್ಮಗಳನ್ನು ಮಾಡಿ ಎಲ್ಲವನ್ನೂ ಪೂರೈಸಿಕೊಂಡು ರಾಯಚೂರ ಕೋಟೆಯನ್ನು ಪ್ರವೇಶಿಸಿದನು. ಅಲ್ಲಿಯ ನಾಗರಿಕರೂ ಸ್ತ್ರೀಯರೂ ಬಾಲಕರೂ ಎರಡೂ ಕೈಗಳನ್ನು ಮೇಲೆತ್ತಿಕೊಂಡು ಬಂದು ರಾಜನಿಗೆ ಸಾಷ್ಟಾಂಗವೆರಗಿದರು. "ನಾವು ನಿರಪರಾಧಿಗಳು ನಮ್ಮನ್ನು ರಕ್ಷಿಸು" ಎಂದು ಅಳಹತ್ತಿದರು. ರಾಯನು ಎಲ್ಲರನ್ನೂ ಶಾಂತಗೊಳಿಸಿದನು. ಯಾರಿಗೂ ಯಾವ ತರಹದ ಅಪಾಯವಿಲ್ಲವೆಂದು ಭರವಸೆಯನ್ನಿತ್ತನು. ಕೋಟೆಯಿಂದ ಹೊರಬಿದ್ದು ತಮ್ಮ ತಮ್ಮ ಮನೆಗೆ ಹೋಗಲು ಹೇಳಿದನು. ಸತ್ಯಜೀವನ ಕರ್ಮಗಳಲ್ಲಿ ತೊಡಗಲು ಅವರಿಗೆಲ್ಲ ಸಂದೇಶವನ್ನಿತ್ತನು.

ಮರುದಿನ ಮುಂಜಾನೆ ರಾಯನು ಎದ್ದು ಪ್ರಾತರ್ವಿಧಿಗಳನ್ನು ತೀರಿಸಿ ಸ್ನಾನಾದಿಗಳ ನಂತರ ಈ ಯುದ್ಧದಲ್ಲಿ ಜಯವನ್ನು ದೊರಕಿಸಿ ಕೊಟ್ಟು ಕಾಪಾಡಿದ ಪರಮಾತ್ಮನಿಗೆ ಭಕ್ತಿಪೂರ್ವಕವಾಗಿ ಪ್ರಾರ್ಥನೆಯನ್ನು ಸಲ್ಲಿಸಿ

ದನು. ಆ ಮೇಲೆ ಕುದುರೆಯನ್ನೇರಿ ರಾಯಚೂರ ಪಟ್ಟಣದ ಬೀದಿಯಲ್ಲಿ ಸಾಗಿದನು. ಅವನ ಎಡಬಲದಲ್ಲಿ ಅವನ ವಿಶ್ವಾಸಿಕರಾದ ಶೂರ ಸರದಾರರೂ ದೊಡ್ಡ ಜಮೀನದಾರರೂ ನಾಯಕರೂ ಕುದುರೆಯ ಮೇಲೆ ಕುಳಿತು ಸಾಗಿದ್ದರು. ಬೀದಿಯ ಎರಡೂ ಮಗ್ಗಲಿಗೆ ತಮ್ಮ ತಮ್ಮ ಬಾಗಿಲು ಮುಂದೆ ಸಮಸ್ತ ನಾಗರಿಕರು ಎದ್ದು ನಿಂತು ವಂದನೆಗಳನ್ನರ್ಪಿಸುತ್ತ ಜಯ ಜಯಕಾರವನ್ನು ಮಾಡುತ್ತ "ಸ್ವಾಮಿ ನಿಮ್ಮ ಕರುಣೆಯ ಆಳಿಕೆಯು ನಮಗೆ ಸುಖವನ್ನು ತರಲಿ" ಎಂಬ ಅನೇಕ ಘೋಷಣೆಗಳನ್ನು ಮಾಡುತ್ತಲಿದ್ದರು. ರಾಯನು ಎಲ್ಲ ಬೀದಿಗಳಲ್ಲಿಯೂ ಹೊರಟು ಕೋಟೆಯ ಬಾಗಿಲಿಗೆ ಬಂದು ನಿಂತನು ಪಟ್ಟಣದ ಪ್ರಮುಖರೆಲ್ಲರನ್ನೂ ಕರೆಸಿದನು. "ನಾಗರಿಕರೇ ನನ್ನಿಂದ ನಿಮಗೂ ನಿಮ್ಮ ಆಸ್ತಿಪಾಸ್ತಿಗಳಿಗೂ ಯಾವ ತೊಂದರೆಯೂ ಬರಲಾರದು. ನೀವೆಲ್ಲರೂ ಸುಖದಿಂದ ಇರಲು ನೀವು ಸ್ವತಂತ್ರರು. ಈ ಪಟ್ಟಣದಲ್ಲಿ ಇರಲು ಬಯಸದಂಥವರೂ ಸಹ ಸ್ವತಂತ್ರರೇ. ಅವರು ಮಾತ್ರ ತಮ್ಮ ಇದ್ದ ಬಿದ್ದ ಆಸ್ತಿಯನ್ನೆಲ್ಲ ಕಟ್ಟಿಕೊಂಡು ಕೂಡಲೇ ಆ ಸ್ಥಳದಿಂದ ಹೊರಟು ಹೋಗಬೇಕು'' ಎಂದು ಆಜ್ಞೆ ಸಾರಿದನು.

ಅದಕ್ಕೆ ನಾಗರಿಕರೆಲ್ಲರೂ ಆಕಾಶದ ಕಡೆಗೆ ಕೈಮಾಡಿ "ಪ್ರಭುವೇ, ನೀವೇ ದೇವರು. ಇಂಥ ಕರುಣಾಳು ರಾಜನನ್ನು ನಾವೆಂದೂ ಕಂಡಿದ್ದಿಲ್ಲ. ನಿನ್ನ ಕೃಪಾಕಟಾಕ್ಷದಲ್ಲಿ ನಾವೆಲ್ಲರೂ ಇಲ್ಲಿಯೇ ವಾಸಿಸುವೆವು'' ಎಂದು ಆ ನಗರ ಪ್ರಮುಖರು ಸಾಷ್ಟಾಂಗವೆರಗಿದರು. ಅಷ್ಟರಲ್ಲಿ ಕೆಲ ನಾಗರಿಕರು ಓಡುತ್ತ ಬಂದು ಹಿಂದು ಸೈನಿಕರು ನಗರವನ್ನು ಸುಲಿಯುತ್ತಿರುವರೆಂದು ದೂರುಕೊಟ್ಟರು. ಕೃಷ್ಣದೇವರಾಯನು ಕೂಡಲೇ ಆಜ್ಞೆ ಕಳಿಸಿ ಅದನ್ನು ಕೂಡಲೇ ನಿಲ್ಲಿಸಿಬಿಟ್ಟನು.

೩

ಕೃಷ್ಣದೇವರಾಯನು ತನ್ನ ಆರು ವರುಷದ ಮಗನನ್ನು ತಾನಿರುವಾಗಲೇ ರಾಜನನ್ನಾಗಿ ಮಾಡಲು ಪ್ರಯತ್ನಿಸಿದನೆಂಬುದರ ವಿವರವು—

ಕೃಷ್ಣದೇವರಾಯನು ಸಾಮ್ರಾಜ್ಯ ವಿಸ್ತರಣೆಯನ್ನು ತೃಪ್ತಿಪೂರ್ವಕ ವಾಗಿ ಮಾಡಿ ಮುಗಿಸಿದನು. ಅವನಿಗೆ ವಯಸ್ಸೂ ಆಗಿತ್ತು. ಮುಪ್ಪಿನಲ್ಲಿ ಅಕಸ್ಮಾತ್ ಸತ್ತರೆ ತರುವಾಯ ಪಟ್ಟವು ತನ್ನ ಮಗನಿಗೇ ಬರುವದೋ ಇಲ್ಲವೋ ಎಂಬ ಸಂಶಯವು ಬಲವಾಗಿತ್ತು. ಆದುದರಿಂದ ಈಗಲೇ ಅವನನ್ನು ರಾಜನನ್ನಾಗಿ ಮಾಡಬೇಕೆಂದು ಯೋಚಿಸಿದನು. ಒಂದು ಶುಭ ಮುಹೂರ್ತವನ್ನು ನೋಡಿ ೬ ವರುಷದ ಹಸುಳೆಯ ಪಟ್ಟಾಭಿಷೇಕ ಸಮಾರಂಭವನ್ನು ಏರ್ಪಡಿಸಿದನು. ಅಖಂಡ ವೈಭವದಿಂದಲೂ ಸಕಲ ಧಾರ್ಮಿಕ ಲೌಕಿಕ ಸಮಾರಂಭಗಳಿಂದಲೂ ಪಟ್ಟಾಭಿಷೇಕವು ಜರುಗಿಸಿ ದಾನ್ನ ಧರ್ಮ ಭೋಜನ್ನ ಉಡುಗೊರೆ, ಕಾಣಿಕೆ ಅತಿಥಿ ಅಭ್ಯಾಗತರ ಸತ್ಕಾರಗಳು ಎಂಟು ತಿಂಗಳುಗಳ ವರೆಗೆ ಜರುಗಿದವು. ಬಾಲಕನಾದ ಮಗನನ್ನು ಪಟ್ಟದ ಮೇಲೆ ಕುಳ್ಳಿರಿಸಿ ತಾನು ಸ್ವತಃ ಪ್ರಧಾನಮಂತ್ರಿಯಾದನು. ತನಗೆ ಪ್ರಧಾನ ಮಂತ್ರಿಯಾಗಿದ್ದ ಸಾಳುವತಿಮ್ಮರಾಯನನ್ನು ಇನ್ನೊಂದು ದೊಡ್ಡ ಹುದ್ದೆಗೆ ವರ್ಗಾಯಿಸಿದನು. ತಿಮ್ಮರಾಯನ ಮಗನನ್ನು ದೊಡ್ಡ ಸರಕಾರಿ ಹುದ್ದೆಗೆ ನಿಯಮಿಸಿದನು. ಕೃಷ್ಣದೇವರಾಯನು ಮಂತ್ರಿಯ ಆಸನ ದಲ್ಲಿದ್ದು ಎದ್ದುನಿಂತು ಸಿಂಹಾಸನದಲ್ಲಿ ವಿರಾಜಮಾನನಾಗಿದ್ದ ತನ್ನ ಮಗನಿಗೆ ರಾಜಮರ್ಯಾದೆಯಿಂದ ನಮಿಸಿ ಅವನ ಅಪ್ಪಣೆಯನ್ನು ಮನ್ನಿಸಿ ರಾಜ್ಯ ಕಾರಭಾರವನ್ನು ಸಾಗಿಸುತ್ತಲಿದ್ದನು. ಆದರೆ ಮುಂದೆ ಕೆಲವೇ ತಿಂಗಳಲ್ಲಿ ಬಾಲರಾಜನು ಅಕಸ್ಮಿಕವಾಗಿ ಮರಣಹೊಂದಿದನು.

ಕೃಷ್ಣದೇವರಾಯನು ಶೋಕ ಸಾಗರದಲ್ಲಿ ಮುಳುಗಿ ಬಿಟ್ಟನು. ಸಾಳುವ ತಿಮ್ಮರಾಯನ ಮಗನು ಕೃಷ್ಣದೇವರಾಯನ ಮಗನಾದ ಬಾಲಕ ರಾಜನಿಗೆ ವಿಷಪ್ರಯೋಗ ಮಾಡಿಸಿದನೆಂದೂ ಅದರಿಂದಲೇ ಬಾಲಕನು ಸತ್ತ ನೆಂದೂ ಕೃಷ್ಣದೇವರಾಯನಿಗೆ ಗೊತ್ತಾಯಿತು. ಈ ವಿಷಯವನ್ನು ಪೂರ್ಣ ವಾಗಿ ಶೋಧಿಸಿ ತೆಗೆದು ನಿಜವೆಂದು ಮನಗಂಡನು. ಒಂದುದಿವಸ ದೊಡ್ಡ ದರಬಾರವನ್ನು ನೆರೆಸಿದನು. ಅಲ್ಲಿ ಸಾಳುವ ತಿಮ್ಮನನ್ನೂ ಅವನ ಮಕ್ಕಳು ಬಂಧುಗಳನ್ನೂ ಆಪ್ತೇಷ್ಟರೆಲ್ಲರನ್ನೂ ಕರೆಸಿದನು. ಅವರನ್ನು ಎದುರಿಸಿ

ಲ್ಲಿಸಿ ಇಡೀ ದರಬಾರದ ಸಮಕ್ಷಮದಲ್ಲಿಯೇ ನುಡಿದನು. "ಈ ವರೆಗೆ ನೀವೆಲ್ಲರೂ ನನಗೆ ಅತ್ಯಂತ ವಿಶ್ವಾಸಿಕ ಮಿತ್ರರಾಗಿದ್ದಿರಿ. ನಾನೂ ಕೂಡ ನಿಮ್ಮನ್ನು ಅಷ್ಟೇ ಪ್ರೀತಿಯಿಂದ ಈ ನಾಲ್ವತ್ತು ವರುಷಗಳವರೆಗೆ ನಿಮ್ಮನ್ನು ಕಂಡೆನು. ಇಷ್ಟೇ ಅಲ್ಲ ನನ್ನ ರಾಜ್ಯದಲ್ಲಿಯ ದೊಡ್ಡ ದೊಡ್ಡ ಅಧಿಕಾರಗಳನ್ನೆಲ್ಲವನ್ನೂ ನಿಮ್ಮ ಕೈಗೆ ಇತ್ತಿದ್ದೆನು. ಹಿರಿಯ ರಾಜನು ನನ್ನನ್ನು ಅಡವಿಗೊಯ್ದು ಕಣ್ಣು ಕಿತ್ತಲು ಹೇಳಿದಾಗ, ನೀವು (ಸಾಳುವ ತಿಮ್ಮರಾಯನು) ನನ್ನ ಮೇಲೆ ಕರುಣೆತೋರಿ ಆಡನ್ನು ಕೊಂದು ಅದರ ಕಣ್ಣುಗಳನ್ನು ರಾಜನಿಗೆ ತೋರಿ ನನ್ನನ್ನು ಕಾಪಾಡಿದಿರಿ. ರಾಜನ ತರುವಾಯ ನನ್ನನ್ನು ಪಟ್ಟಕ್ಕೆ ತರಲು ನೀವು ಮತ್ತು ನಿನ್ನ ಸಕಲ ಬಂಧುಗಳು ಸಾಹಸಪಟ್ಟಿರಿ. ಇದು ಒಂದು ರೀತಿಯಲ್ಲಿ ಹೋದ ರಾಜನಿಗೆ ದ್ರೋಹ ಬಗೆದಂತೆಯೇ ಸರಿ. ಇದೇ ನೀಚ ಭಾವನೆಯನ್ನು ಮನದಲ್ಲಿಟ್ಟುಕೊಂಡು ನೀವು ಇಂದು ನನ್ನ ಮಗನನ್ನು ವಿಷಕುಡಿಸಿ ಕೊಂದಿರಿ. ಆದ್ದರಿಂದ ನೀವೆಲ್ಲ ಕಾರಾಗ್ರಹ ವಾಸಕ್ಕೆ ಯೋಗ್ಯರು" ಎಂದು ಹೇಳಿದವನೇ ಅವರೆಲ್ಲರಿಗೂ ಬೇಡಿ ತೊಡಿಸಿ ಸೆರೆಮನೆಗೆ ಕಳಿಸಿಬಿಟ್ಟನು. ಕೋದಂಡರಾಯನನ್ನು ಕರೆಸಿ ಅವನಿಗೆ ಮಂತ್ರಿ ಗದವನ್ನು ಕೊಟ್ಟನು. ಇದೇ ಕೋದಂಡನು ಹಿಂದಕ್ಕೆ ಪೆನುಗೊಂಡೆ ಕೋಟೆಯಲ್ಲಿ ಕೃಷ್ಣರಾಯನ ತಂದೆಯ ಆಜ್ಞೆಯ ಪ್ರಕಾರ ನರಸಿಂಗರಾಯನ ಮಗನನ್ನು ನೀಚತನದಿಂದ ಕೊಂದಿದ್ದನು.

ಸಾಳುವ ತಿಮ್ಮನಾಯಕನು ತನ್ನ ಮಕ್ಕಳು ಆಪ್ತೇಷ್ಟರ ಸಹಿತ ಮೂರು ವರುಷ ಕಾಲ ಕಾರಾಗೃಹದಲ್ಲಿದ್ದನು. ಒಂದು ದಿನ ತಿಮ್ಮನಾಯಕನ ಮಕ್ಕಳಲ್ಲಿ ಒಬ್ಬನು ವಿಷಪ್ರಯೋಗ ಮಾಡಿದನು. ದಂಡನಾಯಕನು ತಪ್ಪಿಸಿಕೊಂಡು ಓಡಿಹೋಗಿ ಅರಣ್ಯ ಸೇರಿದನು. ಅಲ್ಲಿ ಒಂದು ಗೌಪ್ಯವಾಗಿದ್ದ ದುರ್ಗದಲ್ಲಿ ಇವನ ಆಪ್ತರಿದ್ದರು. ಅಲ್ಲಿ ಹೋದನು. ಅವರೆಲ್ಲರೂ ದಂಡನಾಯಕನನ್ನು ಪ್ರೀತಿಯಿಂದ ಸ್ವಾಗತಿಸಿದರು. ದುರ್ಗದ ಸುತ್ತಲೂ ಕಳ್ಳಕಾಕರರು, ದರೋಡೆಖೋರರು, ಹರಿಣಶಿಕಾರಗಳೂ ತುಂಬಿಕೊಂಡಿದ್ದರು. ಅವರನ್ನೆಲ್ಲ ಒಟ್ಟುಗೂಡಿಸಿ ದಂಡನಾಯಕನು ಕೃಷ್ಣದೇವರಾಯನಿಗೆ ಆಗಾಗ ಕಿರುಕುಳ ತ್ರಾಸು ಕೊಡಲಾರಂಭಿಸಿದನು. ಇದನು

ತಾಳಲಾರದೇ ಮಂತ್ರಿಗಳಲ್ಲಿ ಒಬ್ಬನಾದ ಅಜಬಲರಾಯನನ್ನು ಕೃಷ್ಣದೇವರಾಯನು ಸೈನ್ಯಸಮೇತ ಕಳಿಸಿದನು. ಅಜಬಲರಾಯನು ದಂಡನಾಯಕನ ವಾಸಸ್ಥಾನವನ್ನು ಶೋಧಿಸಿ ಮುತ್ತಿದನು. ಅವನ ಅನುಚರರನ್ನು ಓಡಿಸಿ ಅವನನ್ನು ಜೀವಂತವಾಗಿ ಸೆರೆ ಹಿಡಿದು ತಂದು ಕೃಷ್ಣದೇವರಾಯನೆದುರು ನಿಲ್ಲಿಸಿದನು.

ರಾಯನು ಇವನನ್ನು ಕಂಡು ಸಿಟ್ಟಿನಿಂದ ಉರಿದೆದ್ದನು. ಇವನ ತಂಡೆಯನ್ನೂ ತಮ್ಮಂದಿರನ್ನೂ ಕರೆತಂದು ಎಲ್ಲರ ಕಣ್ಣುಕಿತ್ತಿಸಿ ಸೆರೆಯಲ್ಲಿ ಕೊಳೆಯಲು ದೂಡಿದನು. ಮುಂದೆ ತುಸು ದಿವಸಗಳಲ್ಲಿಯೇ ತಿಮ್ಮ ನಾಯಕನು ಸತ್ತನು.

೪

ಕೃಷ್ಣದೇವರಾಯನ ಪ್ರಣಯ ಸನ್ನಿವೇಶದ ರಸನಿರೂಪ—

ಕೃಷ್ಣದೇವರಾಯನು ಇನ್ನೂ ಚಿಕ್ಕವನಿದ್ದನು. ವಿಜಯನಗರದಲ್ಲಿ ಓರ್ವ ಸಾಮಾನ್ಯ ಮನೆತನದ ಬಾಲೆಯೊಡನೆ ಗೆಳೆತನವನ್ನು ಅಕಸ್ಮಾತ್ತಾಗಿ ಬೆಳೆಸಿದನು. ತಾರುಣ್ಯಕ್ಕೆ ಬಂದಾಗ ಗೆಳೆತನವು ಪ್ರಣಯದಲ್ಲಿ ಪರಿವರ್ತನೆ ಹೊಂದಿತು. "ನಾನು ರಾಜನಾದೊಡನೇ ನಿನ್ನನ್ನು ಲಗ್ನವಾಗಿ ರಾಣಿಯನ್ನಾಗಿ ಮಾಡುವೆನು" ಎಂದು ವಿನೋದ ಮಾಡುತ್ತಿದ್ದನು. ಈ ಬಾಲೆಯು (ಚಿನ್ನಮ್ಮ) ಇದು ನಿಜವೆಂದು ಮನದಲ್ಲಿಯೇ ಸಂತೋಷಪಡುತ್ತಿದ್ದಳು. ಚಿನ್ನಮ್ಮಳು ಲೌಕಿಕ ಸುಂದರಿ. ಅಪ್ಸರೆಯೋ ದೇವಕನ್ನೆಯೋ ಎಂಬಂತೆ ತಾರುಣ್ಯಕ್ಕೆ ಬಂದೊಡನೆ ಸಕಲರ ಮನವನ್ನು ಕದಿಯತೊಡಗಿದಳು. ಕೃಷ್ಣದೇವರಾಯನು ಚಿನ್ನಮ್ಮನಲ್ಲಿ ನಿರತನಾದನು. ಅವಳನ್ನು ಕ್ಷಣಕೂಡ ಬಿಟ್ಟಿರಲು ಅವನಿಗೆ ಅಸಾಧ್ಯವಾಯಿತು. ರಾಯನು ಪಟ್ಟವೇರಿದನು. ರಾಜಕಾರಣದಲ್ಲಿ ತೊಡಗಿದಾಗ್ಯೂ ಚಿನ್ನಮ್ಮನನ್ನು ಮರೆಯಲು ಅವನಿಂದಾಗಲಿಲ್ಲ ಯಾರ ದೃಷ್ಟಿಗೂ ಬೀಳದಂತೆ ಅರಮನೆಯಿಂದ ಕದ್ದು ಚಿನ್ನಮ್ಮನ ಮನೆಗೆ ಓಡಿ ಬರುತ್ತಿದ್ದನು. ಅಲ್ಲಿ ಬಹಳ ಹೊತ್ತು ಇದ್ದು ಸುಖಿಸಿ ಹಿಂತಿರುಗಿ ಅರಮನೆಗೆ ಬರುತ್ತಿದ್ದನು.

ಮಹಾಮಂತ್ರಿಯಾದ ತಿಮ್ಮರಸನಿಗೆ ತಮ್ಮ ತರುಣ ರಾಜನ ಚಟುವಟಿಕೆಗಳ ಬಗ್ಗೆ ಸಂಶಯ ಬರತೊಡಗಿತು. ಅವನನ್ನು ಗೌಪ್ಯವಾಗಿ ವೀಕ್ಷಿಸುತ್ತಲೇ ಇದ್ದನು. ಒಂದುದಿನ ಅರಮನೆಯಿಂದ ನೂತನ ರಾಜನಾದ ಕೃಷ್ಣದೇವರಾಯನು ಗೌಪ್ಯವಾಗಿ ಹೊರಬಿದ್ದನು. ತಿಮ್ಮರಸನು ಅವನನ್ನು ಹಿಂಬಾಲಿಸಿದನು. ವಿಜಯನಗರದ ಓರ್ವ ಸಾಮಾನ್ಯ ಮನೆತನದವರ ಬಿಡಾರದಲ್ಲಿ ರಾಜನು ಹೊಕ್ಕನು. ಆ ಮನೆಯ ಬಾಗಿಲವನ್ನು ಕಾಯುತ್ತ ತಿಮ್ಮರಸನು ನಿಂತನು. ಕೆಲ ತಾಸುಗಳ ನಂತರ ರಾಯನು ಹೊರಬಿದ್ದನು ತಿಮ್ಮರಸನು ರಾಯನನ್ನು ಬಾಗಿಲಲ್ಲಿಯೇ ಹಿಡಿದನು. “ಮಹಾ ಪ್ರಭುಗಳು ಇದನ್ನೇನು ನಡೆಸಿರುವಿರಿ ? ನೀವಾರು ? ನಿಮ್ಮ ಅಂತಸ್ತೇನು ? ನೀವು ಬೆಳೆಸಿರುವ ಸಂಬಂಧದ ಹುಡುಗಿಯ ಅಂತಸ್ತೇನು ? ಮಾನಾಪಮಾನದ ಪರವೆಯಾದರೂ ನಿಮಗಿದೆಯೇ? ರಾಜಸಿಂಹಾಸನದೊಡನೇ ಹುಡುಗಾಟದ ಚಿನ್ನಾಟವೇ ?” ಎಂದು ನುಡಿದನು.

“ಮಹಾಮಂತ್ರಿಗಳೇ, ನೀವೆನ್ನುವದು ನಿಜ, ಆದರೇನು ಮಾಡಲಿ ಆ ಬಾಲೆಯು ನನ್ನ ಹೃದಯವನ್ನು ಕದ್ದುಬಿಟ್ಟಿದ್ದಾಳೆ. ಅವಳ ವಿರಹವು ನನಗೆ ಅಸಹನೀಯ. ಇಷ್ಟೇ ಅಲ್ಲ, ನಾನು ಅವಳನ್ನು ಲಗ್ನವಾಗಬೇಕೆನ್ನುವೆನು” ಎಂದನು ರಾಜ.

ರಾಜನ ಲಗ್ನಕ್ಕೆ ರಾಜಮನೆತನದವರ ಒಪ್ಪಿಗೆಬೇಕು. ರಾಜ್ಯದ ಆಧಾರ ಸ್ಥಂಭರಾದ ಸರದಾರರ, ಸೈನಿಕರ, ಜಾಹಗೀರದಾರರ, ಅಮಾತ್ಯರ ಮಹಾ ದಂಡನಾಯಕರೇ ಮೊದಲಾದವರ ಒಪ್ಪಿಗೆಬೇಕು. ಈ ಹುಡುಗೆಯ ಸಂಗಡ ನಿಮ್ಮ ವಿವಾಹಕ್ಕೆ ಯಾರೂ ಒಪ್ಪಿಗೆಯನ್ನು ಕೊಡಲಾರರು” ಎಂದು ಕುಸು ಬಿರುಸಾಗಿಯೇ ತಿಮ್ಮರಸನು ನುಡಿದನು.

“ಮಹಾಮಂತ್ರಿಗಳೇ, ನನ್ನ ಮೇಲೆ ದಯೆ ತೋರಿ. ನಿಮ್ಮ ಅಂತಃಕರುಣೆಯಿಂದಲೇ ನಾನು ಮರಣದಂಡನೆಯಿಂದ ಪಾರಾಗಿ ರಾಜನಾಗಿದ್ದೇನಲ್ಲವೇ? ನನ್ನ ತಂದೆಯೇ ನನ್ನನ್ನು ಕಣ್ಣು ಕೀಳಿಸಲು ನಿಮಗೆ ಆಜ್ಞೆವಿಧಿಸಿ

ದ್ದನಲ್ಲವೇ ? ಆಗ ದಯೆ ತೋರಿದಂತೆ ಮತ್ತೊಮ್ಮೆ ದಯೆತೋರಿರಿ. ಚಿನ್ನ ಮ್ಮನನ್ನು ನನ್ನ ರಾಣಿಯನ್ನಾಗಿ ಮಾಡು'' ಎಂದು ಬೇಡಿಕೊಂಡನು.

ತಿಮ್ಮರಸನು ಸುಮ್ಮನಾದನು. ಕೆಲ ಕಾಲದ ತರುವಾಯ ನರಸಿಂಹ ರಾಯನ ಮಗಳನ್ನು ಕೃಷ್ಣದೇವರಾಯನಿಗೆ ತೆಗೆದುಕೊಳ್ಳುವದಾಗಿ ತಿಮ್ಮರ ಸನೇ ಮೊದಲ್ಗೊಂಡು ಅಮಾತ್ಯರೆಲ್ಲರೂ ನಿಶ್ಚಯಿಸಿದರು. ವಿವಾಹ ಕಾಲವು ಸಮೀಪಿಸಿತು. ಆಗ ಕೂಡಲೇ ತಿಮ್ಮರಸನು ಚಿನ್ನಮ್ಮನನ್ನೂ ಲಗ್ನ ಮಂಟ ಪಕ್ಕೆ ಕರೆಸಿ ಅವಳನ್ನೂ ರಾಯನಿಗೆ ಕೊಡಿಸಿ ಏಕಕಾಲಕ್ಕೆ ಲಗ್ನ ಮಾಡಿಸಿ ಬಿಟ್ಟನು. ಇವಳಾರು ? ಏನು ? ಎಂಬುದಾವುದೂ ದರಬಾರದ ಮುಖ್ಯ ರಿಗೆ ವಿಚಾರಿಸಲು ಆಸ್ಪದ ದೊರೆಯದಂತೆ ಈ ಸಮಾರಂಭವು ಜರುಗಿ ಹೋಯಿತು.

ಒಟ್ಟು ಕೃಷ್ಣದೇವರಾಯನಿಗೆ ನಾಲ್ಕು ಜನ ರಾಣಿಯರಿದ್ದರು. ಆದರೂ ಎಲ್ಲರಿಗಿಂತ ಇವಳಲ್ಲಿ ಅಗಾಧವಾದ ಪ್ರೇಮುವನ್ನಿಟ್ಟಿದ್ದನು. ಇವಳಿಗೆ ನಾಗ ಲಾಂಬಿಕೆಯೆಂದು ಕರೆದನು. ನಾಗಲಾಂಬಿಕೆಗಾಗಿ ಒಂದು ಭವ್ಯವಾದ ಸುಂದರವಾದ ಅರಮನೆಯನ್ನೇ ಕಟ್ಟಿಸಿಕೊಟ್ಟನು. ಇಷ್ಟಕ್ಕೇ ತೃಪ್ತನಾಗದೆ ವಿಜಯನಗರದ ಸನಿಯದಲ್ಲಿ ಒಂದು ಅತ್ಯಂತ ಸುಂದರವಾದ ನಗರವನ್ನು ನಿರ್ಮಿಸಿದನು. ಅಲ್ಲಿ ತನಗಾಗಿ ತನ್ನ ರಾಣಿಯರಿಗಾಗಿ ಅರಮನೆಗಳನ್ನು ಕಟ್ಟಿಸಿದನು. ರಾಜ್ಯದ ಸೇನಾಧಿಕಾರಿಗಳಿಗೂ ಸರದಾರರಿಗೂ ಅಮಾತ್ಯ ರಿಗೂ ಸಿರಿವಂತರಿಗೂ ಅಲ್ಲಿ ಮನೆ ಕಟ್ಟಿ ವಾಸಿಸಲು ಆಜ್ಞೆ ವಿಧಿಸಿದನು. ಈ ಅತ್ಯಂತ ಸುಂದರವಾದ ನಾಗಲಾಪುರದ ರಾಜಬೀದಿಯು ೪೭ ಹೆಜ್ಜೆ (ಸುಮಾರು ೧¾ಕಾಲು ಮೈಲು) ಉದ್ದ ೪೦ ಹೆಜ್ಜೆ ಅಗಲವೂ ಇದ್ದಿತೆಂದು ಅದರ ಎಡಬಲದಲ್ಲಿಯ ಪ್ರಸಾದಗಳು ವಿಜಯನಗರದ ಕಟ್ಟಡವನ್ನು ಹೋಲುತ್ತಿದ್ದವೆಂದು ನ್ಯೂನಿಜ್ಜನು ಬಣ್ಣಿಸುತ್ತಾನೆ. ನಾಗಲಾಪುರವೇ ಈಗಿನ ಹೊಸಪೇಟೆ.

ಇರಲಿ. ಗೋವಾದಿಂದ ಪೋರ್ಚುಗೀಜ ಇಂಜನೀಯರನ್ನು ಕರೆಸಿ ತುಂಗಭದ್ರಾ ನದಿಯಿಂದ ಕಾಲುವೆಗಳನ್ನು ಕಡಿಸಿ ಒಂದು ವಿಶಾಲವಾದ

ಸರೋವರವನ್ನು ರಾಜನು ನಿರ್ಮಿಸಿದನು. ನಾಗಲಾಪುರಕ್ಕೆ ನೀರಿನ ಪೂರೈಕೆಯೂ ಆಯಿತು. ಸುತ್ತಲಿನ ಭೂಮಿಗೆ ನೀರುಣ್ಣಿಸಿ ಫಲಪ್ರದವಾದ ಹೊಲ ತೋಟ ಗದ್ದೆಗಳನ್ನು ಮಾಡಲು ರೈತರನ್ನು ಮುಂದೆ ಕರೆದನು. ಬರಡು ಭೂಮಿಯನ್ನು ಭೂರಹಿತ ರೈತರಿಗೆ ಹಂಚಿದನು. ವರುಷದಲ್ಲಿ ಈ ಎಲ್ಲ ಭೂಮಿಯನ್ನು ಫಲವತ್ತನ್ನಾಗಿ ಮಾಡಬೇಕೆಂದೂ ಅಲ್ಲಿಯ ವರೆಗೆ ತೆರಿಗೆ ಮೊದಲಾದವುಗಳನ್ನು ಸರಕಾರವು ಕೇಳುವದಿಲ್ಲವೆಂದೂ ಆಜ್ಞೆ ವಿಧಿಸಿದನು. ಈ ನಾಗಲಾಪುರದಿಂದ ೨೦ ಸಾವಿರ ವರಹದಷ್ಟು ಅಕ್ಕಿ ಉತ್ಪನ್ನವು ಕೃಷ್ಣ ದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ಬರುತ್ತಿತ್ತೆಂದು ನ್ಯೂನಿಜ್ಜನು ಬರೆದಿದ್ದಾನೆ

೫೫

## ನಾಗಲಾಪುರದ ನಾಶ

ಕೃಷ್ಣದೇವರಾಯನಿಗೆ ವಯಸ್ಸು ಆಗಿತ್ತು. ತಳಹೊಟ್ಟೆಯಲ್ಲಿ ಶೂಲಿ ಗಳುಬರತೊಡಗಿದವು. ಬಹುಶಃ ವಿಜಯನಗರದ ಎಲ್ಲ ರಾಜರು ತಳಹೊಟ್ಟೆ ಶೂಲೆಯಿಂದಲೇ ಸತ್ತಿದ್ದಾರೆ. ಕೃಷ್ಣದೇವರಾಯನು ತನ್ನ ಅವಸಾನಕಾಲವು ಸಮೀಪಿಸಿತೆಂದು ತಿಳಿದನು. ಅವನಿಗಂತೂ ಗಂಡು ಮಕ್ಕಳು ಪ್ರಬುದ್ಧರಿರಲೇ ಇಲ್ಲ. ಇದ್ದೇ ಈಗ ಒಂದು ೧೮ ತಿಂಗಳದಿದ್ದಿತು. ತನ್ನ ತರುವಾಯ ಯಾರನ್ನು ಪಟ್ಟದ ಮೇಲಿರಿಸಬೇಕೆಂದು ಬಹಳ ಯೋಚಿಸಿದನು. ತನ್ನ ಎಲ್ಲ ತಮ್ಮಂದಿರನ್ನು ಚಂದ್ರಗಿರಿಗೆ ಕಳಿಸಿಅಲ್ಲಿ ಸೆರೆಮನೆಯಲ್ಲಿಟ್ಟಂತೆ ಇಟ್ಟು ಬಿಟ್ಟಿದ್ದನು. ಅವರೊಡನೆ ಕೃಷ್ಣದೇವರಾಯನ ತಂಗಿಯ ಮಗನೂ ಇದ್ದನು. ಅಂದರೆ ಬುಜಬಲರಾಯನ ಮಗ ಅಚ್ಯುತರಾಯನನ್ನು ಪಟ್ಟಕ್ಕೆ ತರಬೇಕೆಂದು ಮೃತ್ಯುಪತ್ರವನ್ನು ಬರೆಸಿದನು.

ಕೃಷ್ಣದೇವರಾಯನ ತರುವಾಯ ಅಮಾತ್ಯರು ಚಂದ್ರಗಿರಿಯಿಂದ ಅಚ್ಯುತರಾಯನನ್ನು ಕರೆಸಿ ವಿಜಯನಗರದ ಸಿಂಹಾಸನದಲ್ಲಿ ಇರಿಸಿದರು. ಆದರೆ ಇವನು ಬಹಳ ಅಂಜುಬುರುಕನು ನೀಚನೂ ಕ್ರೂರನೂ ಸವಾ

ಯ ಲಂಪಟನೂ ಆಗಿದ್ದನು. ಅಪ್ರಮಾಣಿಕತನದ ಮತ್ತು ಕೀಳುತರಗತಿಯ ಮನೋಭಾವ ಮತ್ತು ರುಚಿಯಲ್ಲಿ ಲೀನನಾಗಿದ್ದನು. ಅದರಿಂದ ಪ್ರಜೆಗಳೂ ಸರದಾರರೂ ಮಂತ್ರಿಗಳು ಬೇಸತ್ತು ಹೋಗಿದ್ದರು. ಅಚ್ಚುತರಾಯನ ದೌರ್ಬಲ್ಯವನ್ನು ಕೇಳಿ ಬಿಜಾಪುರದ ಸುಲ್ತಾನನು ಸೈನ್ಯಸಮೇತ ಬಂದನು. ವಿಜಯನಗರದ ವರೆಗೆ ಬಂದರೂ ಸಹ ರಾಯನು ಅರಮನೆ ಬಿಟ್ಟು ಹೊರಡಲಿಲ್ಲ. ಬಲಾಢ್ಯವಾದ ಸೈನ್ಯವು ವಿಜಯನಗರದಲ್ಲಿತ್ತು. ಸೇನಾಪತಿಯು ಯುವನರ ಮೇಲೆ ದಂಡೆತ್ತಿ ಹೋಗಲು ಅಪ್ಪಣೆ ಕೇಳಿದನು. "ಛೆ, ಛೆ, ಬೇಡ ಬೇಡ ಅವರೊಡನೆ ಯುದ್ಧ ಬೇಡ ಏನು ಬೇಕಾದರೂ ಮಾಡಿಕೊಂಡು ಹೋಗಲಿ ಸುಮ್ಮನೇ ಭದ್ರವಾಗಿರಿ" ಎಂದು ಅಂಜಿಕೆಯಿಂದ ನಡುಗುತ್ತ ನುಡಿದನು.

ಸುಲ್ತಾನನು ನಾಗಲಾಪುರವನ್ನು ಹೊಕ್ಕು ಅವನಿಗೆದುರಾಗಿ ಯಾರೂ ಬರಲಿಲ್ಲ. ಇಡೀ ನಗರವನ್ನು ಕೆಡವಿ ನೆಲಸಮಮಾಡಿಬಿಟ್ಟನು. ಧನಕನಕ ವಜ್ರವೈಢೂರ್ಯಗಳಲ್ಲದೇ ಸಿಕ್ಕದ್ದೆಲ್ಲವನ್ನೂ ಬಳೆದುಕೊಂಡು ಬಿಟ್ಟನು. ಅಚ್ಚುತರಾಯನು ಸಂಧಿಕರನ್ನು ಕಳಿಸಿ ಒಪ್ಪಂದಕ್ಕೆ ಕಳಿಸಿದನು. ಸುಲ್ತಾನನು ಸಂತೋಷದಿಂದ ಒಪಂದ್ಪ ಮಾಡಿಕೊಂಡು ತೆರಳಿದನು. ಇದರಿಂದ ಅಚ್ಚುತರಾಯನು ಪ್ರತಿವರುಷ ೧ ಲಕ್ಷ ೫೦ ಸಾವಿರ ವರಹ ಉತ್ಪನ್ನ ತರುವಂಥ ರಾಯಚೂರ ಕೋಟೆ ಮತ್ತು ಸುತ್ತುಮುತ್ತಲಿನ ಪ್ರದೇಶವನ್ನು ಬಿಟ್ಟುಕೊಡಬೇಕು. ಮತ್ತು ಹತ್ತು ಲಕ್ಷ ಬಂಗಾರದ ಮೊಹರುಗಳನ್ನು ಪ್ರತಿವರುಷವು ಕಪ್ಪ ಕಳಿಸುತ್ತ ಹೋಗಬೇಕು ಎಂದು ಕರಾರಾಯಿತು.

ಇದು ರಾಜ್ಯದ ಎಲ್ಲ ನಾಯಕರಿಗೂ ಸೈನ್ಯಾಧಿಕಾರಿಗಳಿಗೂ ಸರದಾರರಿಗೂ ಮಂತ್ರಿಗಳಿಗೂ ಬೇಡಾದ ಕರಾರಾಗಿದ್ದಿತು. ಇವರನ್ನೆಲ್ಲರನ್ನೂ ರಾಯನು ಹೊರಹಾಕಿದನು. ಕೆಲವರನ್ನು ತಾನೇ ಖಡ್ಗದಿಂದ ಕೊಂದನು ಕೃಷ್ಣದೇವರಾಯನು ಗಳಿಸಿದ ಎಲ್ಲ ರಾಜ್ಯವನ್ನೂ ಸಂಪತ್ತನ್ನೂ ಜನರನ್ನೂ ಕಳೆದುಕೊಂಡು ತೀರ ಸಾಮಾನ್ಯ ನಾಯಕನಂತೆ ಬಾಳತೊಡಗಿದನು.



## ೬

### ರಾಜನ ಬಾಳು ಮತ್ತು ವಿಹಾರಗಳ ವಿವರಣೆಃ—

ಅರಮನೆಯಲ್ಲಿ ರಾಜನು ಉಪಯೋಗಿಸುವ ವಸ್ತುಗಳೆಲ್ಲವೂ ಬೆಳ್ಳಿ ಬಂಗಾರದಿಂದ ಮಾಡಿದ್ದುವಾಗಿರುವವು. ತಾಟು, ಬಟ್ಟಲುಗಳು ಹರಿವಾಣ ತಬಕ ತಂಬಿಕೆ ಥಾಲಿಗಳು ಚಂಬು ಮೊದಲಾದವುಗಳೆಲ್ಲವೂ ಬಂಗಾರದವು. ಚಿಕ್ಕಪುಟ್ಟ ಆಸನಗಳು ಬೆಳ್ಳಿಯಿಂದ ಮಾಡಿರುವರು ಅರಮನೆಯಲ್ಲಿಯು ಶಯನಗೃಹಗಳು ಒಬ್ಬೊಬ್ಬ ರಾಣಿಗೆ ಒಂದೊಂದರಂತೆ ಇರುವವು. ರಾಣಿ ಮಲಗುವ ಪರ್ಯಂಕವು ಬೆಳ್ಳಿಯದಿದ್ದು ಅವುಗಳ ಕಾಲುಗಳು ಬಂಗಾರದವಿರುವವು. ರಾಜನು ಪ್ರತ್ಯೇಕ ಅರಮನೆಯಲ್ಲಿರುವನು. ಅವನು ಮಲಗುವ ಮಂಚವು ಬಂಗಾರದ್ದಿರುವದು. ರಾಣಿರಾಜರ ಎಲ್ಲ ಪರ್ಯಂಕಗಳೂ ರೇಶಿಮೆಯ ಆಚ್ಛಾದನೆಯು ಹಂಸತೂಲಿಕಾ ಗಾದೆಯ ಮೇಲೆ ಶೋಭಿಸುವದು. ಆಚ್ಛಾದನೆಯ ಅಂಚಿಗೆ ಅಂದರೆ ನಾಲ್ಕೂ ಕಡೆಗೆ ಮುತ್ತಿನ ಗೊಂಚಲಗಳು ಗುಚ್ಛಗಳನ್ನೂ ಹೆಣೆದಿರುವರು. ಪ್ರತಿಯೊಂದು ಮಂಚಕ್ಕೂ ಒಂದು ಮಚ್ಛರದಾನಿಯಿರುವದು ಅದನ್ನು ರೇಶಿಮೆಯ ದಾರದಿಂದ ಹೆಣೆದಿರುವರು. ಅದಕ್ಕೆ ಬೆಳ್ಳಿಯ ಸಲಾಕೆಯಿಂದ ಮಾಡಿದ ಮೊಗಲ ಕಲಾಪದ್ಧತಿಯ ಗುಮ್ಮಟದಂತೆ ಆಕಾರದ್ದಿರುವದು.

ರಾಜನಿಗೆ ಅಸಂಖ್ಯಾತ ಪತ್ನಿಯರಿರುವರು. ರಾಜನ ವೈಭವ ಮತ್ತು ಪೌರುಷದ ಘನತೆಯು ಅವನಿಗಿರುವ ರಾಣಿಯರ ಸಂಖ್ಯೆಯ ಮೇಲೆ ಎಣಿಸಲ್ಪಡುವದು. ರಾಜನು ಎಲ್ಲ ರಾಣಿಯರೊಡನೆ ವಾಸಿಸುವನು, ವಿಹರಿಸುವನು ಮಲಗುವನು ವಿಹಾರಾರ್ಥವಾಗಿ, ಬೇಟೆಗಾಗಿ, ಅಥವಾ ಯುದ್ಧರಂಗಕ್ಕೆ ಹೋಗುವಾಗ ರಾಣಿಯರಲ್ಲಿ ಕೆಲವರನ್ನು ಕರೆದೊಯ್ಯುವನು. ರಾಣಿಯ

ರೆಲ್ಲರೂ ಒಬ್ಬೊಬ್ಬರು ಒಂದೊಂದು ಪಲ್ಲಕ್ಕಿ (ಮೇಣೆ)ಯಲ್ಲಿ ಬರುವಳು. ಪಟ್ಟದ ರಾಣಿಯಂತೂ ರಾಜನೊಡನೇ ಅವನೆಲ್ಲಿ ಹೋದರೂ ಇರಲೇಬೇಕು. ಅವಳ ಪಲ್ಲಕ್ಕಿಯು ಕೆಂಪು ಬಣ್ಣದ ದಪ್ಪನ್ನ ರೇಶಿಮೆಯ ವಸ್ತ್ರದಿಂದ ಆಚ್ಛಾದಿತವಾಗಿರುವದು. ಈ ವಸ್ತ್ರದ ನಾಲ್ಕೂ ಅಂಚುಗಳ ಸುತ್ತಲೂ ದೊಡ್ಡ ದೊಡ್ಡ ಅಗಣಿತ ಬೆಲೆಯುಳ್ಳ ಮುತ್ತಿನಗುಚ್ಛಗಳಿಂದ ಹೆಣೆದುಬಿಟ್ಟಿರುವರು ಪಲ್ಲಕ್ಕಿಯ ದಂಡಿಯು ಬಂಗಾರದ ತಗಡಿನಿಂದ ಮುಚ್ಚಿಕೊಂಡಿದ್ದು ಶೋಭಿಸುತ್ತಿರುವದು ಇದೇ ತರದ ಪಲ್ಲಕ್ಕಿಯಲ್ಲಿ ರಾಜನು ಸಹ ಕುಳಿತಿರುವನು. ರಾಜನ ಪಲ್ಲಕ್ಕಿಯ ಎಡಕ್ಕೆ ಪಟ್ಟದರಸಿಯ ಪಲ್ಲಕ್ಕಿ ಇರುವದು. ಇವೆರಡರ ಹಿಂದೆ ಮುಂದೆ ಸುತ್ತಲೂ ಉಳಿದ ರಾಣಿಯರ ಪಲ್ಲಕ್ಕಿಗಳಿರುವವು. ಅವುಗಳಿಗೆ ಬೆಳ್ಳಿಯ ತಗಡನ್ನು ಹೊಡೆದಿರುವರು.

ರಾಜನ ಅರಮನೆಯು ಅತ್ಯಂತ ವಿಶಾಲವಾದದ್ದಿರುವದು. ಅದೊಂದು ಚಿಕ್ಕ ಚಿಕ್ಕ ಅರಮನೆಗಳ ಗುಂಪೇ ಎಂದು ಅಂದರೂ ಅನ್ನಬಹುದು. ಒಂದೊಂದು ಚಿಕ್ಕ ಅರಮನೆಯಲ್ಲಿ ಒಬ್ಬೊಬ್ಬ ರಾಣಿಯು ವಾಸಿಸುತ್ತಾಳೆ. ರಾಜನು ತನ್ನ ಅರಮನೆಗೆ ಹೋಗುವಾಗ ಎಲ್ಲ ರಾಣಿಯರ ವಸತಿಯ ಬಾಗಿಲ ಮುಂದೆ ಹಾದೇ ಹೋಗಬೇಕಾಗುವದು. ಎಲ್ಲ ಅರಮನೆಗಳ ಗುಂಪಿಗೇನೇ ಬಹುದೊಡ್ಡ ಆಚ್ಛಾದನೆಯಿರುವದು. ಪ್ರತಿಯೊಬ್ಬ ರಾಣಿಗೂ ಅನೇಕಮಂದಿ ದಾಸಿಯರಿರುವರು. ರಾಜನು ತನ್ನ ಸೇವೆಗಾಗಿ ದಾಸಿಯರನ್ನೇ ನಿಯಮಿಸಿಕೊಂಡಿರುತ್ತಾನೆ. ಈ ಎಲ್ಲ ದಾಸಿಯರು ಅತ್ಯಂತ ಲಾವಣ್ಯವತಿಯರಾಗಿದ್ದಾರೆ. ಅರಮನೆಯಲ್ಲಿ ಮತ್ತು ಹೊರಗಿನ ಕೆಲಸಗಳಿಗಾಗಿ ಶಿಖಂಡಿಗಳು ನಿಯಮಿಸಲ್ಪಟ್ಟಿದ್ದಾರೆ. ರಾತ್ರಿ ವಿಶ್ರಾಂತಿಗಾಗಿ ರಾಜನು ಶಯ್ಯಾಗಾರಕ್ಕೆ ತೆರಳುವಾಗ ಎಲ್ಲ ರಾಣಿಯರೂ ತಮ್ಮ ತಮ್ಮ ಚಿಕ್ಕ ಅರಮನೆಯ ಬಾಗಿಲಿಗೆ ನಿಂತು ಇಂದು ತಮ್ಮಲ್ಲಿ ಮಲಗಿ ವಿಶ್ರಮಿಸಬೇಕೆಂದು ಕರೆಯುತ್ತಾರೆ. ರಾಜನು ತನ್ನ ಮನಸ್ಸಿಗೆ ತೋಚಿದವಳಲ್ಲಿ ಹೋಗುತ್ತಾನೆ ಅಥವಾ ನೇರವಾಗಿ ಏಕಾಂತದಲ್ಲಿ ವಿಶ್ರಮಿಸಲು ಒಬ್ಬನೇ ತೆರಳುತ್ತಾನೆ. ಆದರೆ ಇವರೆಲ್ಲರೂ ಮುಖ್ಯ ರಾಣಿಯರಲ್ಲ. ಮುಖ್ಯ ರಾಣಿಗೂ ಪ್ರತಿಯೊಬ್ಬ ರಾಣಿಗೂ ಒಂದೊಂದು ಪ್ರತ್ಯೇಕ ಅರಮನೆಗಳಿರುತ್ತವೆ.

ಕುದುರೆಯ ಸವಾರಿ ಮಾಡಿಕೊಂಡು ರಾಜನು ಹೊರಹೊರಟರೆ ಆವನೊಡನೆ ಎರಡು ಕುದುರೆ ಸವಾರರು ಅವನ ಅಂಗರಕ್ಷಕರಾಗಿ ತೆರಳುತ್ತಾರೆ. ಅವರಿಗೆಲ್ಲ ದೊಡ್ಡ ಪ್ರಮಾಣದ ವೇತನ ಇರುತ್ತದೆ. ನೂರು ಆನೆಗಳು ಅನೇಕ ಸೈನ್ಯಾಧಿಕಾರಿಗಳೂ ಹೊರಡುತ್ತಾರೆ. ದೊಡ್ಡ ದೊಡ್ಡ ಸರದಾರರೂ ಆಗಿರುವ ಎರಡು ಸಾವಿರ ಯೋಧರು ಇವನ ಹಿಂದೆ ಇರುತ್ತಾರೆ. ಎಲ್ಲಕ್ಕೂ ಮುಂದೆ ೩೦ ಕುದುರೆ ಸವಾರರನ್ನೊಳಗೊಂಡು ಮಾರ್ಗದರ್ಶಕ ತಂಡವು ಕೈಯಲ್ಲಿ ಚಿಕ್ಕ ಬೆತ್ತದ ದಂಡವನ್ನು ಹಿಡಿದುಕೊಂಡು ಸಾಗಿರುತ್ತಾರೆ. ಈ ಗುಂಪಿನ ಮುಖ್ಯಸ್ಥನು ಹಿಡಿದುಕೊಂಡಿರುವ ದಂಡವು ಬೇರೆ ಬಣ್ಣದ್ದಿರುತ್ತದೆ. ಇವನಿಗೆ ಚಿನ್ನಪ್ಪನಾಯಕನೆಂದು ಹೆಸರು. ಇವರ ಹಿಂದೆ ನಡೆದ ೨೫ ಕುದುರೆ ಸವಾರರು ಉನ್ನತವಾದ ದಂಡದ ತಾಮ್ರಧ್ವಜವನ್ನು ಹಿಡಿದುಕೊಂಡು ಸಾಗಿರುತ್ತಾರೆ. ಅವರ ಜೊತೆಗೆ ನಗಾರಿ ನೌಬತ್ತು ತುತೂರಿ ಕಹಳೆ ಮದ್ದಲಿ, ತಾಳ ಮೊದಲಾದ ವಾದ್ಯಗಳು ಮುಗಿಲನ್ನು ಹರಿದೊಗೆಯುವವೋ ಎಂಬ ಶಬ್ದ ಮಾಡುತ್ತಾ ಸಾಗಿರುವದು. ರಾಜನು ಕುದುರೆಯನ್ನೇರುವ ಮೊದಲು ಎರಡು ನೂರು ಕುದುರೆ ಸವಾರರನ್ನೂ ನೂರು ಆನೆಯ ಮೇಲೇರಿದ ಸಿರಿವಂತರನ್ನೂ ಮತ್ತು ತನ್ನ ರಕ್ತಸಂಬಂಧಿಕರನ್ನೂ ಉಳಿದ ಅಂಗರಕ್ಷಕರನ್ನೂ ನೋಡುತ್ತಾನೆ. ಯಾರುಬಂದಿರದೇ ಮನೆಯಲ್ಲಿ ಉಳಿಯುವರೋ ಅವರು ಶಿಕ್ಷೆಗೆ ಗುರಿಯಾಗುತ್ತಾರೆ.

## ೭

ರಾಜವಂದನೆ ಮೊದಲಾದವುಗಳ ವಿವರ—

ಮುಂಜಾನೆ ರಾಣಿವಾಸದಿಂದ ರಾಜನು ಸುಮಾರು (ಹತ್ತು ಹನ್ನೊಂದು ಗಂಟೆಯ ಹೊತ್ತಿಗೆ) ಮೂರು ಪ್ರಹರವಾದ ಕೂಡಲೇ ಹೊರಗೆ ಬಂದು ಒಂದು ಅತ್ಯಂತ ಸುಂದರವಾದ ಆಸನದಲ್ಲಿ ಕುಳಿತುಕೊಳ್ಳುತ್ತಾನೆ. ಅವನ ಎಡಬಲದಿಂದ ತುಸು ತುಸು ಅಂತರಬಿಟ್ಟು ದ್ವಾರದವರೆಗೆ ಹತ್ತುಹನ್ನೆರಡು ಮಂದಿ ಭಟ್ಟಂಗಿಗಳು ನಿಂತಿರುತ್ತಾರೆ. ಹೊರಗಿನ ವಿಶಾಲವಾದ ಭವನದಲ್ಲಿ

ನಗರದ ಅಥವಾ ರಾಜ್ಯದ ಪ್ರತಿಷ್ಠಿತರೂ ನಾಯಕರೂ ಮಾಂಡಲೀಕರೂ ಸರದಾರರೂ ಆದವರು ಅಂದು ರಾಜನಿಗೆ ವಂದನೆಯನ್ನರ್ಪಿಸಲು ಕಾದು ನಿಂತಿರುತ್ತಾರೆ. ದ್ವಾರದ ಬಾಗಿಲನ್ನು ತೆರೆದಕೂಡಲೇ ಒಬ್ಬೊಬ್ಬರೇ ಒಳ ಹೋಗಿ ರಾಜನಿಗೆ ವಂದನೆಯನ್ನರ್ಪಿಸಬೇಕು. ಅವನು ಹೋಗುತ್ತಿರುವಾಗಲೇ ಭಟ್ಟಂಗಿಗಳು "ಮಹಾರಾಜ... ಜಯವಾಗಲಿ ನಿಮ್ಮ ರಾಜ್ಯದ ಇಂಥವರು ಈಗ ನಿಮಗೆ ವಂದನೆಯನ್ನರ್ಪಿಸುತ್ತಾರೆ" ಎಂದು ಉಚ್ಚಸ್ವರದಲ್ಲಿ ಘೋಷಿಸುವನು. ಅಂಥವನು ಬಂದು ರಾಜನೆದುರು ನಿಂತು ವಿನಯದಿಂದ ಶಿರಬಾಗಿಸಿ ಕೈಗಳನ್ನು ಮೇಲೆತ್ತಿ ವಂದಿಸಿ ತೆರಳಬೇಕು. ಇವನು ದ್ವಾರವನ್ನು ದಾಟಿ ಹೋದ ಮೇಲೆ ಮತ್ತೊಬ್ಬನು ಬರುವನು. ಈ ಪ್ರಕಾರ ವಂದನೆ ಸಮಾರಂಭವು ನಡೆಯುವದು.

ರಾಜನ ಪರಿವಾರದಲ್ಲಿ ಸರದಾರರು ಸೈನಿಕರು ಚೋಪದಾರರೇ ಮೊದಲಾದವರು ಮಾಂಸಾಹಾರಿಗಳೂ ಶಾಖಾಹಾರಿಗಳೂ ಇದ್ದಾರೆ. ಆದರೆ ಎತ್ತಿನ ಮತ್ತು ಆಕಳ ಮಾಂಸವನ್ನು ಯಾರೂ ತಿನ್ನುವದಿಲ್ಲ. ಏಕೆಂದರೆ ಈ ರಾಜ್ಯದಲ್ಲಿ (ವಿಜಯನಗರದಲ್ಲಿ) ಎತ್ತನ್ನೂ, ಆಕಳನ್ನೂ ದೇವರ ಅಂಶವೆಂದು ಎಲ್ಲರೂ ಪೂಜಿಸುತ್ತಾರೆ. ಕುರಿ, ಹಂದಿ, ಚಿಗರಿ, ತಿತ್ತಿರೀಪಕ್ಷಿ, ಮೊಲ, ಅಂಡುಬಾತಕೋಳಿ, ಹಂಸ, ಇಣಚಿ ಮೊದಲಾದವುಗಳ ಮಾಂಸವನ್ನು ಅಡಿಗೆಯಲ್ಲಿ ರಾಜನು ಮೊದಲ್ಗೊಂಡು ಎಲ್ಲರೂ ಉಪಯೋಗಿಸುತ್ತಾರೆ. ಆದರೆ ಪೇಟೆಯಲ್ಲಿ ಯಾವ ಜೀವಿಯ ಮಾಂಸವೂ ಮಾರಲು ಸಿಗುವದಿಲ್ಲ. ಇವೆಲ್ಲವುಗಳನ್ನು ಸಜೀವವಾಗಿಯೇ ಮಾರುತ್ತಾರೆ. ತಮಗೆ ಅಂದು ಬೇಕಾದ ಪಕ್ಷಿ ಅಥವಾ ಮೃಗವನ್ನು ತಂದು ಮನೆಯಲ್ಲಿಯೇ ಕಡಿದು ಭಕ್ಷ್ಯ ಭೋಜ್ಯಗಳನ್ನು ತಯಾರಿಸಿ ತಿನ್ನುವ ಪರಿಪಾಠವು ಈ ರಾಜ್ಯದಲ್ಲಿದೆ. ಇದಲ್ಲದೇ ಪೇಟೆಯಲ್ಲಿ ಅನೇಕ ತರದ ಫಲಗಳು ಸಿಗುತ್ತವೆ. ದ್ರಾಕ್ಷೀಹಣ್ಣು. ಕಿತ್ತಳೆ, ಅಂಜೂರಿ, ದಾಳಿಂಬೆ, ಮಾವಿನಹಣ್ಣು, ಪೇರು ಮೊದಲಾದವುಗಳು ಹೇರಳವಾಗಿರುವದಲ್ಲದೇ. ಅತ್ಯಂತ ಸುಲಭ ಬೆಲೆಗೆ ಮಾರುವದು. ರಾಜನು ನೀರು ಕುಡಿಯುತ್ತಾನೆ. ಅವನಿಗಾಗಿ ಇರುವ ಭಾವಿಯು ಅಚ್ಛಾದಿತವಾಗಿ ಮೊಹರ ಬಂದು ಮಾಡಿರುತ್ತಾರೆ. ಅದನ್ನು ಕಾಯಲು ಭದ್ರವಾದ ಕಾವಲಿ

ರುತ್ತದೆ. ಅತ್ಯಂತ ವಿಶ್ವಾಸಿಕನಾದ ರಾಜದೂತನು ಸ್ವತಃ ಬಂದು ನೀರನ್ನು ಹೂಜೆಗಳಲ್ಲಿ ತುಂಬಿಕೊಂಡು ಹೋಗಿ ಅರಮನೆಯ ದಾಸಿಯರಿಗೆ ಕೊಡುತ್ತಾನೆ. ದಾಸಿಯರು ರಾಣಿಯರಿಗೆ ನೀರಿನ ಹೂಜೆಗಳನ್ನು ಮುಟ್ಟಿಸುತ್ತಾರೆ. ರಾಣಿಯರು ನೀರನ್ನೂ ತಮ್ಮ ಸ್ವಾಧೀನದಲ್ಲಿಟ್ಟುಕೊಂಡು ಸ್ವಹಸ್ತದಿಂದ ರಾಜನಿಗೆ ಕುಡಿಯಲು ಕೊಡುತ್ತಾರೆ.

ವಿಜಯನಗರದ ಅರಸರು ಯಾರಾದರೊಬ್ಬರಿಗೆ ಅತ್ಯಂತ ಶ್ರೇಷ್ಠವಾದ ಮಾನಮರ್ಯಾದೆಯನ್ನು ಮಾಡಬೇಕೆಂದು ಇಚ್ಛಿಸಿದರೆ ಅವನಿಗೆ ಎರಡು ಚಾಮರಗಳನ್ನು ಕೊಡುವರು. ಅವು ಕಾಡಾಕಳಿನ ಬಿಳೀ ಕೂದಲಿನಿಂದ ಮಾಡಿದ್ದು ಬಂಗಾರದ ಹಿಡಿಕೆಯಿಂದ ಯುಕ್ತವಾದದ್ದಿರುವವು ವಜ್ರ ವೈಢೂರ್ಯ ಪಚ್ಚ ಮಾಣಿಕ್ಯ ಮೊದಲಾದವುಗಳನ್ನು ಅಲ್ಲಿ ಕೆತ್ತಿರುವರು. ಸರದಾರರು ಅತ್ಯಂತ ಉನ್ನತವಾದ ಮಾನಮರ್ಯಾದೆಯನ್ನು ತೋರಬೇಕೆಂದಿದ್ದರೆ ಅವರು ರಾಜನ ಪಾದಗಳ ಮೇಲೆ ಮಸ್ತಕವನ್ನಿಟ್ಟು ನಮಸ್ಕರಿಸುವರು. ರಾಜನು ಅತ್ಯಂತ ಕೃಪಾಕಟಾಕ್ಷಕ್ಕೆ ಪಾತ್ರರಾದ ಸರದಾರರಿಗಾಗಲೀ ಸೈನಿಕರಿಗಾಗಲೀ ದಾಸದಾಸಿಯರಿಗಾಗಲೀ ತನ್ನ ಮೈಮೇಲಿನ ಅಗಣಿತ ಬೆಲೆಬಾಳುವ ಶಾಲನ್ನು ಕೊಡುತ್ತಾನೆ.

ನವರಾತ್ರಿ ಹಬ್ಬವು ಬಹು ವಿಜೃಂಭಣೆಯಿಂದ ಆಚರಿಸಲ್ಪಡುವದು. ರಾಜ್ಯದ ಸೇನಾಪತಿಗಳೂ ನಾಯಕರೂ ದುರ್ಗದಂತೆ ತೋರುವ ಕೃತ್ರಿಮ ಮಂದಿರಗಳನ್ನು ಕಟ್ಟಿಕೊಂಡು ಅರಮನೆಯ ಎದುರಿಗೆ ಇಡುವರು. ಒಂದರಲ್ಲಿ ನರ್ತಕೀಯರು, ಮತ್ತೊಂದರಲ್ಲಿ ವಾದ್ಯದವರು, ಇನ್ನೊಂದರಲ್ಲಿ ಜಾದೂ ಮಾಡಿ ತೋರಿಸುವಂಥವರು, ಯಂತ್ರಗಾರರೂ ಮಂತ್ರಗಾರರೂ, ಇರುವರು. ದುರ್ಗಗಳು ಬೆಲೆಬಾಳುವ ರೇಶಿಮೆಯ ವಸ್ತ್ರಗಳಿಂದ ಆಚ್ಛಾದಿತವಾಗಿ ಅಲಂಕೃತವಾಗಿರುವವು. ಪ್ರತಿದಿವಸ ರಾತ್ರಿ ರಾಜನು ಅರಮನೆಯ ಎದುರಿಗಿನ ವಿಶಾಲವಾದ ಮೈದಾನದಲ್ಲಿ ಈ ದುರ್ಗಗಳ ಸಮ್ಮುಖದಲ್ಲಿ ಸಿಂಹಾಸನವನ್ನು ಹಾಕಿಕೊಂಡು ಕುಳಿತುಕೊಳ್ಳುತ್ತಾನೆ.

ಇದು ಕೇವಲ ಬಂಗಾರದಿಂದ ಮಾಡಿದ್ದು. ಅಗಣಿತ ಬೆಲೆಬಾಳುವ ವಜ್ರ ವೈಢೂರ್ಯ ಮೊದಲಾದ ಸಕಲ ಹಳಕಲ್ಲುಗಳಿಂದ ಕೆಚ್ಚಿದ್ದಾಗಿರುವದು. ಇದು ಪವಿತ್ರ ಸಿಂಹಾಸನವಾದುದರಿಂದ ನವರಾತ್ರಿ ದಿನಗಳಲ್ಲಿ ಮಾತ್ರ ರಾಜನು ಕುಳಿತುಕೊಳ್ಳುತ್ತಾನೆ. ಉಳಿದ ದಿನಗಳಲ್ಲಿಇದರಲ್ಲಿ ಆಸೀನನಾಗುವದಿಲ್ಲ. ಈ ಸಿಂಹಾಸನದಲ್ಲಿ ಕುಳಿತುಕೊಳ್ಳತಕ್ಕ ರಾಜನು ಸತ್ಯವಂತನೂ, ನೀತಿವಂತನೂ, ಧರ್ಮಿಷ್ಠನೂ ಆಗಿರಬೇಕಾದುದರಿಂದ ಅಚ್ಯುತರಾಯನೇ ಮೊದಲಾದವರು ಇದರ ಮೇಲೆ ಕೂಡ್ರುತ್ತಲೇ ಇರಲಿಲ್ಲ. ಇರಲಿ ನವರಾತ್ರಿ ಮೊದಲನೆಯ ದಿವಸ ೯ಕೋಣ ೯ ಕುರಿ ೯ ಆಡುಗಳನ್ನು ಕಡಿದು ಯಜ್ಞ ಮಾಡುವರು. ಮರುದಿನದಿಂದ ಹೆಚ್ಚೆಚ್ಚು ಕೋಣ, ಕುರಿ, ಆಡು, ಗಳನ್ನು ಕಡಿಯುತ್ತ ಹೋಗುವರು.

ರಾತ್ರಿ ಒಂದೊಂದೇ ದುರ್ಗವು ಆಯಾ ಅಧಿಪತಿಯ ನೇತೃತ್ವದಲ್ಲಿತೆರೆಯುತ್ತ ಹೋಗಿ ಚಮತ್ಕಾರಗಳನ್ನು ತೋರುತ್ತ ವಿನೋದ ವಿಹಾರಾದಿಗಳನ್ನು ಮಾಡುವರು. ಎಲ್ಲಕ್ಕೂ ಮೊದಲು ರಾಜನು ಬಂದು ಕುಳಿತುಕೊಂಡ ಬಳಿಕ ರಾಜ್ಯದ ಸರದಾರರಿಗೂ ಸಕಲ ಸೈನಿಕರೂ ಮಂತ್ರಿಗಳೂ ಮಾಂಡಲೀಕರೂ ಶಿರಿವಂತರೂ ಪ್ರತಿಷ್ಠಿತರೂ ಎಲ್ಲರೂ ಈ ಸಮಾರಂಭಕ್ಕೆ ಬಂದೇ ತೀರಬೇಕು. ಅವರೆಲ್ಲರೂ ಬಂದು ಕುಳಿತಬಳಿಕ ನರ್ತಕಿಯರಿದ್ದ ದುರ್ಗವು ಬಿಚ್ಚಲ್ಪಡುವದು. ಸಹಸ್ರಾರು ಮನಮೋಹಕ ಸುಂದರಿಯರು ಸಕಲ ಸುಮಧುರವಾದ ವಾದ್ಯಸಮೇತವಾಗಿ ರಾಜದರಬಾರದೆದುರು ನರ್ತನ ಮಾಡುವರು. ಅವರ ತರುವಾಯ ಜಾದೂಗಾರರೂ, ಮಂತ್ರಮಾಟದವರೂ ಇನ್ನೂ ಅನೇಕ ತರದ ವಿದ್ಯಾ ಸಂಪನ್ನರೂ ತಮ್ಮ ತಮ್ಮ ವಿದ್ಯೆಯನ್ನು ರಾಜನೆದುರು ತೋರಿಸಿ ಹೊರಟುಹೋಗುವರು.

ಒಂಬತ್ತು ಆಸ್ಥಾನ ಕುದುರೆಗಳೂ ಒಂಬತ್ತು ಆಸ್ಥಾನ ಆನೆಗಳೂ ಸರ್ವಾಲಂಕಾರ ಭೂಷಿತವಾಗಿ ರಾಜನೆದುರು ಬಂದು ನಮಸ್ಕರಿಸುವವು. ರಾಜಪುರೋಹಿತರೂ ಬ್ರಾಹ್ಮಣರೂ ಬಂದುರಾಜನಿಗೂ ಆನೆ ಕುದುರೆಗಳಿಗೂ ತೀರ್ಥವನ್ನು ಪ್ರೋಕ್ಷಿಸಿ ಆಶೀರ್ವದಿಸಿ ತೆರಳುವರು. ಆ ಮೇಲೆ ಸಹಸ್ರಾರು

ದೇವಲೋಕದ ಸುಂದರಿಯರನ್ನು ಹೋಲುವ ತರುಣಿಯರು ತಮ್ಮ ಅನೇಕಾನೇಕ ಭಾವಭಂಗಿಗಳನ್ನು ಪ್ರದರ್ಶಿಸುತ್ತ ನರ್ತನಗೈಯುತ್ತ ರಾಜ ದರಬಾರದವರೆದುರು ಹಾದು ಹೋಗುವರು. ಆ ಮೇಲೆ ಸಕಲ ಸೈನ್ಯದಲ್ಲಿಯ ಕುದುರೆ ಆನೆಗಳ ಜೋಡಿತ್ತಿನ ಪರೇಡ ನಡೆದು ಅವೆಲ್ಲವುಗಳೂ ಹೋಗುವವು. ಅವೇಲೆ ರಾಜನ ೩೬ ಪತ್ನಿಯರು ಸರ್ವಾಲಂಕಾರ ಭೂಷಿತರಾಗಿ ಬಂಗಾರದ ತಾಬಾನಿನಲ್ಲಿ ಬಂಗಾರದ ನೀಲಾಂಜನಗಳನ್ನಿಟ್ಟು ಆರತಿ ಹಚ್ಚಿಕೊಂಡು ಬರುವರು. ಅವರ ಹಿಂದೆ ರಾಜನ ಉಳಿದ ಪತ್ನಿಯರು ಒಂದು ಕೈಯಲ್ಲಿ ದಂಡವನ್ನು ಮತ್ತೊಂದು ಕೈಯಲ್ಲಿ ಉರಿಯುತ್ತಿರುವ ದೀವಟಿಗೆಯನ್ನೂ ಹಿಡಿದುಕೊಂಡು ಅನುಸರಿಸುವರು. ಇವರ ಹಿಂದೆ ರಾಜ ಮನೆತನಗಳಿಗೂ ಅರಮನೆಗಳಿಗೂ ಸೇರಿದ ಸಮಸ್ತ ದಾಸಿಯರೂ ಸ್ತ್ರೀ ಪರಿವಾರ ಇರುವದು. ೩೬ ರಾಣಿಯರು ರಾಜನಿಗೆ ಆರತಿ ಮಾಡಿ ತೆರಳುವರು ಅವರ ನಂತರ ಎಲ್ಲ ಸ್ತ್ರೀಯರೂ ಹೋಗುವರು. ಬಂಗಾರ ಮುತ್ತು ವಜ್ರ ವೈಢೂರ್ಯಗಳ ಆಭರಣಗಳ ರಾಶಿಯನ್ನೇ ಈ ಸ್ತ್ರೀಯರು ಹೊತ್ತಿರುವದರಿಂದ ಅದರ ಒಜ್ಜೆ ತಡೆಯಲಾರದೇ ನಿಧಾನವಾಗಿ ಸಾಗುವರು.

ಆ ಮೇಲೆ ರಾಜನು ಆಸನದಿಂದ ಎದ್ದು ಕುದುರೆಯನ್ನು ಹತ್ತಿ ತನ್ನ ಇಡೀ ಸೈನ್ಯವನ್ನು ಈಕ್ಷಿಸಲು ಸಾಗುತ್ತಾನೆ. ಇದು ಸುಮಾರು ಮೂರು ಹರದಾರಿಯಷ್ಟಾಗಬಹುದು. ಅಲ್ಲಿ ಕುದುರೆಯಿಂದ ಇಳಿದು ವಂದನೆಗಳನ್ನು ಸ್ವೀಕರಿಸಿ ಮನೆಗೆ ಬರುತ್ತಾನೆ. ರಾಜನು ೧೦ನೇ ದಿವಸ ಉಪವಾಸವಿರುತ್ತಾನೆ. ರಾಜ ಮನೆತನದವರೂ ಸರದಾರರೂ ಸೇನಾಪತಿಗಳು ನಾಯಕರೂ ಮಂತ್ರಿಗಳು ಎಲ್ಲರೂ ಉಪವಾಸವಿದ್ದು ಮರುದಿನ ಮುಂಜಾವಿನಲ್ಲಿ ನದಿಗೆ ಹೋಗಿ ಅಲ್ಲಿ ಸ್ನಾನ ಮಾಡಿ ಪಾರಣೀ ಮಾಡುತ್ತಾರೆ. ರಾಜ್ಯದ ಸಕಲ ಮಾಂಡಲೀಕರೂ ವಾರ್ಷಿಕ ಕಪ್ಪುಕಾಣಿಕೆಗಳನ್ನರ್ಪಿಸುವದಲ್ಲದೆ ಒಂಬತ್ತು ದಿವಸಗಳ ಉತ್ಪನ್ನವನ್ನೂ ರಾಜನಿಗೆ ಎಲ್ಲರೂ ಅರ್ಪಿಸುವರು. ರಾಜನ ಅರಮನೆಗಳ ಆವಾರದಲ್ಲಿ ಸುಮಾರು ೩ಸಾವಿರ ಬ್ರಾಹ್ಮಣರು ವಾಸಿಸುತ್ತಾರೆ. ಅವರು ದೇವರ ಪೂಜೆ, ಹೋಮಹವನ, ಮಂತ್ರ ವೇದ ಘೋಷ ಮೊದಲಾದವುಗಳನ್ನಷ್ಟೇ ಮಾಡುವರು. ಅವರಿಗೆ ಸ್ವತಃ ರಾಜನು ವಂದಿಸುವನ

ಲ್ಲದೇ ಅಖಂಡ ಮಾನ ಮರ್ಯಾದೆಗಳನ್ನು ಮಾಡುತ್ತಾನೆ. ಇವರಿಗೆ ಅವನು ಧನಕನಕಗಳ ದಾನ ಮಾಡುವವನಲ್ಲದೇ ರಾಜ್ಯದ ಸಕಲರಿಂದಲೂ ಮಾಂಡಲೀಕರಿಂದಲೂ ನಾಯಕರಿಂದಲೂ ಕೊಡಿಸುತ್ತಾನೆ. ಆದುದರಿಂದ ಆ ಬ್ರಾಹ್ಮಣರು ಅತ್ಯಂತ ಶಿರಿವಂತರಾಗಿದ್ದಾರೆ. ಇವರು ನೀಚರೂ ಅಧಮರೂ ನಿಂದ್ಯರೂ ಆಗಿದ್ದಾರೆ. ಇವರ ಸೊಕ್ಕನ್ನಂತೂ ವರ್ಣಿಸಲು ಸಾಧ್ಯವಿಲ್ಲ. ದ್ವಾರಪಾಲಕರೂ ಅಂಗರಕ್ಷಕರೂ ಸೈನಿಕರೂ ಸಹ ಇವರನ್ನು ಕಂಡು ಅಂಜುತ್ತಾರೆ.

ಶನಿವಾರಕ್ಕೊಮ್ಮೆ ರಾಜನು ರಾಜಮನೆತನದವರೂ ಉಪವಾಸ ಮಾಡುತ್ತಾರೆ. ಆ ದಿವಸ ಮಾತ್ರ ರಾಜನು ಸ್ವತಃ ದೇವರ ಪೂಜೆಯನ್ನು ಮಾಡುತ್ತಾನೆ. ಆ ಕಾಲಕ್ಕೆ ಅರಮನೆಯ ಸುಂದರಿಯರು ಬಂದು ಸಕಲ ವಾದ್ಯಗಳೊಡನೆ ನೃತ್ಯಮಾಡಿ ಗಾನ ಮಾಡುತ್ತಾರೆ. ವಿಜಯನಗರದ ಪ್ರತಿ ದೇವಾಲಯಗಳಲ್ಲಿಯೂ ಸಹಸ್ರಾರು ನರ್ತಕಿಯರಿರುತ್ತಾರೆ. ಅವರೆಲ್ಲರೂ ಅವಿವಾಹಿತರು. ದೇವದಾಸಿಯರೆಂದು ಅವರನ್ನು ಕರೆಯುತ್ತಾರೆ. ದೇವಾಲಯದಲ್ಲಿಯ ಎಲ್ಲ ಪ್ರಸಂಗಗಳಲ್ಲಿಯೂ ದೇವರ ಪೂಜೆಯ ಪ್ರಸಂಗದಲ್ಲಿಯೂ ಅವರು ನರ್ತನ ಮಾಡಿ ಗಾಯನ ಪಾಡುವರು. ಆದರೆ ಈ ಯುವತಿಯರ ನೀತಿಯು ಎಷ್ಟೂ ಪವಿತ್ರವಿರುವದಿಲ್ಲ. ಇವರು ಕರೆದವರ ಮನೆಗೆ ಹೋಗಿ ಅವರ ಕಾಮತೃಪ್ತಿಪಡಿಸಿ ಬರುತ್ತಾರೆ. ರಾಜನು ಕೂಡ ಇವರನ್ನು ಒಮ್ಮೊಮ್ಮೆ ಕರೆಸುವನು. ರಾಣಿಯರೆದುರೇ ಈ ಸರ್ವಾಂಗ ಸುಂದರಿಯಾದ ದೇವದಾಸಿಯರು ಬಂದರೂ ರಾಣಿಯು ಯಾವ ಆತಂಕವನ್ನೂ ಒಡ್ಡುವದಿಲ್ಲ. ಅಪ್ರೀತಿಯನ್ನು ತೋರುವದಿಲ್ಲ. ರಾಜನು ರಾಣಿಯ ಎದುರೇ ದೇವದಾಸಿಯನ್ನು ಏಕಾಂತ ಶಯ್ಯಾಗಾರಕ್ಕೆ ಕರೆದೊಯ್ದು ಸುಖಪಟ್ಟು ಅವಳಿಗೆ ಹೇರಳವಾದ ಕಾಣಿಕೆಗಳನ್ನು ಕೊಟ್ಟು ಕಳಿಸುತ್ತಾನೆ.

ರಾಜ್ಯದ ಮಂತ್ರಿಗಳೂ ಸರದಾರರೂ ಸೈನ್ಯಾಧಿಪತಿಗಳೂ ಮಾಂಡಲೀಕರೂ ನಾಯಕರೂ ಬೇಕಾದವರು ದೇವದಾಸಿಯರ ಸಂಗಸುಖವನ್ನು ಪಡೆಯಬಹುದು.

ರಾತ್ರಿ ವೇಳೆಯಲ್ಲಿ ಸೇನಾಪತಿಗಳೂ ಸರದಾರರೂ ಮಾಂಡಲೀಕರೂ ನಾಯಕರೂ ರಾಜಮನೆತನದವರೂ ಮಾತ್ರ ಹಿಲಾಲಿನ ಬೆಳಕಿನಲ್ಲಿ ಓಡಾಡಬಹುದು. ಉಳಿದವರು ಹಿಲಾಲು ಹಿಡಿದುಕೊಳ್ಳುವ ಅಧಿಕಾರವಿರುವದಿಲ್ಲ. ಪ್ರತಿಯೊಬ್ಬರಿಗೂ ಹಿಲಾಲಿನ ಮರ್ಯಾದೆ ಇದೆ. ಇಬ್ಬರು ಒಂದು ಎರಡು ಹೀಗೆ ಹನ್ನೆರಡು ಹಿಲಾಲುಗಳ ಮರ್ಯಾದೆ ಇದೆ ಅದಕ್ಕಿಂತ ಹೆಚ್ಚಿಗೆ ಹಿಲಾಲನ್ನು ಹಿಡಿದುಕೊಂಡು ಹೋಗಬಾರದು. ರಾಜನು ಮಾತ್ರ ೧೦೦ ರಿಂದ ೧೫೦ ಹಿಲಾಲುಗಳ ಮಧ್ಯದಲ್ಲಿ ಹೋಗಬಹುದು.

ರಾಜ್ಯದಲ್ಲಿ ಯಾರಿಗಾದರೂ ಅನ್ಯಾಯವಾಗಿದ್ದರೆ ರಾಜನೆದುರು ದೂರಿಕೊಳ್ಳುವದಿದ್ದರೆ ಅಂಥವನು ರಾಜನೆದುರು ಬಂದು ಸಾಷ್ಟಾಂಗವೆರಗುವನು "ಬಂದ ಕಾರಣವೇನು?" ಎಂದು ರಾಜನು ಕೇಳಿದ ನಂತರ ಅವನು ಎದ್ದು ತನ್ನ ತಾಪತ್ರಯಗಳನ್ನು ಹೇಳುವ ರೂಢಿಯಿದೆ. ರಾಜನು ಕುದುರೆ ಸವಾರಿಯಲ್ಲಿದ್ದು ಬೇಟೆಯಲ್ಲಿದ್ದಾಗ ಯಾವನಾದರೊಬ್ಬನು ರಾಜನ ಸಂಗಡ ಮಾತನಾಡುವದಿದ್ದರೆ ಒರೆಯಿಂದ ಖಡ್ಗವನ್ನು ತೆಗೆದು ಅದಕ್ಕೆ ಒಂದು ಗಿಡದ ಟೊಂಗೆಯನ್ನು ಕಟ್ಟಿ 'ದಾರಿಬಿಡಿರಿ ದಾರಿಬಿಡಿರಿ' ಎಂದು ಒದರುತ್ತ ಸಾಗುವನು ರಾಜನೆದುರು ಹೋಗಲು ಅವರಿಗೆ ಎಲ್ಲರೂ ದಾರಿ ಬಿಡುವರು. ಆಗ ಅವನು ರಾಜನಿಗೆ ತನ್ನ ದುಃಖವನ್ನು ಹೇಳಿಕೊಳ್ಳುವನು. ರಾಜನು ಕೂಡಲೇ ಮಂತ್ರಿಯನ್ನು ಕರೆಯಿಸಿ ಇವನ ತಾಪತ್ರಯ ನಿವಾರಣೆಗೆ ದಾರಿ ಮಾಡಿ ಕೊಡುವನು. ಯಾವುದಾದರೊಬ್ಬ ಸರದಾರ, ನಾಯಕ, ಅಥವಾ ಮಾಂಡಲೀಕನು ಬಂದು ತನ್ನ ಆಸ್ತಿಗೆ ಕೊಳ್ಳೆ ಹಚ್ಚಲಾಗಿದೆ ಅಥವಾ ಮುತ್ತಿಗೆಯಿದೆ ಅಥವಾ ತನ್ನೂರಿಗೆ ಕಳ್ಳರ ಭಯವಾಗಿದೆಯೆಂದರೆ ಕೂಡಲೆ ಸೇನಾಪತಿಯನ್ನು (ಅವನು ಎಲ್ಲಿಯೇ ಇರಲಿ) ಕರೆಯಿಸಿ ಸೈನ್ಯ ಸಹಾಯ ತೆಗೆದುಕೊಂಡು ಹೋಗಿ ಈ ಶರಣಾಗತನನ್ನು ರಕ್ಷಿಸಲು ರಾಜನು ಆಜ್ಞೆ ವಿಧಿಸುವನು.

ರಾಜನಲ್ಲಿ ಯಾವಾಗಲೂ ೫೦ ಸಾವಿರ ಸೈನಿಕರಿರುವರು. ಅವರಿಗೆಲ್ಲರಿಗೂ ಪಗಾರವಿರುವದು ಇವರಲ್ಲಿ ೩ ಸಾವಿರ ಕುದುರೆ ಸವಾರರಿರುವರು.

ಈ ಸವಾರರಲ್ಲಿ ಶ್ರೇಷ್ಠರೆನಿಸಿದ ೨ ನೂರು ಸವಾರರು ರಾಜನ ಅಂಗರಕ್ಷಕರಾಗಿರುವರು. ಇದಲ್ಲದೇ ರಾಜನಲ್ಲಿ ೨೦ ಸಾವಿರ ಢಾಲು ಭಲ್ಲೆಗಳಿಂದ ಯುದ್ಧ ಚತುರರ ಸೈನ್ಯವಿರುವದು. ಆನೆಗಳ ಮೈತೊಳೆಯುವದಕ್ಕೂ ಅವುಗಳ ಆರೈಕೆಗಾಗಿಯೂ ೩ ಸಾವಿರ ಜನರಿರುವರು. ೧೬ ನೂರು ಜನರು ಕುದುರೆ ಲದ್ದಿ ಬಳೆಯುವದಕ್ಕೂ ಅವುಗಳ ಆರೈಕೆಗೂ ಇರುವರು. ೩ನೂರು ಜನರು ಕುದುರೆಗಳಿಗೆ ಯುದ್ಧ ನಡವಳಿಕೆಯ ಶಿಕ್ಷಣ ಕೊಡಬಲ್ಲ ತಜ್ಞರು ಇರುವರು. ಇವರಲ್ಲದೇ ಕಮ್ಮಾರರೂ, ಉಪ್ಪಾರರೂ ಬಡಿಗರೂ ಮತ್ತು ಅಗಸರು ಒಟ್ಟು ೨ ಸಾವಿರ ಜನರಿರುವರು. ಇವರೆಲ್ಲರಿಗೂ ದಿನಗೂಲಿಯಿರುವದು ಅರಮನೆಯ ಗೇಟಿನ ಬಾಗಿಲಿನಲ್ಲಿ ಇವರಿಗೆ ಪಗಾರವು ಕೊಡಲ್ಪಡುವದು ೬ ಸಾವಿರ ಕುದುರೆ ಸವಾರರಿಗೆಲ್ಲ ಸರ್ಕಾರದಿಂದಲೇ ಕುದುರೆಗಳನ್ನು ಪೂರೈಸಲ್ಪಡುವವು. ಆ ಕುದುರೆಗಳ ಮೈಮೇಲೆ ಸರಕಾರದ ವಿಶಿಷ್ಟವಾದ ಗುರುತು ಇರುವದು. ಯಾವುದಾದರೊಂದು ಕುದುರೆಯು ಸತ್ತರೆ ಅದರ ಮೈಮೇಲಿನ ಸರಕಾರಿ ಗುರುತಿನ ತೊಗಲನ್ನು ಸುಲಿದು ಸರ್ಕಾರದ ಲಾಯದೊಡೆಯನಿಗೆ ತೋರಿಸಿದರೆ ಮತ್ತೊಂದು ಹೊಸ ಕುದುರೆಯನ್ನು ಸವಾರನಿಗೆ ಕೊಡಲ್ಪಡುವದು. ರಾಜನು ಪ್ರತಿ ವರುಷ ೧೩ ಸಾವಿರ ಕುದುರೆಗಳನ್ನು ಅರಬಸ್ತಾನ ಮೊದಲಾದವುಗಳಿಂದ ಪೋರ್ಚುಗೀಜ ವರ್ತಕರ ದ್ವಾರಾ (ಗೋವಾದಿಂದ) ಕೊಂಡುಕೊಳ್ಳುತ್ತಾನೆ. ಇವಲ್ಲದೇ ಹಿಂದುಸ್ಥಾನದಲ್ಲಿ ಜನಿಸಿದ ಕುದುರೆಗಳನ್ನೂ ಕೊಂಡುಕೊಳ್ಳುತ್ತಾನೆ. ಇವುಗಳಲ್ಲಿ ಶ್ರೇಷ್ಠ ತರಗತಿಯವುಗಳನ್ನು ತನಗಾಗಿ ಇಟ್ಟುಕೊಂಡು ಉಳಿದವುಗಳನ್ನು ವಿಜಯನಗರದ ರಾಜ್ಯದಲ್ಲಿ ಬೇಡಿದವರಿಗೆ ಮಾರುತ್ತಾನೆ. ಈ ವ್ಯಾಪಾರದಿಂದ ಬಂದ ಹಣದಿಂದ ಅರಬ ಕುದುರೆಗಳನ್ನು ಕೊಳ್ಳುತ್ತಾನೆ. ಹೀಗಾಗಿ ಸರಕಾರೀ ಖಜಾನೆಯಿಂದ ಕುದುರೆ ಕೊಳ್ಳಲು ಹಣವನ್ನು ಉಪಯೋಗಿಸುವ ಅವಶ್ಯಕತೆಯೇ ಬರುವದಿಲ್ಲ.

ಅರಮನೆಗಳ ಆವಾರದಲ್ಲಿ ನಾಲ್ಕು ಸಾವಿರ ಸುಂದರ ಯುವತಿಯರು ದಾಸಿಯರಾಗಿದ್ದಾರೆ. ಅವರೆಲ್ಲರೂ ಅರಮನೆಯ ಆವಾರದಲ್ಲಿಯೇ ವಾಸಿಸುತ್ತಾರೆ. ಇವರಲ್ಲಿ ಕೆಲವರು ರಾಣಿಯ ಪಲ್ಲಕ್ಕಿಯನ್ನು ಹೊರುವವರಾಗಿ

ದ್ದಾರೆ. ಒಂದು ಅರಮನೆಯಿಂದ ಮತ್ತೊಂದು ಅರಮನೆಯು ಸಾಕಷ್ಟು ದೂರವಿರುವದರಿಂದ ರಾಣಿಯರು ಪರಸ್ಪರರನ್ನು ಕಾಣಲು ಹೋಗಬೇಕೆಂದಾಗ ಪಲ್ಲಕ್ಕಿಯಲ್ಲಿಯೇ ಹೋಗುವರು. ಈ ಆವಾರದಲ್ಲಿ ಮಾತ್ರ ಪಲ್ಲಕ್ಕಿಗಳನ್ನು ಕೇವಲ ದಾಸಿಯರೇ ಹೊತ್ತೊಯ್ಯುವರು. ಈ ಸುಂದರಿಯರಲ್ಲಿ (ದಾಸಿ) ಕೆಲವರು ಪೈಲವಾನರಾಗಿದ್ದಾರೆ. ರಾಜರಾಣಿಯನ್ನು ಕುಸ್ತಿ ಆಟ ತೋರಿಸಿ ಮನರಂಜಿಸುತ್ತಾರೆ. ಕೆಲವು ದಾಸಿಯರು ಶ್ರೇಷ್ಠ ಜ್ಯೋತಿಷಿಗಳಾಗಿದ್ದಾರೆ. ಕೆಲವರು ಭವಿಷ್ಯವಾದಿಗಳಾಗಿದ್ದಾರೆ. ಅರಮನೆಗಳ ಆವಾರದಲ್ಲಿ ಜರುಗಿದ ನಿತ್ಯ ವ್ಯವಹಾರಗಳ ಲೆಕ್ಕಪತ್ರಗಳನ್ನು ಇಡುವ ಕೆಲಸದಲ್ಲಿ ಕೆಲ ದಾಸಿಯರು ನಿರತರಾಗಿದ್ದಾರೆ. ಕೆಲವು ಜಾಣಾಕ್ಷ ದಾಸಿಯರು ಇಡೀಸಾಮ್ರಾಜ್ಯದ ದೈನಂದಿನ ವಿಷಯಗಳನ್ನು ಬರೆದು ಅರಮನೆಯ ಹೊರಗಿನವರು ಬರೆದ ವಿಷಯಗಳನ್ನೂ ತಾವು ಬರೆದಿದ್ದರೊಂದಿಗೆ ಹೋಲಿಸಿ ನೋಡುವ ಕೆಲಸದಲ್ಲಿ ನಿಯಾಮಕ ಹೊಂದಿದ್ದಾರೆ. ಕೆಲವು ದಾಸಿಯರು ವಾದ್ಯವಾದನ ನಿಪುಣರು ಕೆಲವರು ನರ್ತನ ಕಲಾವಿದರು ಕೆಲವರು ಗಾನಶಾಸ್ತ್ರ ವಿಶಾರದರು ಇರುವರು. ರಾಣೀಯರನೇಕರು ಶ್ರೇಷ್ಠ ತರಗತಿಯಲ್ಲಿ ಅತ್ಯಂತ ಮಧುರವಾಗಿ ಮೋಹಕವಾಗಿ ಗಾನ ಮಾಡಬಲ್ಲವರಾಗಿದ್ದಾರೆ.

ಇವರಲ್ಲದೇ ಕೇವಲ ರಾಜನಿಗಾಗಿ ಮಾತ್ರ ಅಡಿಗೆಮಾಡಲು ಹತು ಯುವತಿಯರಿರುವರು. ಅಡಿಗೆಯ ಮನೆಯ ಬಾಗಿಲನ್ನು ಕಾಯಲು ಶಿಖಂಡಿಗಳು ಸದಾ ನಿಂತಿರುತ್ತಾರೆ. ಅಡಿಗೆಯ ಮನೆಯಲ್ಲಿ ಯಾರನ್ನೂ ಬಿಡುವದಿಲ್ಲ. ವಿಷಪ್ರಯೋಗದ ಹೆದರಿಕೆಯೇ ಇದಕ್ಕೆ ಕಾರಣ. ರಾಜನು ಊಟಕ್ಕೆ ಬಂದಾಗ ಅಡಿಗೆಯ ಮನೆಯಿಂದ ಎಲ್ಲರೂ ಹೊರಗೆ ಹೋಗುತ್ತಾರೆ. ರಾಜನಿಗೆ ಬಡಿಸುವ ಕೆಲಸದ ದಾಸಿಯರು ಇರುತ್ತಾರೆ. ರಾಜನು ಬಂಗಾರದ ಮಣೆಯ ಮೇಲೆ ಕುಳಿತುಕೊಳ್ಳುತ್ತಾನೆ. ಅವನೆದುರು (ಮೂರು ಕಾಲಿನ ಗೇಣೆತ್ತರದ ಸ್ಟೂಲು) ಅಡ್ಡಣಿಗೆಯನ್ನು ಇಡುತ್ತಾರೆ. ಅದೂ ಬಂಗಾರದ್ದಿರುವದು. ಅದರ ಮೇಲೆ ಅಡಿಗೆಯ ಪದಾರ್ಥಗಳನ್ನು ಬಂಗಾರದ ಹರಿವಾಣಗಳಲ್ಲಿ ತಂದು ಇಡುತ್ತಾರೆ. ಊಟವಾದ ಮೇಲೆ ಓರ್ವಳು ಬಂಗಾರದ ಹೂಜಿ

ಯಿಂದ ಕೈತೊಳೆದುಕೊಳ್ಳಲು ಓರ್ವ ದಾಸಿಯು ನೀರನ್ನು ಹಾಕುತ್ತಾಳೆ. ರಾಜನ ಜೊತೆಗೆ ಯಾರೂ ಊಟಕ್ಕೆ ಕೂಡ್ರುವದಿಲ್ಲ. ರಾಣಿಯರೆಲ್ಲರೂ ತಮ್ಮ ತಮ್ಮ ಅರಮನೆಗಳಲ್ಲಿ ಪ್ರತ್ಯೇಕವಾಗಿ ಅಡಿಗೆ ಮಾಡಿಸಿ ಅಲ್ಲಿಯೇ ಭೋಜನ ಮಾಡುತ್ತಾರೆ.

ಶ್ರೇಷ್ಠ ತರಗತಿಯ ರೇಶಿಮೆಯ ಬಟ್ಟೆಯನ್ನು ರಾಜನು ಧರಿಸುತ್ತಾನೆ ಅದಕ್ಕೆ ದಪ್ಪನ್ನ ಅಗಲವಾದ ಜರದಂಚುಗಳಿರುತ್ತವೆ. ರಾಜನು ಒಮ್ಮೆ ಧರಿಸಿದ ವಸ್ತ್ರಗಳನ್ನು ಮತ್ತೊಮ್ಮೆ ಧರಿಸುವದಿಲ್ಲ. ತನ್ನ ದೇಹದಿಂದ ಒಮ್ಮೆ ಬಿಚ್ಚಿ ತೆಗೆದನೆಂದರೆ ರಾಜವಸ್ತ್ರ ಭಂಡಾರಾಧಿಪನು ಅದನ್ನು ತೆಗೆದು ಕೊಂಡು ಬೇರೆ ಪೆಟ್ಟಿಗೆಯಲ್ಲಿಡುತ್ತಾನೆ. ಅದನ್ನು ತಿರುಗಿ ರಾಜನಿಗಾಗಲೀ ಮತ್ತಾರಿಗಾಗಲೀ ಮಾಂಡಲೀಕ ಮೊದಲಾದವರಿಗೆ ಅತ್ಯಂತ ಮಾನಮರ್ಯಾದೆ ಮಾಡುವದಕ್ಕಾಗಿ ಮತ್ತು ರಾಜನ ಅಂತಃಕರುಣದ್ಯೋತಕವಾಗಿ ಶೇಷ ವಸ್ತ್ರವೆಂದು ಈ ಅರಿವೆಗಳನ್ನು ದರಬಾರದಲ್ಲಿ ಸ್ವತಃ ರಾಜನೇ ಕೊಟ್ಟು ಮರ್ಯಾದೆ ಮಾಡುತ್ತಾನೆ. ರಾಜನು ತಲೆಯ ಮೇಲೆ ಕುಲಾಯಿಯಂಥ ಟೊಪ್ಪಿಗೆಯನ್ನು ಧರಿಸುತ್ತಾನೆ. ಇದನ್ನು ಸಹ ಒಮ್ಮೆ ತೆಗೆದನೆಂದರೆ ಪುನಃ ತಲೆಯ ಮೇಲೆ ಧರಿಸುವದಿಲ್ಲ.

ವಿಜಯನಗರದ ರಾಜ್ಯದಲ್ಲಿ ಕಳ್ಳನಿಗೆ (ಕಳವು ಸಣ್ಣದೇ ಇರಲಿ ದೊಡ್ಡದೇ ಇರಲಿ) ಮತ್ತು ಮನೆತನಸ್ಥ ಹೆಣ್ಣುಮಗಳನ್ನಾಗಲೀ ಕುಮಾರಿ ಯನ್ನಾಗಲೀಒತ್ತಾಯದಿಂದ ಸಂಭೋಗಿಸಿದವನಿಗೆ ಮತ್ತು ಇವೇ ಸ್ವರೂಪದ ಯಾವುದೇ ಅಪರಾಧ ಮಾಡಿದ್ದರೆ ಅಂಥವನ ಕೈ ಅಥವಾ ಕಾಲು ಕಡಿದು ಒಗೆಯುವರು. ಅಪರಾಧವು ಘೋರವಾಗಿದ್ದರೆ ಸಾರ್ವಜನಿಕ ಸ್ಥಳದಲ್ಲಿ ಅವನ ಕುತ್ತಿಗೆಗೆ ಉರುಲು ಹಾಕಿ ನೇತುಬಿಡುವರು. ಸರದಾರನು, ನಾಯ ಕನು ಸೈನಿಕನು ಮಾಂಡಲೀಕನು ಯಾರೇ ಇದ್ದರೂ ರಾಜದ್ರೋಹ ಕಾರ್ಯ ದಲ್ಲಿ ಎಸಗಿದ್ದು ಸಿದ್ಧವಾದರೆ ಸಾರ್ವಜನಿಕ ಸ್ಥಳದಲ್ಲಿ ಎತ್ತರವಾದ ಕಟ್ಟಿ ಗೆಯ ಮೇಜಿನ ಮೇಲೆ ನಿಲ್ಲಿಸಿ ಹೊಟ್ಟೆಯಲ್ಲಿ ಖಡ್ಗದಿಂದ ಇರಿದು ಕೊಲ್ಲುವ ಶಿಕ್ಷೆ ವಿಧಿಸಲಾಗುವದು. ಕೀಳು ತರಗತಿಯ ಮನುಷ್ಯನು ಕಳುವು, ಹೆಂಗ

ಸಿನ ಅವಮಾನ ರಾಜದ್ರೋಹ ಮೊದಲಾದ ಯಾವುದೇ ಅಪರಾಧ ಮಾಡಿದ್ದರೂ ಅವನನ್ನು ಪೇಟೆಯ ಮಧ್ಯದಲ್ಲಿ ತಂದು ಶಿರಚ್ಛೇದ ಮಾಡುತ್ತಿದ್ದರು. ಖೂನೀ ಮಾಡಿದವನನ್ನು ಕೂಡಲೇ ಕೊಂದುಬಿಡುತ್ತಿದ್ದರು.

ಇದರೆ ದ್ವಂದ್ವಯುದ್ಧ ಮಾಡಿದವರಿಗೆ ಈ ಶಿಕ್ಷೆ ವಿಧಿಸುತ್ತಿದ್ದಿಲ್ಲ. ದ್ವಂದ್ವಯುದ್ಧವನ್ನಾಡುವ ಉಭಯತರೂ ಪ್ರಧಾನಾಮಾತ್ಯರ ಅಪ್ಪಣೆಯನ್ನು ದೊರಕಿಸಿಕೊಂಡ ಮೇಲೇ ದ್ವಂದ್ವಯುದ್ಧಕ್ಕೆ ಸಿದ್ಧರಾಗಬೇಕಾಗುತ್ತಿತ್ತು. ಈ ಯುದ್ಧದಲ್ಲಿ ಸತ್ತವನ ಎಲ್ಲ ಆಸ್ತಿಯನ್ನು ಗೆದ್ದವನು ತೆಗೆದುಕೊಂಡುಬಿಡುವದು ಕಾಯದೇಬದ್ಧವಾಗಿರುವದು.

## ೮

ವಿಜಯನಗರದ ರಾಜ್ಯಪದ್ಧತಿಯ ವಿವರಣೆ—

ವಿಜಯನಗರದ ಸಾಮ್ರಾಜ್ಯವನ್ನು ಜಹಗೀರುಗಳಾಗಿ ವಿಭಾಗಿಸಲ್ಪಟ್ಟಿರುತ್ತವೆ. (ಈಗಿನ ಜಿಲ್ಲೆಗಳಂತೆ) ಒಂದೊಂದು ಜಹಗೀರು ಒಬ್ಬೊಬ್ಬ ಸರದಾರರಿಗೆ ಆಳಲು ರಾಜನು ಕೊಟ್ಟಿರುತ್ತಾನೆ. ಆ ಸರದಾರನು ವರುಷಕ್ಕೆ ಇಂತಿಷ್ಟು ತೆರಿಗೆಯೆಂದು ರಾಜನಿಂದ ನಿರ್ಧಿಷ್ಟಪಡಿಸಿದ ಧನವನ್ನು ಪ್ರತಿ ವರುಷ ಅವನು ಕೊಡುತ್ತ ಹೋಗಬೇಕು. ತನ್ನ ಜಹಗೀರದಲ್ಲಿ ಸಂಚಿತವಾದ ಉತ್ಪನ್ನಕ್ಕೆ ಜಾಹಗೀರದಾರನೇ ಬಾಧ್ಯಸ್ಥನು. ಮತ್ತು ಪ್ರತಿಯೊಬ್ಬ ಅಂಥ ಸರದಾರನು ತನಗಾಗಿ ಮತ್ತು ವಿಜಯನಗರದ ಸಾಮ್ರಾಜ್ಯದ ರಕ್ಷಣೆಗಾಗಿ ಸೈನ್ಯವನ್ನು ಕಾದಿಟ್ಟುಕೊಂಡಿರಬೇಕು. ರಾಯನು ಆಜ್ಞೆ ಕಳಿಸಿದೊಡನೇ ಸೈನ್ಯಸಮೇತ ರಾಜಧಾನಿಗೆ ಬಂದು ಸಹಾಯ ನೀಡಬೇಕು. ರಾಜನು ತನ್ನ ಮನಸ್ಸಿಗೆ ಬಂದಾಗ ಬೇಕಾದ ಸರದಾರನಿಂದ ಜಾಹಗೀರನ್ನು ಕಸಿದುಕೊಂಡು ಅವನನ್ನು ಹೊರಗೆ ಹಾಕಬಲ್ಲನು. ಈ ಜಾಹಗೀರುಗಳಲ್ಲದೆ ರಾಜನ ಸ್ವಂತ ಆಸ್ತಿಯೆಂದು ಕೆಲವುಂಟು. ಅವುಗಳನ್ನೆಲ್ಲ ಕೋಶಾಧ್ಯಕ್ಷನೇ ನೋಡಿಕೊಂಡಿರುತ್ತಾನೆ. ಅವುಗಳ ಉತ್ಪನ್ನವನ್ನು ಮಾತ್ರ ರಾಜನು ಸ್ವಂತ ಮತ್ತು ತನ್ನ ರಾಣಿಯರ ವೆಚ್ಚಕ್ಕಾಗಿ ವಿನಿಯೋಗಿಸುತ್ತಾನೆ.

ಜಾಹಗೀರುಗಳಿಂದ ಬಂದ ಉತ್ಪನ್ನವನ್ನೆಲ್ಲವನ್ನು ರಾಜ್ಯದ ಸುಧಾರಣೆಗಾಗಿ, ಸೈನ್ಯಸಂಘಟನೆಗಾಗಿ, ಕುದುರೆಗಳನ್ನು ಕೊಂಡುಕೊಳ್ಳುವದಕ್ಕಾಗಿ ಉಪಯೋಗಿಸುತ್ತಾನೆ.

ರಾಜ್ಯದಲ್ಲಿ ರಾಜಸೇನಾಧಿಕಾರಿಯು ಅವನ ತರುವಾಯ ಕೋಶಾಧ್ಯಕ್ಷನು (ಇವನು ರಾಜ್ಯದ ಮತ್ತು ರಾಜನ ಸ್ವಂತ ಆಸ್ತಿಯ ಮೇಲಾಧಿಕಾರಿಯಾಗಿರುತ್ತಾನೆ) ಇವನ ತರುವಾಯ ಅರಮನೆಯ ರಕ್ಷಕ ದಳದ ಸೇನಾಧಿಪತಿ ಆಮೇಲೆ ರಾಜ್ಯದ ಮುತ್ತು ರತ್ನ ವಜ್ರ ವೈಢೂರ್ಯ ಅಮೂಲ್ಯ ವಸ್ತ್ರ ಮೊದಲಾದವುಗಳ ರಕ್ಷಣಾಧಿಕಾರಿಯು ಆಮೇಲೆ ಸಕಲ ಕುದುರೆ ಸವಾರರ ಮುಖ್ಯಾಧಿಪತಿಯು ಈ ಪ್ರಕಾರ ಕ್ರಮಬದ್ಧವಾಗಿದೆ.

ಇನ್ನು ಸರದಾರರು ಈ ಪ್ರಕಾರವಾಗಿದ್ದಾರೆ. ಎಲ್ಲಕ್ಕೂ ದೊಡ್ಡ ಸರದಾರನೆಂದರೆ ಸಾಳುವ ನಾಯಕನು. ಇವನು ಪ್ರಧಾನಿಯ ಪದವಿಯಲ್ಲಿಯೂ ಇದ್ದಾನೆ. ಒಂದು ಅಬ್ಜ ಹತ್ತು ಲಕ್ಷ ವರಹಗಳು ಇವನ ವಾರ್ಷಿಕ ಉತ್ಪನ್ನವಿದೆ. ಇವನು ಪೂರ್ವ ಪಶ್ಚಿಮ ದಕ್ಷಿಣ ಕರಾವಳಿಯ ಪಟ್ಟಿಯ ಮತ್ತು ನಾಗಪಟ್ಟಣ ತಾಂಜಾಪುರ, ದೇವೀಪಟ್ಟಣ, ತಿರುಕೋವಿಲ ಮೊದಲಾದವುಗಳ ಜಾಹಗೀರನಾಗಿರುತ್ತಾನೆ. ಇವನು ತನ್ನ ಉತ್ಪನ್ನದ ೧/೩ ಭಾಗವನ್ನು ರಾಜನಿಗೆ ಕೊಡಬೇಕು ೨/೩ ತನಗಾಗಿ ಇಟ್ಟುಕೊಳ್ಳಬೇಕು. ಇವನಲ್ಲಿ ೩೦ ಸಾವಿರ ಕಾಲಾಳುಗಳೂ ೩ ಸಾವಿರ ಕುದುರೆ ಮತ್ತು ಕುದುರೆ ಸವಾರರೂ ಮತ್ತು ೨೦ ಆನೆಗಳ ಸೈನ್ಯವು ಸದಾ ಸಿದ್ಧವಾಗಿರುತ್ತದೆ. ಈ ಸೈನ್ಯದ ಸಮಸ್ತ ವೆಚ್ಚ ಮತ್ತು ತನ್ನ ಮತ್ತು ರಾಣಿಯರ ವೆಚ್ಚ ಮತ್ತು ಜಾಹಗೀರಿನ ಸುಧಾರಣೆಯ ವೆಚ್ಚವನ್ನು ೨/೩ ಭಾಗದಲ್ಲಿ ಮಾಡಿಕೊಳ್ಳಬೇಕು.

ಇನ್ನೊಬ್ಬ ಸರದಾರನಾದ ಅಜಪತಿ ತಿಮ್ಮಪ್ಪನೆಂಬವವನಿಗೆ ವಾರ್ಷಿಕ ಉತ್ಪನ್ನವು ೮೦ ಲಕ್ಷ ವರಹಗಳಷ್ಟಿದೆ. ಇವನಿಗೆ ಉದಯಗಿರಿ ಕೊಂಡವೀಡು, ಪೆನುಗೊಂಡೆ, (ಈಗಿನ ನೆಲ್ಲೂರ ಜಿಲ್ಹೆಯಲ್ಲಿಯ) ಕನಗಿರಿ ಮೊದಲಾದವುಗಳು ಓರಿಸಾ ರಾಜ್ಯದ ಅಂಚಿಗಿರುವಂಥವುಗಳು ಜಹಗೀರುಗಳಾಗಿವೆ.

ಕೃಷ್ಣದೇವರಾಯನು ಮಗನ ದುಃಖಕ್ಕೆ ಕಾರಣರಾದ ಸಾಳುವ ನಾಯಕ ಮತ್ತು ಅವನ ಮನೆತನದವರ ಕಣ್ಣುಗಳನ್ನು ಈ ತಿಮ್ಮಪ್ಪನಿಂದಲೇ ಕಿತ್ತಿಸಿದ ಕಾಲಕ್ಕೆ ದಕ್ಷಿಣದ ಕನ್ಯಾಕುಮಾರಿ ಪ್ರದೇಶವನ್ನೂ ಇವನಿಗೆ ಜಹಗೀರು ಹಾಕಿಕೊಟ್ಟನು. ಇವನು ಕೃಷ್ಣದೇವರಾಯನಿಗೆ ೩೦ ಲಕ್ಷ ವರಹ (ಬಂಗಾರದ ನಾಣ್ಯ) ಗಳನ್ನು ಪ್ರತಿವರುಷ ಕೊಡಬೇಕಲ್ಲದೇ ೨೫ ಸಾವಿರ ಕಾಲಾಳುಗಳನ್ನೂ ೧೫೦೦ ಕುದುರೆ ಸವಾರರನ್ನೂ ೪೦ ಆನೆಗಳನ್ನೂ ಸೈನ್ಯವನ್ನು ಸದಾ ಸಿದ್ಧ ಮಾಡಿಕೊಂಡಿರಬೇಕೆಂದು ಇವನಿಗೆ ಆಜ್ಞೆ ವಿಧಿಸಲಾಗಿದ್ದಿತು.

ಗಣಪತಿನಾಯಕ, ಚಿನ್ನಪ್ಪನಾಯಕ, ಕೃಷ್ಣಪ್ಪನಾಯಕ, ಬಜ್ಜಪ್ಪನಾಯಕ, ಮಲ್ಲಪ್ಪನಾಯಕ, ಆದಪ್ಪನಾಯಕ ಮೊದಲಾದ ಅನೇಕ ನಾಯಕರು ವಿಜಯನಗರದ ಬೇರೆಬೇರೆ ಜಾಹಗೀರುಗಳಿಗೆ (ಜಿಲ್ಹೆಗಳಿಗೆ) ಅಧಿಕಾರಿಗಳಾಗಿದ್ದು ಪ್ರಜರನ್ನು ಆಳುತ್ತಿದ್ದುದು ಕಂಡುಬರುತ್ತದೆ. ಅರಮನೆಗಳಲ್ಲಿಯ ಬಂಗಾರ ಮತ್ತು ರತ್ನ ವಜ್ರವೈಢೂರ್ಯ ಮೊದಲಾದವುಗಳ ಮತ್ತು ಅಮೂಲ್ಯ ವಸ್ತ್ರಾಲಂಕಾರಗಳ ಮೇಲ್ವಿಚಾರಕನಾಗಿದ್ದವನಿಗೆ 'ನರಪತಿ'ನೆಂಬ ಬಿರುದಾವಳಿ ಇರುವದು. ಕೃಷ್ಣದೇವರಾಯನ ಕಾಲದಲ್ಲಿ ಈ ನರವರನು ನಾಗಲಾಪುರದಲ್ಲಿಯೇ ವಾಸಿಸುತ್ತಿದ್ದನು. ಇವನಿಗೆ ಅನೇಕ ಭದ್ರವಾದ ಕೋಟೆಗಳು ಜಾಹಗೀರುಗಳಾಗಿದ್ದು (ಈಗಿನ ಹರಪನಹಳ್ಳಿಯ ಹತ್ತಿರ) ದುರ್ಗವತ್ತಿಕೋಟೆ, ರಾಮದುರ್ಗಕೋಟೆ, ಗೋವಾದ ಸನಿಯದ ಕೋಟೆ (ಹೆಸರು ಗೊತ್ತಿಲ್ಲ)ಗಳು ಮುಖ್ಯವಾದವುಗಳು. ಇವನ ವಾರ್ಷಿಕ ಉತ್ಪನ್ನವು ೪೦ ಲಕ್ಷ ವರಹ (ಬಂಗಾರ)ಗಳಿದ್ದು ೨೦ ಲಕ್ಷ ರಾಜನಿಗೆ ಕೊಡುತ್ತಿದ್ದನು. ಇವನಲ್ಲಿ ೧೨ ಸಾವಿರ ಕಾಲಾಳು ೬ ನೂರು ಕುದುರೆ ಸವಾರರು ೨೦ ಆನೆಗಳ ಸೈನ್ಯವಿದ್ದಿತು.

ಇರಲಿ. ಈ ಎಲ್ಲ ನಾಯಕರಲ್ಲಿ ಮಧುರೆಯ ನಾಯಕರ ಹೆಸರಾಗಲೀ ಮಧುರ ಜಾಹಗೀರರಾಗಲೀ ನಮೂದಿಸಿದ್ದು ಕಂಡುಬರುವದಿಲ್ಲ. ಆದರೆ ಮಧುರೆಯ ನಾಯಕರು ವಿಜಯನಗರದ ಮಾಂಡಲೀಕರಾಗಿ

ಇ. ಸ. ೧೪೯೯ ರಿಂದ ರಾಜ್ಯವಾಳುತ್ತಿದ್ದುದನ್ನು ಇತಿಹಾಸದಾರರು ಎತ್ತಿ ತೋರಿಸಿದ್ದಾರೆ. ನೆಲ್ಸನ್ ಎಂಬ ಆಂಗ್ಲ ಇತಿಹಾಸಕಾರನು ಮಧುರೆಯ ನಾಯಕರ ಹೆಸರು ಅವರು ಆಳಿದ ಕಾಲವನ್ನು ಬರೆಯುತ್ತಾನೆ.

| | | | | |
|---|---|---|---|---|
| ನರಸನಾಯಕ | ಇ ಸ- ೧೪೯೯ | ರಿಂದ | ೧೫೦೦ |
| ತೆನ್ನನಾಯಕ | " | ೧೫೦೦ | " | ೧೫೧೫ |
| ನರಸ (ಪಿಳ್ಳೆ) ನಾಯಕ | " | ೧೫೧೫ | " | ೧೫೧೯ |
| ಕುರುಕುರು ತಿಮ್ಮಪ್ಪನಾಯಕ | " | ೧೫೧೯ | " | ೧೫೨೪ |
| ಕಟ್ಟಿ ಯಮಕಾಮಯ್ಯನಾಯಕ | " | ೧೫೨೪ | " | ೧೫೨೬ |
| ಚಿನ್ನಪ್ಪನಾಯಕ | " | ೧೫೨೬ | " | ೧೫೩೦ |
| ಅಯ್ಯಕಡರಾಯ ವೇಯಪ್ಪನಾಯಕ | " | ೧೫೩೦ | " | ೧೫೩೫ |
| ವಿಶ್ವನಾಥನಾಯಕ ಅಯ್ಯಾತ | " | ೧೫೩೫ | " | ೧೫೪೪ |

ಆ ಮೇಲೆ ಬಂದವರ ಹೆಸರುಗಳು ಮಾತ್ರ ಗೊತ್ತಾಗಿಲ್ಲ. ವಿಶ್ವನಾಥ (೨ನೇ ಇರಬಹುದು) ನಾಯಕ ಎಂಬುವವನು ೧೫೫೯ ರಿಂದ ೧೫೬೩ರ ವರೆಗೆ ಆಳಿದನೆಂದೂ ಮುತ್ತೂಕೃಷ್ಣಪ್ಪನಾಯಕನೆಂಬುವವನು ೧೬೦೨ ರಿಂದ ೧೬೦೯ರ ವರೆಗೆ ಮಧುರೆಯನ್ನು ಆಳಿದನೆಂದೂ ಅವನ ಮಗನಾದ ಮುತ್ತೂವೀರಪ್ಪನಾಯಕನು ೧೬೦೯ರಿಂದ ೧೬೨೩ರ ವರೆಗೆ ಆಳಿದನೆಂದೂ ಈ ಮುತ್ತೂವೀರಪ್ಪನು ತಾನು ವಿಜಯನಗರದ ಮಾಂಡಲೀಕನೆಂದೂ ಹೇಳಿಕೊಳ್ಳುತ್ತಾ ಚಂದ್ರಗಿರಿ ರಾಜನಿಗೆ ಪ್ರತಿವರುಷ ೬ ಲಕ್ಷ ವರಹ (ಬಂಗಾರದಲ್ಲಿ)ಗಳನ್ನು ಕಪ್ಪ ಕೊಡುತ್ತಿದ್ದನೆಂದು ಪೋರ್ಚುಗೀಜ ಇತಿಹಾಸ ಕಾರನಾದ ಬರೆಡಾಸ್‌ನೆಂಬುವವನು ೧೬೧೬ರ ಕಾಲವನ್ನು ಹಾಕಿ ಬರೆದಿದ್ದಾನೆ. ಆದರೆ ಬೇರೆ ಇತಿಹಾಸಕಾರರು ಮಧುರೆಯು ದಕ್ಷಿಣದಲ್ಲಿ(ಮೂಲ ವಿಜಯನಗರವು ನಾಶವಾದ ಬಳಿಕ) ಅತ್ಯಂತ ಪ್ರಬಲವಾದ ಹಿಂದೂ ರಾಜ್ಯವಾಗಿತ್ತೆಂದೂ, ಈ ಮಧುರೆಯ ನಾಯಕರು ಸ್ವತಂತ್ರರಾಗಿ ಆಳಿದರೆಂದೂ, ಇವರಿಗೆ ಅನೇಕ ಮಾಂಡಲೀಕರೂ ಸರದಾರರೂ ಇದ್ದರೆಂದು ಬರೆಯುತ್ತಾರೆ. ಅದೇನೇ ಇರಲೊಲ್ಲದೇಕೆ ಮಧುರೆಯ ನಾಯಕರು ಇ.ಸ. ೧೪೯೯ ರಿಂದ ೮೬೫೦ರ ವರೆಗೆ ಆಳಿದರೆಂದು ಗೊತ್ತಾಗುವದು.

## ೯

### ವಿಜಯನಗರದ ಬ್ರಾಹ್ಮಣರು:—

ಈ ರಾಜ್ಯದಲ್ಲಿ ಒಂದು ವಿಶಿಷ್ಟ ತರದ ವರ್ಗದವರಿದ್ದಾರೆ. ಅವರಿಗೆ ಬ್ರಾಹ್ಮಣರೆಂದು ಕರೆಯುವರು. ಇವರು ಇಲ್ಲಿಯ ಮೂಲ ನಿವಾಸಿಗಳು ಇವರು ಕೇವಲ ಶಾಖಾಹಾರಿಗಳು. ಯಾವ ಪ್ರಾಣಿಯನ್ನೂ ಕೊಂದು ತಿನ್ನುವದಿಲ್ಲ. ಇವರು ಬಹಳ ಪ್ರಾಮಾಣಿಕರು. ಇವರು ವ್ಯಾಪಾರದಲ್ಲಿ ತೊಡಗಿರುವದೇ ಹೆಚ್ಚು. ಇವರು ಅತ್ಯಂತ ಜಾಣಾಕ್ಷರು. ಬುದ್ಧಿಶಾಲಿಗಳು, ಲೆಕ್ಕಪತ್ರ ಮೊದಲಾದ ವಿಷಯಗಳಲ್ಲಿ ಅಸಮಾನರೂ ಆಗಿರುತ್ತಾರೆ. ದೈಹಿಕ ಶ್ರಮದ ಕೆಲಸವನ್ನು ಇವರು ಮಾಡಲಾರರು, ಏಕೆಂದರೆ ಇವರು ತೆಳ್ಳಗೆ ಇದ್ದು ಅಷ್ಟು ಗಟ್ಟಿಗರಲ್ಲ. ರಾಜ್ಯದ ಮಹತ್ವದ ಸೂತ್ರಗಳೆಲ್ಲ ಬ್ರಾಹ್ಮಣರ ಕೈಯಲ್ಲಿಯೇ ಇರುವದಾದುದರಿಂದ ವಿಜಯನಗರದ ಸರಕಾರವು ಸುಸೂತ್ರವಾಗಿ ಸಾಗಿದೆ. ಇವರಲ್ಲಿ ಇನ್ನೊಂದು ವರ್ಗವಿದೆ, ಅವರಿಗೆ ಆಚಾರ್ಯರು ಅಥವಾ ಭಟ್ಟರು ಎಂದು ಕರೆಯುತ್ತಾರೆ. ವಿಜಯನಗರದ ದೇವಾಲಯಗಳೆಲ್ಲ ಈ ಜನರ ಸ್ವಾಧೀನದಲ್ಲಿಯೇ ಇವೆ. ಮಂಗ, ಎತ್ತು ದೆವ್ವ ಮೊದಲಾದ ಮೂರ್ತಿಗಳನ್ನಿಟ್ಟು ಈ ಜನರು ಪೂಜಿಸುತ್ತಾರೆ. ಹಿಂದಕ್ಕೆ ಒಂದಾನೊಂದು ಕಾಲದಲ್ಲಿ ಈ ದಕ್ಷಿಣ ಹಿಂದುಸ್ಥಾನವನ್ನು ವಾನರರೇ ಆಳುತ್ತಿದ್ದರೆಂದು ಆಗ ಅವು ಮಾತಾಡುತ್ತಿದ್ದವೆಂದೂ ಕತೆಯನ್ನು ಹೇಳುತ್ತಾರೆ. ಈ ಜನರರಲ್ಲಿ ಅತ್ಯಂತ ಪುರಾತನವಾದ ಗ್ರಂಥಗಳಿವೆ. ಅವುಗಳಲ್ಲಿ ವೀರರ ಕಥೆಗಳೂ ದೇವರ ಮಹಾತ್ಮ್ಯೆಯನ್ನು ಹೇಳುವ ಕಥೆಗಳೂ ಇವೆ. ಇದೇ ಮೊದಲಾದ ಕಾರಣಕ್ಕೆಂದೇ ಇದ್ದರೂ ಇರಬಹುದು. ಈ ಭಾಗದಲ್ಲಿ ಅಸಂಖ್ಯಾತವಾಗಿ ಮಂಗಗಳಿವೆ. ಆದರೆ ಅವುಗಳನ್ನು ಯಾರೂ ಯಾವ ಕಾರಣಕ್ಕೂ ಕೊಲ್ಲುವದಿಲ್ಲ.

ವಿಜಯನಗರದ ರಾಜರೆಲ್ಲರೂ ಅತ್ಯಂತ ಭಾವಿಕರು ಪ್ರತಿದಿವಸ ಪ್ರಾತಃಕಾಲದಲ್ಲಿ ಎದ್ದು ಹೋಗಿ ಬ್ರಾಹ್ಮಣ ಸನ್ಯಾಸಿಗೆ ನಮಸ್ಕರಿಸುತ್ತಾರೆ. ಈ ಸನ್ಯಾಸಿಗೆ ಲಗ್ನವಾಗಿರುವದಿಲ್ಲ. ಇಷ್ಟೇ ಯಾವ ಸ್ತ್ರೀಯನ್ನೂ ಇವನು ಮುಟ್ಟುವದಿಲ್ಲ. ಇವನು ಸಹ ಬಂದವರಿಗಲ್ಲ ಉಪದೇಶವಿಯುತ್ತಾನೆ. ಆಕಳಿಗೆ ಇಲ್ಲಿ ಅತ್ಯಂತ ಉನ್ನತ ಸ್ಥಾನವಿದೆ. ಅದು ದೇವರೆಂದೇ ಇಲ್ಲಿಯ ಜನರು ತಿಳಿಯುತ್ತಾರೆ ಅದನ್ನು ಪೂಜಿಸುತ್ತಾರೆ. ಅದಕ್ಕೆ ನಮಸ್ಕರಿಸುತ್ತಾರೆ. ರಾಜರಾಣಿಯರು ಸಹ ಆಕಳನ್ನು ಪೂಜಿಸಿ ನಮಸ್ಕರಿಸುತ್ತಾರೆ. ಈ ರಾಜ್ಯದಲ್ಲಿ ಆಕಳ ಮತ್ತು ಎತ್ತಿನ ವಧೆ ಇಲ್ಲ. ಈ ರಾಜ್ಯದಲ್ಲಿ ಸಹಗಮನವು ಪವಿತ್ರವಾದ ಕರ್ಮಗಳಲ್ಲಿ ಒಂದಾಗಿದೆ. ರಾಜನು ಸತ್ತರೆ ಅವನ ಚಿತೆಯಲ್ಲಿ ಅವನ ರಾಣಿಯರೆಲ್ಲರೂ ಹಾರಿಕೊಂಡು ಸಾಯುತ್ತಾರೆ. ಯಾರೇ ಸಾಯಲಿ ಅವನ ಹೆಂಡತಿಯು ಬೆಂಕಿಯಲ್ಲಿ ಹಾರಿಕೊಂಡು ಪತಿಯೊಡನೆ ಸಹಗಮನ ಹೊಂದುತ್ತಾಳೆ. ಇಲ್ಲಿಯ ಸ್ತ್ರೀಯರ ಅದ್ಭುತವಾದ ಧೈರ್ಯವು ನೋಡತಕ್ಕಂಥದ್ದಿದೆ.

ಗಂಡ ಸತ್ತಕೂಡಲೇ ಎಲ್ಲ ಆಪ್ತೇಷ್ಟರೊಡನೇ ಅಳಿನ ಹೆಂಡಂದಿರೂ ತಾಸು ಅಳುವರು ಆ ಮೇಲೆ ರೋದನವನ್ನು ನಿಲ್ಲಿಸಿ ಪತಿಯೊಡನೇ ತಾವು ಪರಲೋಕಕ್ಕೆ ಹೋಗಲು ಸಿದ್ಧರಾಗುವರು. ಸರ್ವಾಲಂಕಾರಗಳಿಂದ ಈ ಸ್ತ್ರೀಯರು ಭೂಷಿತರಾಗುವರು ಕುಂಕುಮಅರಿಷಿಣ ಕರಡಿಗೆಗಳನ್ನು ಹಣಿಗೆ ಕನ್ನಡಿಗಳನ್ನು ತೆಗೆದುಕೊಂಡು ಹೊರಡಲು ಸಿದ್ಧರಾಗುವರು. ಅಷ್ಟರಲ್ಲಿ ಸತ್ತ ಪುರುಷನ ಸಿದಿಗೆಯು ಸಿದ್ಧವಾಗಿ ಅವನನ್ನು ಪುಷ್ಪಗಳಿಂದ ಮುಚ್ಚಿ ಎತ್ತಿ ಒಯ್ಯುವರು. ಅದರ ಹಿಂದೆ ಅವನ ಪತ್ನಿಯರು ಕುದುರೆಯ ಮೇಲೆ ಕುಳಿತುಸಾಗುವರು. ಅವರನ್ನು ಕಳಿಸಲು ಅವರ ಆಪ್ತೇಷ್ಟ ಸ್ತ್ರೀಯರೆಲ್ಲರೂ ಬರುವರು. ಸ್ಮಶಾನ ಯಾತ್ರೆಯು ಮುಂದೆ ವಾದ್ಯಗಳನ್ನು ಬಾರಿಸುತ್ತಲೂ ಸಾಗುವರು. ರುದ್ರಭೂಮಿಗೆ ಬಂದೊಡನೆಯೇ ಅಲ್ಲಿ ಒಂದು ವಿಶಾಲವಾದ ತಗ್ಗು ಇರುವದು. ಅಲ್ಲಿ ಚಿತೆಯನ್ನು ಕಟ್ಟಿಗೆಯಿಂದ ಒಟ್ಟುವರು. ಅದರ ಮೇಲೆ ಮೃತನ ದೇಹವನ್ನಿರಿಸುವರು ಅವನ ಮೇಲೆ ಮತ್ತೆ ಕಟ್ಟಿ

ಗೆಯನ್ನು ಒಟ್ಟುವರು. ಇವನ ಅತ್ಯಂತ ಸನಿಯಂದ ಆಪ್ತನೊಬ್ಬನ (ಮಗ ತಮ್ಮ ಮೊದಲಾದವರು) ತನ್ನ ಹೆಗಲ ಮೇಲೆ ಮಡಿಕೆಯನ್ನು ಇಟ್ಟು ಕೊಂಡು ಬ್ರಾಹ್ಮಣರು ಮಂತ್ರಘೋಷ ಮಾಡುತ್ತಿರುವಾಗಲೇ ಅದಕ್ಕೆ ಮೂರು ಸಲ ಪ್ರದಕ್ಷಿಣೆ ಹಾಕುವನು. ಆ ಮೇಲೆ ಮಡಿಕೆಯನ್ನು ಒಡೆಯು ವರು. ಚಿತೆಗೆ ಅಗ್ನಿ ಸಂಸ್ಕಾರ ಮಾಡುವನು ಚಿತೆಯು ಉರಿಯತೊಡಗಿ ದೊಡನೆಯೇ ಅವನ ಪತ್ನಿ ಅಥವಾ ಪತ್ನಿಯರು ತಮ್ಮ ಅಲಂಕಾರಗಳನ್ನೂ ಅಮೂಲ್ಯ ವಸ್ತುಗಳನ್ನೂ ತೆಗೆದು ಅವುಗಳನ್ನು ತಮ್ಮ ಆಪ್ತೇಷ್ಟರಿಗಾಗಲೀ ಮನೆಸೊಸೆಯಂದಿರಗಾಗಲೀ ಕೊಡುವರು. ತಾವು ಹಳದೀ ಶೀರೆಯನ್ನು ಉಡುವರು. ತಾವು ಹೋಗಿಬರುವದಾಗಿ ನೆರೆದ ಎಲ್ಲ ಜನರಿಗೂ ಹೇಳುವರು ಅಮೇಲೆ ತಮ್ಮ ಪತಿಯ ಉರಿಯುತ್ತಿರುವ ಚಿತೆಗೆ ಮೂರು ಸಲ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕುವರು. ಕುಂಕುಮ ಅರಿಷಿಣ ಕರಿಡಿಗೆಗಳನ್ನು ಹಣಿಗೆ ಕನ್ನಡಿಗಳನ್ನು ಚಿತೆಯಲ್ಲಿ ಒಗೆದು ತಾವೂ ಅದರಲ್ಲಿ ಜಿಗಿದು ಭಸ್ಮವಾ ಗುವರು. ಅಮೇಲೆ ಅಲ್ಲಿ ನೆರೆದ ಆಪ್ತೇಷ್ಟರ ರೋದನ ಧ್ವನಿಯು ಆಕಾಶ ಮುಟ್ಟುವದು.

ಈ ರಾಜ್ಯದಲ್ಲಿ ಸತ್ತರೆ ಹೂಗಿಯುವ ಪದ್ಧತಿಯುಳ್ಳ ಪಂಗಡವೂ ಇದೆ ಅಂಥವರು ಸತ್ತರೆ ತಗ್ಗು ತೆಗೆದು ಪತಿಯನ್ನು ಅಲ್ಲಿ ಕೂಡ್ರಿಸಿ ಅವನ ಪತ್ನಿ ಯರನ್ನೂ ಅವನ ಜೊತೆಗೆ ಕುಳ್ಳಿರಿಸಿ ಹೂಗಿದುಬಿಡುವರು. ಈ ರೀತಿ ಜೀವಂತ ಹೂಗಿಸಿಕೊಂಡು ಸ್ತ್ರೀಯರು ಸಾಯುವರು.

## ೧೧೦

ದಕ್ಷಿಣ ಹಿಂದುಸ್ಥಾನದ ಸಂಪತ್ತಿನ ವಿವರ—

ಅಲ್ಲಾವುದ್ದೀನ ಖಿಲಜಿಯು ದಿಲ್ಲಿ ಸಿಂಹಾಸನದಲ್ಲಿ ವಿರಾಜಮಾನನಾಗಿ ದ್ದಾಗ ಮಲ್ಲಿಕ ಕಾಫರನು ಇ. ಸ. ೧೩೧೦ ದಕ್ಷಿಣ ಹಿಂದುಸ್ಥಾನದ ಮೇಲೆ ದಂಡಯಾತ್ರೆಯನ್ನು ಯಶಸ್ವಿ ರೀತಿಯಿಂದ ಕೈಕೊಂಡು ಕಂಡ ಕಂಡ

ದೇವಾಲಯಗಳನ್ನೆಲ್ಲ ಕೆಡವಿ ವಿಗ್ರಹವನ್ನು ಒಡೆದು ಅಲ್ಲಿದ್ದ ಸಂಪತ್ತನ್ನೆಲ್ಲಾ ಹೇರಿಕೊಂಡು ಕೊಳ್ಳೆ ಸುಲಿಗೆಗಳನ್ನು ಮಾಡುತ್ತ ಸಾಗಿದನು ದಕ್ಷಿಣಪ್ರದೇಶವನ್ನು ಪಶ್ಚಿಮ ಸಮುದ್ರ ದಂಡೆಯ ಪಟ್ಟಿಯನ್ನು (ಮಲಬಾರದ ಕೊನೆಯ ಅಂಚಿನವರೆಗೆ) ಮತ್ತು ಮೈಸೂರನ್ನು ಸುಲಿದನು. ಫಿರಿಸ್ತಿಹಾನು ಬರೆಯುತ್ತಾನೆ—"ಆ ಕಾಲಕ್ಕೆ ೩೧೨ ಆನೆಗಳ ಮೇಲೆಯೂ ೨೦ ಸಾವಿರ ಕುದುರೆಗಳ ಮೇಲೆಯೂ ವಜ್ರವೈಢೂರ್ಯ ಮುತ್ತು ರತ್ನಗಳ ಆಭರಣಗಳನ್ನೂ ೯೬ ಸಾವಿರ ಮಣ ಬಂಗಾರವನ್ನೂ ಒಯ್ದು ಮಲಿಕಕಾಫರನು ತನ್ನ ಯಜಮಾನನ ಮುಂದೆ ಇಡುತ್ತಾನೆ" ಎಂದು ವಿವರಿಸಿದ್ದಾನೆ.

ವಜ್ರವೈಢೂರ್ಯ ಪಚ್ಚ ಪುಷ್ಕರಾಗ ಮೊದಲಾದ ಹಳಕಲ್ಲುಗಳ ಆಭರಣಗಳ ರಾಶಿರಾಶಿಯನ್ನು ದಕ್ಷಿಣ ಹಿಂದುಸ್ಥಾನದ ರಾಣಿಯರೂ ಸರದಾರರ ಶಿರಿವಂತರ ಪತ್ನಿಯರೂ ಮೈಮೇಲೆ ಧರಿಸಿಕೊಂಡು ನವರಾತ್ರಿ ದೀಪಾವಳಿ ಮೊದಲಾದ ಸಮಾಸಂಭಗಳಲ್ಲಿ ಬೀದಿಯಲ್ಲಿ ಓಡಾಡುವ ವರ್ಣನೆಯನ್ನು ನೋಡಿದರೆ ದಕ್ಷಿಣದಲ್ಲಿ ಇಷ್ಟು ಸಂಪತ್ತಿದ್ದಿತೇ ಎಂದು ಎಲ್ಲರೂ ಆಶ್ಚರ್ಯ ಮತ್ತು ಸಂಶಯ ಪಡಬಹುದು ಎಂದು ಪಾಯೆಸ್‌ನು ಬರೆಯುತ್ತಾನೆ. ಜಗತ್ತಿನಲ್ಲಿ ಎಲ್ಲಿಯೂ ದೊರೆಯದಂಥ ವಜ್ರಗಳನ್ನು ವಿಜಯನಗರದಲ್ಲಿ ಸಹಜವಾಗಿ ರಾಶಿರಾಶಿಯಾಗಿ ಕಾಣಬಹುದೆಂದು ನ್ಯೂನಿಜ್ಞನು ಬಣ್ಣಿಸುತ್ತಾನೆ. ಬರದಾಸ್ ಎಂಬುವವನು ಹೀಗೆ ಹೇಳುತ್ತಾನೆ. "ವಿಜಯನಗರವು ನಿರ್ನಾಮವಾಯಿತು. ಅಲ್ಲಿ ಏನೂ ಉಳಿಯದಂತೆ ಮುಸ್ಲಿಮರು ಸರ್ವವನ್ನೂ ಸುಲಿಗೆಮಾಡಿ ಪ್ರಶಸ್ಥರಾಗಿ ಎಲ್ಲವನ್ನೂ ಬಳಿದುಕೊಂಡು ಹೋದರು. ಆದರೂ ನಾನು ೧೬೭೪ರಲ್ಲಿ ಚಂದ್ರಗಿರಿಗೆ ಹೋದಾಗ ರಾಜನ ಖಜಾನೆಯಲ್ಲಿ ವಜ್ರ ವೈಢೂರ್ಯ ಮೊದಲಾದ ಸರ್ವವಿಧದ ಹಳಕಲ್ಲನ್ನು ತುಂಬಿದ ಅತಿ ದೊಡ್ಡವಾಗಿರುವ ಮೂರು ಪೆಟ್ಟಿಗೆಗಳನ್ನು ನೋಡಿದೆನು'' ಎಂದು ಅವನು ವಿವರಿಸಿದ್ದಾನೆ.

ಕೃಷ್ಣಾ ಉತ್ತರ ತೀರದಲ್ಲಿಯೂ ಕರ್ನೂಲ ಮತ್ತು ಅನಂತಪೂರ ಜಿಲ್ಲೆಯ ಭಾಗದಲ್ಲಿಯು ವಜ್ರಗಳ ಅಮೂಲ್ಯವಾದ ಗಣಿಗಳಿದ್ದವಂತೆ. ಇವು ಮೊದಲು ಗೋವಳಕೊಂಡಕ್ಕೆ ಸೇರಿದ್ದವು. ವಿಜಯನಗರದ ಸನಿಯದಲ್ಲಿ

ರುವ ಎರಡು ಗುಡ್ಡಗಳಲ್ಲಿ ಸರ್ವಶ್ರೇಷ್ಠವಾದ ವಜ್ರಗಳು ದೊರೆಯುವ ಗಣಿಗಳಿವೆ. ವಜ್ರಗಳನ್ನು ತೆಗೆಯುವ ಕೆಲಸವು ಅಖಂಡವಾಗಿ ಇಲ್ಲಿ ನಡೆದಿರುತ್ತದೆ. ಈ ವಜ್ರ ವ್ಯಾಪಾರದಿಂದ ವಿಜಯನಗರದ ರಾಜರು ಕುಬೇರನಿಗೆ ಸಮ ನಾಗಿದ್ದಾರೆ. ಲಿಂಕೋಟಿನ್ ಎಂಬ ಪ್ರವಾಸಿಯು ಬರೆಯುತ್ತಾನೆ. ಇಲ್ಲಿ ದೊರೆಯುತ್ತಿದ್ದ ವಜ್ರಗಳ ೨೫ ಕೆರಟ್ ತೂಕದಕ್ಕಿಂತ ಮೇಲ್ಪಟ್ಟಿದ್ದವಂತೆ ಪೆಲ್ಲಾ ಗುಡ್ಡದಲ್ಲಿಯೂ ಅತ್ಯಮೂಲ್ಯ ವಜ್ರಗಳ ಗಣಿಗಳಿದ್ದವಂತೆ ಅವುಗಳಿಗೆ ಬೆಲೆ ಕಟ್ಟುವದೇ ಸಾಧ್ಯವಿಲ್ಲವೆಂದು ಹೇಳುತ್ತಾನೆ.

ಕೋಳಿ ತತ್ತಿಯಷ್ಟು ದೊಡ್ಡದಾಗಿರುವ ವಜ್ರಗಳು ವಿಜಯನಗರದ ರಾಜರಲ್ಲಿದ್ದವು. ಅವುಗಳಲ್ಲಿ ಒಂದನ್ನು ರಾಜನು ತನ್ನ ಪಟ್ಟದ ಕುದುರೆಯ ಶಿರೋಭೂಷಣದಲ್ಲಿ ಕಟ್ಟಿಸಿದ್ದನಂತೆ ಅದನ್ನು ತೆಗೆದು ವಿಜಾಪುರದ ಆದಿಲಶಹನಿಗೆ ಕಾಣಿಕೆಯಾಗಿ ಕಳಿಸಿದನು. ಆದಿಲಶಹನು ಸಂಪ್ರೀತನಾದನಂತೆ ವಿಜಯನಗರದ ರಾಜರಲ್ಲಿಯ ವಜ್ರಗಳು ೧೫೦, ೧೭೫ ಕೆಲ ಕೆಲವು ೫೧ ೧/೨ ಕೆರೆಟ್ ತೂಕದವು ಇದ್ದವೆಂದು ಗಾರ್ಸಿಯಾದ ಡಾ. ಓರ್ಟಾನು ಇ. ಸ. ೧೫೩೪ರಲ್ಲಿ ವಿಜಯನಗರಕ್ಕೆ ಭೆಟ್ಟಿಕೊಟ್ಟಾಗ ತಾನು ನೋಡಿದ್ದನೆಂದು ಬರೆಯುತ್ತಾನೆ.



## ಕೋಹಿನೂರ ಚರಿತ್ರೆ

ಈ ಕೋಳೀ ತತ್ತಿಯಷ್ಟು ಗಾತ್ರದಲ್ಲಿದ್ದ ವಜ್ರವೊಂದು ೨೮೦ ಕ್ಯಾರೆಟ್ ತೂಕದಲ್ಲಿದ್ದು "ಕೋಹಿನೂರ" ಎಂದು ಕರೆಯಲ್ಪಡುತ್ತಿತ್ತು, ಇದು ೧೫೬೫ರಲ್ಲಿ ವಿಜಯನಗರವು ಸಂಪೂರ್ಣ ನಾಶವಾದ ಬಳಿಕ ಬಿಜಾಪುರದ ಆದಿಲಶಹನ ವಶಕ್ಕೆ ಹೋಯಿತು. ೧೬೫೬ರಲ್ಲಿ ಮೀರಜುಲ್ಮಾ ಎಂಬುವವನಲ್ಲಿಗೆ ಅದು ಬಂದಿತು. ಅದನ್ನು ದಿಲ್ಲಿಗೆ ಒಯ್ದು ಶಹಾಜಹಾನನಿಗೆ ಕಾಣಿಕೆ

ಯಾಗಿ ಕೊಟ್ಟನು. ಆಗ ಶಹಾಜಹಾನನು ವ್ಹೇನಿಸದಿಂದ ಬಂದಂಥ ರಾಯಭಾರಿ ಹೊರೆನ್ಸಿಯೋ ಬೋರ್ಜಿಯೋ ಎಂಬವನ ರಕ್ಷಣೆಯಲ್ಲಿಟ್ಟನು. ಈ ಬೋರ್ಜಿಯೋ ಆದನ್ನು ಅತ್ಯಂತ ಅವ್ಯಸ್ಥಿತ ರೀತಿಯಲ್ಲಿ ಉಪಯೋಗಿಸಿ ಕೊಂಡಂತೆ ಕಂಡುಬಂದಿತು. ಏಕೆಂದರೆ ಮುಂದೆ ಔರಂಗಜೇಬನ ಆಳಿಕೆ ಯಲ್ಲಿ ಅವನ ಭಾಂಡಾರದಿಂದ (೬೬೫ರಲ್ಲಿ) ಅದನ್ನು ತೆಗೆದು ತೂಕ ಮಾಡ ಲಾಗಿ ಅದು ಕೇವಲ ೨೬೮ ೧/೨ ಕೆರೆಟ್ ತೂಕವಾಗದ್ದಿತು.

ಇ. ಸ. ೧೭೩೯ರಲ್ಲಿ ನಾದೀರಶಹನು ದಿಲ್ಲಿಯನ್ನು ಮುತ್ತಿ ಗೆದ್ದು ಕೊಂಡು ಲೂಟಿ ಮಾಡಿದನು. ಈ ಲೂಟಿಯಲ್ಲಿ ಕೋಹಿನೂರನ್ನು ತೆಗೆದು ಕೊಂಡು ಪರ್ಸಿಯಾಕ್ಕೆ ಒಯ್ದನು. ಅದಕ್ಕೆ "ಮೌಂಟನ್ ಆಫ್ ಲೈಟ್" ಎಂದು ಹೆಸರಿಟ್ಟನು. ೧೭೪೭ರಲ್ಲಿ ನಾದೀರಶಹನ ಖೂನೀ ಆಯಿತು. ಆಗ ಕೋಹಿನೂರನ್ನು ಅವನ ಮೊಮ್ಮಗನಾದ ಶಹಾಮುಖ ಎಂಬವನು ಸ್ವಾಧೀನಪಡಿಸಿಕೊಂಡನು. ನಾಲ್ಕು ವರುಷಗಳ ತರುವಾಯ ಕಾಬೂಲದ ನವಾಬನಾದ ಅಹಮ್ಮದಶಹ ದುರಾನಿ ಎಂಬವನಿಗೆ ಶಹಾಮುಖನು ಕಾಣಿಕೆ ಯಾಗಿ ಕೊಟ್ಟನು. ಮುಂದೆ ದುರಾನಿಯ ಮಗನಾದ ತೈಮೂರನ ಸ್ವಾಧೀ ನಕ್ಕೆ ಕೋಹಿನೂರ ಬಂದಿತು. ಕ್ರಮೇಣ ತಲೆತಲಾಂತರದಿಂದ ೧೭೯೩ರಲ್ಲಿ ಶಹಝಮಾನನ ಸ್ವಾಧೀನಕ್ಕೆ ಅದು ಬಂದಿತು. ಝಮಾನನ ತಮ್ಮನು ಇವನ ಕಣ್ಣು ಕಿತ್ತಿಸಿ ಸೆರೆಮನೆಗೆ ಕಳಿಸಿ ತಾನು ಕಾಬೂಲ ಸಿಂಹಾಸನವನ್ನೇ ರಿದನು. ಝಮಾನನು ಸೆರೆಮನೆಯಲ್ಲಿದ್ದರೂ ಸಹ ಕೋಹಿನೂರನ್ನು ತನ್ನಲ್ಲಿಯೇ ಇಟ್ಟುಕೊಂಡಿದ್ದನು. ಇವನ ತರುವಾಯ ೧೮೦೩ರಲ್ಲಿ ಸುಲ್ತಾನ ಸುಜಾ ಪಟ್ಟಕ್ಕೆ ಬಂದನು. ಆಗ ಝಮಾನನು ಸತ್ತಿದ್ದರಿಂದ ಕೋಹಿನೂರ ಸುಜಾನ ಒಡೆತನದ್ದಾಯಿತು.

ಎಲ್‌ಫಿನ್‌ಸ್ಟನ್ ಎಂಬ ಪ್ರವಾಸಿಯು ೧೮೦೯ರಲ್ಲಿ ಕಾಬೂಲದಲ್ಲಿ ದ್ದಾಗ ಸುಜಾಶಹನು ಕೋಹಿನೂರನ್ನು ತನ್ನ ರಟ್ಟೆಯಲ್ಲಿ ಧರಿಸಿದ್ದನು ನೋಡಿರುವದಾಗಿ ಬರೆದ್ದಿದ್ದಾನೆ. ಇ. ಸ. ೧೮೧೨ರಲ್ಲಿ ಮಹಮ್ಮದಶಹನು ದೊಡ ಸೈನ್ಯದೊಡನೆಕಾಬೂಲನ್ನು ಮುತ್ತಿದನು. ಅವನು ಎದುರಿಸಲಾರದೆ

ಸುಜಾ ಲಾಹೋರಕ್ಕೆ ಓಡಿಬಂದನು. ಲಾಹೋರವು ಆಗ ಪಂಜಾಬದ ಅಧಿಪತಿಯಾದ ರಣಜಿತಸಿಂಗನ ಒಡೆತನದಲ್ಲಿದ್ದಿತು. ಸುಜಾನನ್ನು ರಣಜಿತಸಿಂಗನು ಲಾಹೋರದಲ್ಲಿಯೇ ನಜರಬಂದಿಯ ಸೆರೆಯಲ್ಲಿಟ್ಟನ . ೧೮೧೪ರಲ್ಲಿಸುಜಾನು ರಣಜಿತಸಿಂಗನೊಡನೆ ಮೈತ್ರೀ ಒಪ್ಪಂದವನ್ನು ಮಾಡಿಕೊಂಡನು. ಆಗ ಕೋಹಿನೂರನ್ನು ರಣಜಿತಸಿಂಗನು ಯಾವಾಗಲೂ ಕೊರಳಲ್ಲಿ ಧರಿಸುತ್ತಿದ್ದುದನ್ನು ಅನೇಕ ಪಾಶ್ಚಾತ್ಯ ಪ್ರವಾಸಿಕರು ಬರೆದಿಟ್ಟಿದ್ದಾರೆ.

ಇ. ಸ. ೧೮೩೯ರಲ್ಲಿ ರಣಜಿತಸಿಂಗನು ಸತ್ತನು. ಆಗ ಅವನ ಮಗನು ಇನ್ನೂ ಅಲ್ಪವಯಿ ಇದ್ದನು. ಅವನ ವಯಸ್ಸಿಗೆ ಬರುವವರೆಗೆ ಕೋಹಿನೂರನ್ನು ಸರಕಾರದ ಖಜಾನಿಯಲ್ಲಿಯೇ ಇಡಲ್ಪಟ್ಟಿತ್ತು. ಆದರೆ ೧೮೪೯ ರಲ್ಲಿ ಪಂಜಾಬವು ಬ್ರಿಟಿಶ್ ಸರಕಾರವು ಬ್ರಿಟಿಶ್ ಹಿಂದುಸ್ಥಾನದಲ್ಲಿ ವಿಲೀನವಾಯಿತು. ಈ ಸವಾರಂಭದ ಕಾಲಕ್ಕೆ ಈ ಕೋಹಿನೂರನ್ನು ಆಗಿನ ಪಂಜಾಬದ ಆಡಳಿತಗಾರನಾದ ಸರ್ ಜಾನ್‌ಲಾರೆನ್ಸನಿಗೆ ಕೊಟ್ಟನು. ಸರ್ ಜಾನ್ ಲಾರೆನ್ಸನು ಇಂಗ್ಲಂಡಕ್ಕೆ ಒಯ್ದು ವ್ಹಿಕ್ಟೋರಿಯಾ (ಮಹಾರಾಣಿ ಮತ್ತು ಹಿಂದುಸ್ಥಾನದ ಸಾಮ್ರಾಜ್ಞಿ)ಳಿಗೆ ಅರ್ಪಿಸಿದನು. ಇ. ಸ. ೧೮೫೧ ರಲ್ಲಿ ಅಖಿಲ ಯುರೋಪಿನ ಪ್ರಚಂಡ ಪ್ರದರ್ಶನವು ಲಂಡನ್ನದಲ್ಲಿ ಆಯಿತು. ಅಲ್ಲಿ ಅದನ್ನು ಪ್ರದರ್ಶನಕ್ಕೆ ಇಟ್ಟನು. ಅಮಸ್ಟರ್ಡಮದ ಮಿಸೆರ್ಸಿಗೆರಾರ್ಡ್ಸ ಕಂಪನಿಯಲ್ಲಿ ನೌಕರನಾಗಿದ್ದ ಊರ್ಸಂಗರ್ ಎಂಬವನನ್ನು ಕರೆಯಿಸಿ ಕೋಹಿನೂರನ್ನು ಮೂರು ತುಂಡುಗಳನ್ನಾಗಿ ಮಾಡಿಸಿದಳು. ಒಂದನ್ನು ಸಿಂಹಾಸನದಲ್ಲಿಯೂ ಮತ್ತೊಂದು ರಾಜದಂಡದಲ್ಲಿಯೂ ಇನ್ನೊಂದನ್ನು ರಾಣಿಯ ರಥದ ಮೇಲಿನ ಶಿಖರದಲ್ಲಿಯೂ ಕೆಚ್ಚಿಸಿದಳು. ಇಲ್ಲಿಗೆ ಕೋಹಿನೂರಿನ ಕಥೆ ಮುಗಿಯಿತು.

ಕೋಹಿನೂರ ಒಂದೇ ಏಕೆ, ಹಿಂದುಸ್ಥಾನದ ಸಮಸ್ತ ಸಂಪತ್ತನ್ನು ಇಂಗ್ಲಂಡ ಬಳಿದುಕೊಂಡು ಹೋಗಿ ಬಿಟ್ಟಿದೆ. ಕೆಲವೇ ನೂರು ವರುಷಗಳ ಕೆಳಗೆ ಹಿಂದುಸ್ಥಾನವು ಅತ್ಯಂತ ಶಿರಿವಂತ ದೇಶವೆಂದು ಹೇಳಿದರೆ ನಂಬಲಾರದಂತಹ ಪರಿಸ್ಥಿತಿಯು ಇಂದು ನಮಗೆ ಬಂದಿದೆ. ಕಾಲಾಯ ತಸ್ಮೈ ನಮಃ

೧೧

## ಕೃಷ್ಣದೇವರಾಯನ ದರ್ಶನ ವಿವರ—

ಪೋರ್ಚುಗೀಜ ಪ್ರವಾಸಿಯಾದ ಪಾಯಸ್‌ನು ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ಬಂದು ನಾಗಲಾಪುರವನ್ನು ಕಂಡನು. ಈ ಪಟ್ಟಣವನ್ನು ರಾಜನು ತನ್ನ ಅತ್ಯಂತ ಪ್ರೀತಿಗೆ ಪಾತ್ರಳಾದ ರಾಣಿಯಾದ ನಾಗಲಾಂಬಿಕೆಯ ಹೆಸರು ಚಿರವಾಗಿ ಉಳಿಯಲೆಂಬ ಹೆಬ್ಬಯಕೆಯಿಂದ ಕಟ್ಟಿಸಿದ್ದಾನೆ. ಇದು ವಿಶಾಲವಾದ ಮೈದಾನದಲ್ಲಿ ನಿರ್ಮಿತವಾಗಿದೆ. ಅನೇಕಾನೇಕ ಕಂಬಗಳಿಂದ ನಿರ್ಮಿತವಾದ ಅರಮನೆಗಳು ವಿಶಾಲವಾಗಿಯೂ ಅತ್ಯಂತ ರಮಣೀಯವಾಗಿಯೂ ಇವೆ. ಎಲ್ಲ ಅರಮನೆಗಳ ಸುತ್ತಲೂ ಒಂದು ಎತ್ತರವಾದ ಆವಾರದ ಗೋಡೆಯನ್ನು ಕಟ್ಟಿದ್ದಾರೆ. ಅದಕ್ಕೆ ಎರಡು ಕಡೆಗೆ ದ್ವಾರಗಳಿವೆ: ಇಲ್ಲಿಯ ನಾಗರಿಕರ ಮನೆಗಳು ಅನೇಕ ಕಂಬಗಳಿಂದ ಕಟ್ಟಲ್ಪಟ್ಟಿವೆ. ಅವುಗಳ ಸುತ್ತಲೂ ವ್ಹರಾಂಡಾ ಇದೆ. ಒಳಗೆ ಕೂಡ ವಿಶಾಲವಾದ ಪಟಾಂಗಣಗಳಿವೆ. ಕಮಾನುಗಳೂ ಕಂಬಗಳೂ ವಿಶೇಷ ಶೋಭೆಯನ್ನು ತರುವವು. ಈ ಮನೆಗಳು ಕೂಡ ಅರಮನೆಗಳಂತೆಯೇ ಶೋಭಿಸುವವು. ಪ್ರತಿಯೊಂದು ಮನೆಗೆ ಆವಾರದ ಗೋಡೆಯಿರುವದು. ಆವಾರದಲ್ಲಿ ಹೂ-ಹಣ್ಣುಗಳ ತೋಟಗಳಿರುವವು. ನಾಗಲಾಪುರದಲ್ಲಿ ಅಲ್ಲಲ್ಲಿಗೆ ಉದ್ಯಾನಗಳು ಎದ್ದು ನಿಂತಿರುವವು. ಅಲ್ಲಿಯ ಯಾವ ಮನೆಗಳಿಗೂ ಉಪ್ಪರಿಗೆಯಿಲ್ಲ. ಅರಮನೆಗೆ ಸಹ ಉಪ್ಪರಿಗೆಗಳಿಲ್ಲ.

ಇಂಥ ಸುಂದರವಾದ ಪಟ್ಟಣವನ್ನು ನಾನು ಎಂದೂ ನೋಡಿದ್ದಿಲ್ಲ. ಕೃಷ್ಣದೇವರಾಯನು ಆಗ ಅಲ್ಲಿಯೇ ಇದ್ದನು. ಅರಮನೆಗಳ ಆವಾರದ

ಮಹಾದ್ವಾರದಲ್ಲಿ ಬಿಗಿಯಾದ ಕಾವಲಿದೆ, ಒಳಗೆ ಯಾರನ್ನೂ ಬಿಡುವದಿಲ್ಲ. ಪ್ರಧಾನಿಗಳಿಗೂ ಸೇನಾಪತಿಗಳಿಗೂ ಆಪ್ತೇಷ್ಟರಿಗೂ ಆಮಂತ್ರಿತರಿಗೂ ಪ್ರವೇಶವುಂಟು. ಅವರು ಬಂದು ಅರಮನೆಯ ಮುಂಭಾಗದಲ್ಲಿ ಒಂದು ವಿಶಾಲವಾದ ಮನೋಹರವಾದ ರಾಜಾಂಗಣವಿರುವದು. ಅಲ್ಲಿ ಅವರೆಲ್ಲರೂ ರಾಜನ ಕರೆಬರುವವರೆಗೂ ಕ್ರಾದಿರಬೇಕು.

ಕೃಷ್ಣದೇವರಾಯನು ಅಷ್ಟು ಎತ್ತರವಾಗಿಯೂ ಇಲ್ಲ, ಗಿಡ್ಡನೂ ಇಲ್ಲ ತಿಳಿ ಬಿಳಿಗಪ್ಪು ಬಣ್ಣದವನಿರುವನು. ಬಹಳ ಲಠ್ಠ ಇಲ್ಲ, ಬಹಳ ತೆಳ್ಳಗೂ ಇಲ್ಲ ದಷ್ಟಪುಷ್ಟನಾಗಿರುವನು. ಮೊಗದಲ್ಲಿ ಮೈಲೀ ಕಲೆಗಳಿವೆ. ಇವನು ಆದರ್ಶ ರಾಜನಾದುದರಿಂದ ಜನರಿಗೆ ಅತ್ಯಂತ ಪ್ರೀಯನಾಗಿದ್ದನು. ಸದಾ ಉಲ್ಲಾಸಿಯೂ ಉತ್ಸಾಹಿಯೂ ಇರುವನು. ಪರದೇಶಿಯರಿಗೆ ಬಹಳ ಮಾನ ಮರ್ಯಾದೆಗಳನ್ನು ತೋರುವನು. ಅಂತಃಕರುಣದಿಂದ ಸ್ವಾಗತಿಸುವನು. ಅವನು ಬಂದ ಕಾರಣವನ್ನು ಕೇಳುವನು. ಸಹಾನುಭೂತಿಪೂರ್ವಕವಾಗಿ ಸರಕಾರದ ಸಹಾಯ ನೀಡುವನು. ಪರದೇಶದಲ್ಲಿ (ಅವರ ರಾಜ್ಯದಲ್ಲಿ) ನಡೆಯುತ್ತಿರುವ ರಾಜಪದ್ಧತಿ, ಸಮಾಜ ರಾಜ-ರಾಣಿಯರ ಜೀವನ, ಜನಜೀವನ, ಸಂಪತ್ತು ಮೊದಲಾದವುಗಳ ಬಗ್ಗೆ ಆಸ್ಥೆಯಿಂದ ಕುಳಿತು ಸವಿಸ್ತಾರವಾಗಿ ವಿಚಾರಿಸುವನು.

ಇವನು ದೊಡ್ಡ ರಾಜನು, ನ್ಯಾಯ ಪಕ್ಷಪಾತಿಯೆಂದು ಹೆಸರಾ[illegible] ವನು, ಆದರೆ ಅತ್ಯಂತ ಶೀಘ್ರಕೋಪಿಯು. ಇವನಿಗೆ ಈ ರೀತಿ ಬಿರುದಾ[illegible] ಳಿಗಳಿವೆ. "ಕೃಷ್ಣರಾಜ, ಮಹಾರಾಜ, ರಾಜಾಧಿರಾಜ, ಸಾರ್ವಭೌ[illegible], ಛತ್ರಪತಿ, ತ್ರಿಲೋಕಾಧಿಪತಿ, ತ್ರಿಸಾಗರಾಧಿಪ" ಎಂಬ ಮೊದಲಾದ ಬಿರುದುಗಳಿರಲು ಕಾರಣವೆಂದರೆ ಇವನು ಇವೆಲ್ಲವುಗಳಿಗೂ ನಿಜವಾದ ಅರ್ಹತೆಯುಳ್ಳವನು. ಇವನಲ್ಲಿ ಸೈನ್ಯ ಭೂಮಿ, ಸಂಪತ್ತುಗಳು ಅಷ್ಟು ಅಗಣಿತವಾಗಿದ್ದವು ಆದರೆ ಓರಿಸಾದ ದೊರೆಯೊಡನೆ ಕೃಷ್ಣದೇವರಾಯನು ಸದಾ ಕದನವಾಡುತ್ತಿದ್ದನು. ಅವನಿಂದ ದೇಶವನ್ನೂ ಧನವನ್ನೂ ಸೆಳೆದುಕೊಳ್ಳುತ್ತಲೇ ಇದ್ದನು. ಒಮ್ಮೆ ಓರಿಸಾ ಮುತ್ತಿ ರಾಜನ ಮಗನನ್ನೇ ಎತ್ತಿಕೊಂಡು ವಿಜಯನಗರಕ್ಕೆ ಬಂದಿದ್ದನು. ಆ ಬಾಲಕನು ವಿಜಯನಗರದಲ್ಲಿ ಬಹಳ [illegible]ರ್ಷ

ಕಾಜವಿದ್ದು ಇಲ್ಲಿಯೇ ಸತ್ತನು. ಕೃಷ್ಣದೇವರಾಯನೊಡನೆ ಕದನದ ಪಿಕಲಾಟವೇ ಬೇಡೆಂದು ಓರಿಸಾದ ರಾಜನು ತನ್ನ ಮಗಳನ್ನು ಇವನಿಗೆ ಕೊಟ್ಟು ಲಗ್ನಮಾಡಿದನು. ಅಂದಿನಿಂದ ಮಾವ ಅಳಿಯಂದಿರು ಪ್ರೀತಿ ಯಿಂದ ಇದ್ದರು.

ಕೃಷ್ಣದೇವರಾಯನಿಗೆ ಹನ್ನೆರಡು ಮಂದಿ ಧರ್ಮಪತ್ನಿಯರಿದ್ದರು. ಅವರಲ್ಲಿ ಮೂವರು ಮಾತ್ರ ಪಟ್ಟದ ರಾಣಿಯರು. ಅಂದರೆ ಈ ಮೂವರ ಉದರದಲ್ಲಿ ಜನಿಸಿದ ಮಗನುಮಾತ್ರ ಪಟ್ಟಕ್ಕೆ ಬಾಧ್ಯಸ್ತನು. ರಾಜನ ಹೆಂಡ ರಿಗೆಲ್ಲರಿಗೂ ಗಂಡುಮಕ್ಕಳಿದ್ದರೆ ಈ ಕಾಯಿದೆ ಅಮಲಿನಲ್ಲಿ ಬರುವದು. ಈ ಮೂವರಿಗೂ ಮಕ್ಕಳಾಗದಿದ್ದರೆ ರಾಜನ ಉಳಿದ ಯಾವುದೇ ಪತ್ನಿಗೆ ಗಂಡು ಸಂತತಿಯಾದರೆ ಅವನು ರಾಜನತರುವಾಯ ಬಾಧ್ಯಸ್ಥನೇ ಅಹುದು. ಕೃಷ್ಣದೇವರಾಯನ ಮೂವರು ಪಟ್ಟದ ರಾಣಿಯರಲ್ಲಿ ಒಬ್ಬಳು ಓರಿಸಾದ ರಾಜಕುಮಾರಿ ಎರಡನೆಯವಳು ನರಸಿಂಗರಾಯನ ಮಗಳು ಮೂರನೆಯ ವಳು (ದರಬಾರದ ನರ್ತಕಿಯು ನರ್ತಕಿ) ಸಾಮಾನ್ಯ ಮನೆತನದವಳು. ಆದರೆ ಬಾಲ್ಯದಿಂದಲೂ ರಾಯನು ಈ ಹುಡುಗಿಯಲ್ಲಿ ಅತ್ಯಂತ ಮೋಹಿತ ನಾಗಿದ್ದನು. ಅವಳ ಹೆಸರು ಚಿನ್ನಮ್ಮ ಎಂದು. ಚಿನ್ನಮ್ಮನ ರೂಪ ಲಾವಣ್ಯ ಸದ್ಗುಣ ಮೊದಲಾದವುಗಳಿಗೆ ಮೋಹಿತನಾಗಿಬಿಟ್ಟಿದ್ದನು. "ರಾಜನಾದ ಕೂಡಲೇ ನಿನ್ನನ್ನು ರಾಣಿಯಾಗಿ ಗ್ರಹಿಸುವೆನು" ಎಂದು ವಚನವಿತ್ತಿದ್ದನು. ಈ ಪ್ರಕಾರ ಅವಳನ್ನು ಸಿಂಹಾಸನವೇರಿದ ಕೂಡಲೇ ಲಗ್ನವಾದನು. ಪಟ್ಟದ ಅರಸಿಯನ್ನಾಗಿ ಮಾಡಿದನು. ನಾಗಲಾಂಬಿಕೆಯೆಂದು ಕರೆದನು. ಅವಳ ಹೆಸರು ಚಿರವಾಗಿ ಉಳಿಯಲೆಂದು ಅವಳ ಹೆಸರಿನ (ನಾಗಲಾಪುರ) ಊರನ್ನು ಕಟ್ಟಿಸಿದನು. ಅಷ್ಟು ಗಾಢವಾದ ಪ್ರೇಮವನ್ನು ಅವಳಲ್ಲಿ ರಾಜನು ಇಟ್ಟಿದ್ದನು.

ಕೃಷ್ಣದೇವರಾಯನ ಪ್ರತಿಯೊಬ್ಬ ರಾಣಿಗೂ ಬೇರೆ ಬೇರೆ ಅರಮನೆ ಗಳೇ ಇವೆ. ಪ್ರತಿಯೊಬ್ಬ ರಾಣಿಯ ಸೇವೆಗೆ ಅನೇಕ ಮಂದಿ ದಾಸಿಯರ ಇರುವರು. ರಾಣಿಯರ ಅರಮನೆಗಳನ್ನು ಕಾಯಲು ಅಸಂಖ್ಯಾತ ಶಿಖಂಡಿ

ಗಳು ಸದಾಕಾಲ ಸಜ್ಜಾಗಿ ನಿಂತಿರುವರು. ಯಾವ ಪುರುಷನಿಗೂ ರಾಣೀ ಆವಾರಗಳಲ್ಲಿ ಪ್ರವೇಶವಿರುವದಿಲ್ಲ. ರಾಜನ ಅಪ್ಪಣೆಯನ್ನು ಪಡೆದಂಥ ವೃದ್ಧನೂ ದೊಡ್ಡ ಮನೆತನದವನೂ ಮಾತ್ರ ರಾಣೀವಾಸಕ್ಕೆ ಭೆಟ್ಟಿ ಕೊಡ ಬಹುದು. ರಾಣಿಯು ತನ್ನ ಅರಮನೆಯನ್ನು ಬಿಟ್ಟು ಹೊರಗೆ ಹೊರಡಬೇ ಕಾದರೆ ಮೇಣೆಯಲ್ಲಿ ಹೊರಡುವಳು. ಅದನ್ನು ಹೊರಲು ಶಿಖಂಡಿಗಳಿರು ವರು. ಮೇಣೆಯ ಬಾಗಿಲಗಳನ್ನು ಭದ್ರವಾಗಿ ಮುಚ್ಚಿರುವದರಿಂದ ರಾಣಿಯ ದರ್ಶನವು ಯಾರಿಗೂ ಆಗುವದಿಲ್ಲ. ಹೊರಗಿನವರನ್ನು ಸಹ ರಾಣಿಯು ನೋಡಲಾರಳು. ರಾಣಿಯ ಮೇಣೆಯು ಬೀದಿಯಲ್ಲಿ ಹೊರಟರೆ ಪ್ರಜೆಗಳೆ ಲ್ಲರೂ ವಿಶಿಷ್ಟ ಅಂತರದವರೆಗೆ ದೂರ ಸರಿದುಬಿಡತಕ್ಕದ್ದು.

ಪ್ರತಿಯೊಬ್ಬ ರಾಣಿಯಲ್ಲಿ ಅಗಣಿತ ಧನವಿರುವದು. ಅವಳಲ್ಲಿ ತೃಪ್ತಿ ಯಾಗುವಷ್ಟು ವಜ್ರ ವೈಢೂರ್ಯ, ಪಚ್ಚ ಪುಷ್ಯರಾಗ ಮೊದಲಾದವುಗಳಿಂದ ಕೆಚ್ಚಿದ ಬಂಗಾರದ ಆಭರಣಗಳಿರುವವು. ಮುತ್ತಿನ ಸರಗಳ ರಾಶಿಯೇ ಇರು ವದು. ಪ್ರತಿಯೊಬ್ಬ ರಾಣಿಯ ಅಂಗದಾಸಿಯರು ೩೦ ತರುಣಿಯರಿರುವರು ಅವರು ತ್ರಿಲೋಕ ಸುಂದರಿಯರಿರುವರಷ್ಟೇ ಅಲ್ಲ ಅವರ ಮೈಮೇಲಿನ ಆಭರಣಗಳನ್ನು ನೋಡಿದರೆ ಇವರೇ ರಾಣಿಯರೋ ಎಂಬ ಸಂಶಯವುಂಟಾ ಗುವದು. ಈ ೩೦ ಮಂದಿ ದಾಸಿಯರು ಕೇವಲ ಸುಂದರಿಯರಾಗಿರದೇ ಸಕಲ ಕಲಾಪ್ರವೀಣೆಯರಾಗಿರುವರು. ಖಡ್ಗ ಭಲ್ಲೆಗಳ ಯುದ್ಧ ಬಲ್ಲವರಿರು ವರೆಂಬುದು ಆಶ್ಚರ್ಯದ ಸಂಗತಿಯು.

ಮೂವರು ಪಟ್ಟದರಸಿಯರ ಸಡಗರ ಶೃಂಗಾರ ಅವರಲ್ಲಿಯ ಧನ ಕನಕ, ಸೇವಕಿಯರ ಗುಂಪುಗಳನ್ನು ವರ್ಣಿಸಲು ಸಾಧ್ಯವಿಲ್ಲ. ಆದರೆ ಈ ಮೂವರಿಗೂ ಸಮವಾಗಿ ಈ ವೈಭವವನ್ನು ರಾಜನು ಕೊಟ್ಟಿರುವದರಿಂದ ಅವರಲ್ಲಿ ವೈಷಮ್ಯ ಮೊದಲಾದವುಗಳೇನೂ ಇರದೇ ಪರಸ್ಪರರು ಪ್ರೀತಿಯಿಂ ದದ್ದು ಸುಖಿಯರಾಗಿದ್ದರು. ರಾಜನು ತನಗಿರುವ ಅರಮನೆಯಲ್ಲಿ ಪ್ರತ್ಯೇಕವಾಗಿಯೇ ವಾಸಿಸುತ್ತಾನೆ. ಇವನಲ್ಲಿ ಪುರುಷ ಸೇವಕರೂ ಶಿಖಂಡಿ ಗಳು ಮಾತ್ರ ಸೇವೆಗೆ ಇರುತ್ತಾರೆ.

ರಾಜನು ತಾನು ಬಯಸಿದ ರಾಣಿಯೊಡನೆ ಕಾಲಕಳೆಯಬೇಕೆಂದು ಆಶಿಸಿದೊಡನೆಯೇ ತನ್ನ ಶಿಖಂಡಿಯಿಂದ ಅಂಥ ರಾಣಿಯ ಮನೆಗೆ ಸುದ್ದಿ ಕಳಿಸುತ್ತಾನೆ. ಆ ಶಿಖಂಡಿಯು ರಾಣಿಯ ಮನೆಯ ಶಿಖಂಡಿಗೆ ಸುದ್ದಿ ಮುಟ್ಟಿಸುತ್ತಾನೆ. ಅವನು ರಾಣಿಯ ಅಂಗದಾಸಿಯರಲ್ಲಿ ಓರ್ವಳಿಗೆ ಹೇಳು ತ್ತಾನೆ. ಅಂಗದಾಸಿಯು ರಾಜನ ವಾರ್ತೆಯನ್ನು ರಾಣಿಗೆ ತಿಳಿಸುತ್ತಾಳೆ. ರಾಣಿಯು ಕೂಡಲೇ ಸರ್ವಾಲಂಕಾರ ಭೂಷಿತಳಾಗಿ ಮೇಣೆಯಲ್ಲಿ ಕುಳಿತು ರಾಜನಲ್ಲಿ ಹೋಗುತ್ತಾಳೆ. ಅಥವಾ ರಾಜನು ತಾನೇ ಬರುವೆನೆಂದು ಹೇಳಿ ಕಳಿಸಿದ್ದರೆ ರಾಜನ ಸ್ವಾಗತಕ್ಕಾಗಿ ತನ್ನ ಅರಮನೆಯಲ್ಲಿ ಸಿದ್ಧತೆ ನಡೆಸಿ ಕಾದಿ ರುತ್ತಾಳೆ. ರಾಜ-ರಾಣಿಯರ ದರ್ಶನ, ಮಿಲನ, ಸಂಭಾಷಣೆ ಮೊದಲಾದವು ಗಳು ಉಳಿದ ಯಾವ ರಾಣಿಯರಿಗೂಗೊತ್ತಾಗುವದಿಲ್ಲ. ಅಷ್ಟು ಗೌಪ್ಯದಿಂದ ಈ ಕಾರ್ಯಭಾಗವು ಜರುಗುತ್ತಿರುತ್ತದೆ. ರಾಜ-ರಾಣಿಯರು ಸುಖಭೋಗಿಸಿ ತಮ್ಮ ತಮ್ಮ ನಿವಾಸಕ್ಕೆ ತೆರಳುತ್ತಾರೆ.

ಕೃಷ್ಣದೇವರಾಯನು ಅರುಣೋದಯದಲ್ಲಿಯೇ ಏಳುತ್ತಾನೆ. ಎದ್ದೊ ಡನೆಯೇ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಎಳ್ಳೆಣ್ಣೆಯನ್ನು (ಈಗಿನ ೩/೪ ಗಿಂಟದಷ್ಟು) ಕುಡಿಯುತ್ತಾನೆ. ಮೈಮೇಲಿನ ಕಲಿ ವಸ್ತ್ರವನ್ನುತೆಗೆದು ಕೌಪೀನವೊಂದನ್ನು ಮಾತ್ರ ಧರಿಸಿ ಮೈಗೆಲ್ಲಎಳ್ಳೆಣ್ಣೆಯನ್ನು ಚನ್ನಾಗಿ (ತಪ ತಪ ಎನ್ನುವಂತೆ) ಸೇವಕರಿಂದ ಹಚ್ಚಿಸಿಕೊಳ್ಳುತ್ತಾನೆ. ಆಮೇಲೆ ದರಬಾ ರದ ಪೈಲವಾನರೊಡನೆ ಕುಸ್ತೀ ಆಡಿ ದಣಿಯುತ್ತಾನೆ. ಆಮೇಲೆ ಸೂರ್ಯೋ ದಯವಾಗುವವರೆಗೆ ಕುದುರೆ ಸವಾರಿಮಾಡಿ ಭರದಿಂದ ಓಡಿಸುತ್ತ ಶಹರದ ಸುತ್ತಲೂ ತಿರುಗಿ ಬರುತ್ತಾನೆ. ಬಂದು ಸ್ನಾನಗೃಹವನ್ನು ಪ್ರವೇಶಿಸು ತ್ತಾನೆ.

ಕೃಷ್ಣದೇವರಾಯನ ಸ್ನಾನದ ವ್ಯವಸ್ಥೆಯು ಓರ್ವಬ್ರಾಹ್ಮಣನ ಕೈಯ ಲ್ಲಿದೆ. ಈ ಬ್ರಾಹ್ಮಣನು ರಾಯನಿಗೆ ಅತ್ಯಂತ ವಿಶ್ವಾಸಿಕನು. ಇವನು ಅತ್ಯಂತ ಶಿರಿವಂತನೆಂದು ಜನರು ಹೇಳುವರು. ಬ್ರಾಹ್ಮಣನು ಮಂತ್ರವನ್ನು ಪಠಿ ಸುತ್ತ ರಾಜನಿಗೆ ಸ್ನಾನ ಮಾಡಿಸುತ್ತಾನೆ. ಸ್ನಾನವಾದಬಳಿಕ ಮಡಿವಸ್ತ್ರ ಧರಿಸಿ

ರಾಜನು ದೇವರ ಮನೆಯನ್ನು ಪ್ರವೇಶಿಸುತ್ತಾನೆ. ಅಲ್ಲಿ ದೇವರ ಪೂಜೆ, ಭಜನೆ, ಜಪತಪಾದಿಗಳನ್ನು ಮುಗಿಸಿಕೊಂಡು ಅರಮನೆಯ ಆವಾರದಲ್ಲಿಯೇ ಇರುವ ಕಚೇರಿಯೆಂದು ಕರೆಯಲ್ಪಡುವ ಮಹಲಿಗೆ ಬರುತ್ತಾನೆ. ಈ ಮಹಲು ಕಮಾನು ಕಮಾನುಗಳಿಂದಲೇ ಕಟ್ಟಿರುವ ವಿಶಾಲವಾದ ಭವನವಾಗಿದೆ. ಕಮಾನುಗಳಲ್ಲಿ ಅಮೂಲ್ಯವಾದ ಬೆಲೆಬಾಳುವ ರೇಶಿಮೆಯ ವಸ್ತ್ರಗಳ ಪರದೆಗಳು ವಿಲಕ್ಷಣ ಸೌಂದರ್ಯವನ್ನೀಯುವಂತೆ ಇಳಿಬಿಡಲ್ಪಟ್ಟಿರುತ್ತವೆ. ಅಲ್ಲಿಯ ಕಮಾನುಗಳಿಗೆಲ್ಲ ಕಲಾತ್ಮಕವಾಗಿ ವಿವಿಧ ಬಣ್ಣಗಳ ಚಿತ್ರಗಳನ್ನು ಬರೆದಿರುತ್ತಾರೆ. ನಡುವಿನ ವಿಶಾಲವಾದ ಭವನದಲ್ಲಿಯ ಮಂಟಪದ ಎಡಬಲದಲ್ಲಿ ಅತ್ಯಂತ ಸುಂದರಾಕಾರದ ಸ್ತ್ರೀಗೊಂಬೆಗಳನ್ನು (ಮನುಷ್ಯಕೃತಿಯವು) ನಿಲ್ಲಿಸಿದ್ದಾರೆ. ಅವುಗಳ ನಡುವಿನ ಆಸನದಲ್ಲಿ ರಾಜನು ವಿರಾಜಮಾನನಾಗುತ್ತಾನೆ. ರಾಜ್ಯದ ಕಾರಭಾರವನ್ನೂರಾಜಧಾನಿಯ ವಿಷಯಗಳನ್ನು ಕಾಗದಪತ್ರಗಳನ್ನೂ ಸ್ವತಃ ನೋಡುತ್ತಾನೆ. ಆ ಮೇಲೆ ಇದೇ ಸ್ಥಳದಲ್ಲಿ ವಿನೋದಪರ ಹರಟೆಯನ್ನು ಅತ್ಯಂತ ನಿಕಟ ಸೇನಾಪತಿಗಳೊಡನೆಯೂ ಪ್ರಧಾನಿಗಳೊಡನೆಯೂ ಹರಟುತ್ತಾನೆ. ಇಂಥವರಲ್ಲಿ ವೃದ್ಧನಾದ ಸಾಳುವ ತಿಮ್ಮನು ಮುಖ್ಯನು. ಇವನಲ್ಲಿ ರಾಜನದು ಬಹಳ ವಿಶ್ವಾಸ ಮತ್ತು ಸಲಿಗೆಯಿದೆ. ತಿಮ್ಮಪ್ಪನೇ ಅರಮನೆಯ ಸಕಲ ಕಾರಭಾರವನ್ನು ನೋಡಿಕೊಳ್ಳುತ್ತಾನೆ. ಇಷ್ಟೇ ಅಲ್ಲ, ಅವನ ದರ್ಪ ಮತ್ತು ವರ್ಚಸ್ಸು ರಾಜ್ಯದಲ್ಲಿಬಹಳವಿದೆ. ವಿಜಯನಗರದ ಸಕಲ ಮಾಂಡಲೀಕರು ರಾಜನಿಗೆ ತೋರುವ ಮಾನಮರ್ಯಾದೆಗಳನ್ನು ಸಾಳುವ ತಿಮ್ಮನಿಗೂ ತೋರುತ್ತಾರೆ.

ಇದಾದಮೇಲೆ ಹೊರಗೆ ತನ್ನ ದರ್ಶನಕ್ಕಾಗಿ ಕಾದಿರುವ ಸರದಾರರು ಮಾಂಡಲೀಕರು ಅತಿಥಿ ಅಭ್ಯಾಗತರೇ ಮೊದಲಾದವರನ್ನು ಒಳಗೆ ಕರೆಯಿಸಿಕೊಳ್ಳುತ್ತಾರೆ. ಅವರೆಲ್ಲರೂ ಇವನಿಗೆ ವಂದನೆಗಳನ್ನೂ ಅರ್ಪಿಸಿ ದೂರದಲ್ಲಿ ಗೋಡೆಗೆ ಆತುಕೊಂಡು ನಿಲ್ಲುತ್ತಾರೆ. ಆಗ ಅವರಾರೂ ಪರಸ್ಪರ ಮಾತಾಡುವದಿಲ್ಲ. ವೀಳ್ಯೆಯನ್ನು ಮೆಲ್ಲುವದಿಲ್ಲ.ರಾಜಪದ್ಧತಿಯ ಪ್ರಕಾರ ಕೈ ಕಟ್ಟಿಕೊಂಡು ನೆಲದಲ್ಲಿ ದೃಷ್ಟಿಯನ್ನಿಟ್ಟು ನಿಂತಿರುತ್ತಾರೆ. ಇವರಲ್ಲಿ ಒಬ್ಬನ ಸಂಗಡ ರಾಜನು ಮಾತಾಡಲು ಇಚ್ಛಿಸಿದರೆ ಮೂರನೆಯವನ ದ್ವಾರಾ ಪ್ರಶ್ನೆ

ಕೇಳುತ್ತಾನೆ. ಆಗ ಆ ಸರದಾರನು ಮೇಲೆ ದೃಷ್ಟಿ ಎತ್ತಿ ಮುಂದೆ ಬಂದು ತಾನು ಕೂಡ ರಾಜನಿಗೆ ನೇರವಾಗಿ ಉತ್ತರ ಕೊಡದೇ ಆ ಮೂರನೆಯವ ನೆಡೆಗೆ ತಿರುಗಿ ಉತ್ತರ ಕೊಡುತ್ತಾನೆ. ಭಾಷಣಗಳು ಮುಗಿದಕೂಡಲೇ ಸರ ದಾರನು ತಿರುಗಿ ತನ್ನ ಸ್ಥಳಕ್ಕೆ ಹೋಗಿ ನಿಲ್ಲುತ್ತಾನೆ. ಈ ರೀತಿ ಎಲ್ಲರೊಡ ನೆಯೂ ಮಾತುಕತೆಗಳಾಗುತ್ತವೆ. ರಾಜನು ಹೋಗಲು ಅಪ್ಪಣೆ ಕೊಟ್ಟ ಮೇಲೆಯೇ ಅವರು ಆ ಸ್ಥಳ ಬಿಟ್ಟು ಹೋಗತಕ್ಕದ್ದು, ಹೋಗುವಾಗ ರಾಜನ ಕಡೆಗೆ ನೋಡಿ ವಂದನೆಯನ್ನರ್ಪಿಸಿ ಹೋಗುತ್ತಾರೆ. ಎರಡೂ ಹಸ್ತ ಗಳನ್ನು ಜೋಡಿಸಿ ತಲೆಯಮೇಲೆ ಶಕ್ಯವಿದ್ದಷ್ಟು ಎತ್ತರಕ್ಕೆ ಒಯ್ದು ವಂದಿ ಸುವುದು ವಿಜಯನಗರದ ರಾಜ್ಯದ ರಾಜಕೀಯ ವಂದನೆಯ ಪದ್ಧತಿಯು ಈ ಪ್ರಕಾರವೇ ಎಲ್ಲರೂ ವಂದಿಸಬೇಕು. ಈ ಪ್ರಕಾರ ರಾಜಧಾನಿಯ ದೊಡ್ಡ ದರ್ಜೆಯಲ್ಲಿರುವವರೆಲ್ಲರೂ ರಾಜನೆದುರು ಬಂದು ವಂದನೆಗಳನ್ನರ್ಪಿಸಿ ತೆರಳಲೇಕು.

## ೧೨

ಮೈಸೂರ ಅರಸರು—

ಮೈಸೂರ ಅರಸರು ಆಗಿನ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿ ಆಳುತ್ತಿದ್ದರು. ಇ. ಸ, ೧೫೧೩ ರಿಂದ ೧೫೫೨ರ ವರೆಗೆ ಬೆಟ್ಟದ ಚಾಮರಾಯನೆಂಬವನು ಮೈಸೂರ ಪ್ರಾಂತವನ್ನು ಆಳುತ್ತಿದ್ದನು. ಇವನಿಗೆ ಮೂವರು ಗಂಡುಮಕ್ಕಳಿದ್ದರು. ಬೆಟ್ಟದ ಚಾಮರಾಯ ಸಾಯುವಾಗ ರಾಜ್ಯವನ್ನು ಮೂರು ವಿಭಾಗಗಳನ್ನಾಗಿ ಮಾಡಿ ಮೂವರು ಮಕ್ಕಳಲ್ಲಿ ಹಂಚಿ ಸತ್ತನು. ಆದರೆ ಇಬ್ಬರು ಸಂತತಿಹೀನರಾಗಿ ಸತ್ತರು. • ಮೂರನೆಯವನು ಬಲಾಢ್ಯನೂ ರಾಜಕಾರಣಿಯು ಆಗಿದ್ದರಿಂದ ಅದೆಲ್ಲ (೨ ವಿಭಾಗಗಳನ್ನು)ವನು ತನ್ನ ರಾಜ್ಯದಲ್ಲಿ ಸೇರಿಸಿಕೊಂಡು ಮತ್ತೆ ಏಕ ಮೈಸೂರನ್ನಾಗಿ ಮಾಡಿದನು ಇವನ ಹೆಸರು ಹಿರಿಯ ಚಾಮರಾಯನೆಂದಿದ್ದಿತು. ೧೫೬೫ರಲ್ಲಿ ವಿಜಯನಗರವು ನಾಶವಾದೊಡನೆಯೇ ಇವನು ಸ್ವತಂತ್ರವಾಗಿ ಆಳತೊಡಗಿದನು.ಆದರೆ

೧೯೫

೧೫೭೮ರಲ್ಲಿ ಇವನ ಅಪ್ಪನೊಬ್ಬನು ಹಿರಿಯ ಚಾಮರಾಯನನ್ನು ಎದುರಿಸಿ ಅವನನ್ನು ಸೋಲಿಸಿ ಓಡಿಸಿದನು. ತಾನು ಮೈಸೂರ ಮಹಾರಾಜನೆಂದು ಸಾರಿದನು. ಇವನ ಹೆಸರು ರಾಜಾ ಉದಯರಾಯನೆಂದಿದ್ದಿತು. ಇವನ ತರುವಾಯ ಮೈಸೂರ ಪಟ್ಟಕ್ಕೆ ಯಾರು ಬಂದರೆಂಬುದು ಗೊತ್ತಾಗಿಲ್ಲ. ಆದರೆ ಇ. ಸ. ೧೫೯೩ರಲ್ಲಿ ವಿಜಾಪುರದ ಸುಲ್ತಾನನಾದ ಇಬ್ರಾಹಿಮ ಆದಿಲ ಶಹನು ಮೈಸೂರನ್ನು ಮುತ್ತಿದನು. ಮೂರು ತಿಂಗಳು ಅವ್ಯಾಹತವಾದ ಹೋರಾಟದ ನಂತರ ಮೈಸೂರ ರಾಜನು ಶರಣಾಗತನಾದನು

೧೩

ಸೈನಿಕರ ವಿವರ—

ಹಿಂದೂ ಕಾಲಾಳುಗಳು ಸೈನ್ಯದಲ್ಲಿ ಕೇವಲ ಚಡ್ಡಿಯನ್ನು ಮಾತ್ರ ಧರಿಸುತ್ತಿದ್ದರು. ತಲೆಯ ಮೇಲಾಗಲೀ ಕಾಲುಗಳಲ್ಲಿಯಾಗಲೀ ಏನೂ ಇರುತ್ತಿರಲಿಲ್ಲ. ಎಡಗೈಯಲ್ಲಿ ಢಾಲು ಬಲಗೈಯಲ್ಲಿ ಖಡ್ಗವನ್ನು ಧರಿಸುತ್ತಿದ್ದರು ಕೆಲವರು ಬಿಲ್ಲು ಬಾಣ ಪ್ರವೀಣರೂ ಇದ್ದರು. ಆನೆಗಳನ್ನು ರಣರಂಗದಲ್ಲಿ ಉಪಯೋಗಿಸುತ್ತಿದ್ದರು. ದೊಡ್ಡ ಬರ್ಚಿಗಳನ್ನು ಆನೆಗಳ ಕೋರೆಗೆ ಕಟ್ಟುತ್ತಿದ್ದರು. ಸೊಂಡಲಿಗೆ ಕುಡಗೋಲಿನಂಥ (ಕಂದ್ಲಿ) ಹದನವಾದ ಆಯುಧವನ್ನು ಕಟ್ಟುತ್ತಿದ್ದರು. ಇವುಗಳಿಂದ ಜನರನ್ನು ಕೊಲ್ಲುವ ವಿದ್ಯೆಯನ್ನು ಆನೆಗೆ ಕಲಿಸುತ್ತಿದ್ದರು. ಇಡೀ ಆನೆಯ ಮತ್ತು ಕುದುರೆಗಳ ದೇಹಕ್ಕೆ ಕಬ್ಬಿಣ ತಗಡಿನ ಆಚ್ಛಾದನೆಯನ್ನು ಹಾಕುತ್ತಿದ್ದರು. (ಯೋಧನು ಜಿರಕತ್ತನು ಧರಿಸಿದಂತೆ) ಆನೆಯಮೇಲೆ ದೊಡ್ಡ ಬುಟ್ಟಿಯಂಥ ಅಂಬಾರಿಯನ್ನು ಕಟ್ಟುತ್ತಿದ್ದರು. ಅದರಲ್ಲಿ ೧೨ ಶೂರರು ತೋಪು ಬಂದೂಕುಗಳನ್ನು ಹಿಡಿದವರಾಗಲೀ ಬಿಲ್ಲು ಬಾಣ ಧರಿಸಿದವರಾಗಲೀ ಇರುತ್ತಿದ್ದರು. ಹಳ್ಳಿಯ ನಾಗರಿಕರು ಬಡವರು ಆದರೆ ಸರದಾರರು ಮಾತ್ರ ಅತ್ಯಂತ ಧನಿಕರೂ ಐಶ್ವರ್ಯ ಸುಖಗಳಲ್ಲಿ ಲೋಲಾಡುವಂಥವರೂ ಆಗಿರುತ್ತಾರೆ. ಸರದಾರರು ಬೆಳ್ಳಿಯ ಪಲ್ಲಕ್ಕಿಯಲ್ಲಿ ತಿರುಗಾಡುತ್ತಾರೆ. ಇದರ ಮುಂದೆ ೨೦ ಕುದುರೆಯ ಸವಾ

ರರು ಸಾಗಿರುತ್ತಾರೆ. ಅವರು ಮತ್ತು ಅವರ ಕುದುರೆಗಳೂ ಬಂಗಾರದ ಆಭರಣಗಳಿಂದ ಸಿಂಗರಿಸಲ್ಪಟ್ಟಿರುತ್ತಾರೆ. ಸರದಾರರ ಪಲ್ಲಕ್ಕಿಗಳ ಹಿಂದೆ ೩೦೦ ಕುದುರೆ ಸವಾರರೂ ೫೦೦ ಕಾಲಾಳುಗಳೂ ವಾದ್ಯ ಬಾರಿಸುವವರೂ ಹಿಲಾಲುಗಳನ್ನು ಹಿಡಿಯುವವರೂ ಗಾಯಕರೂ ನರ್ತಕಿಯರ ಗುಂಪು ಗಳೂ ಸಾಗಿರುತ್ತವೆ.

ಇನ್ನು ಕಲಬುರ್ಗಿಯ ಸುಲ್ತಾನನ ಸೈನ್ಯ ಸಾಮಾನ್ಯವಾಗಿ ಒಂದು ಸಾವಿರ ಕುದುರೆ ಸವಾರರು ಇರುವರು. ಅವರ ಕುದುರೆಗಳಿಗೆಲ್ಲ ಬಂಗಾ ರದ ಆಭರಣ ಕಡಿವಾಣ ಮೊದಲಾದವುಗಳಿರುವವು. ಒಂದು ನೂರು ಒಂಟೆ ಗಳಿರುವವು. ಅವುಗಳ ಮೇಲೆ ಹಿಲಾಲುಗಳನ್ನು ಹಿಡಿದು ದಾರಿ ತೋರುವ ದೂತರು ಕುಳಿತಿರುವರು. ಮೂರುನೂರು ತುತೂರಿ ಮೊದಲಾದ ರಣವಾದ್ಯ ಗಳನ್ನು ಊದುವವರಿರುವರು. ಮೂರು ನೂರು ತರುಣ ನರ್ತಕಿಯರು ಇದ್ದೇ ತೀರಬೇಕು. ಸುಲ್ತಾನನ ಕುದುರೆಯು ಬಂಗಾರದ ವಿಶೇಷವಾದ ಆಭರಣಗಳಿಂದ ಸಿಂಗರಿಸಲ್ಪಡುವದು. ಅದರ ಮೇಲೇರಿದಾಗ ಸುಲ್ತಾ ನನು ಇಂದ್ರ ನೀಲಮಣಿಗಳಿಂದ ಕೊಚ್ಚಿದ ಶಿರಸ್ತ್ರಾಣವನ್ನು ಧರಿಸಿರುವನು. ಬಂಗಾರದ ಹಿಡಿಕೆಗಳುಳ್ಳ ಮೂರು ಖಡ್ಗಗಳು ಅವನ ಟೊಂಕದಲ್ಲಿ ಜೋತು ಬಿದ್ದಿರುವವು.

ಸುಲ್ತಾನನ ತಮ್ಮನು ಬಂಗಾರದ ನಾಲ್ಕು ಗಾಲಿಗಳ ರಥದಲ್ಲಿಕುಳಿತು ಸಾಗುವನು. ರಥದಲ್ಲಿ ಹಂಸತೂಲಿಕಾ ಗಾದೆಗೆ ರೇಶಿಮೆಯ ಅಮೂಲ್ಯ ವಾದ ವಸ್ತ್ರವನ್ನು ಹಾಸಿರುವನು. ರಥದ ನಾಲ್ಕು ಕಮಾನುಗಳಿಗೆ ಜರದಂ ಚಿನ ವಿವಿಧ ಬಣ್ಣದ ರೇಶಿಮೆಯ ಪಡದೆಗಳನ್ನು ಇಳಿಬಿಟ್ಟಿರುವರು. ಈ ಬಂಗಾರದ ರಥವು ನವರತ್ನಗಳಿಂದ ನಿಬಿಡವಾಗಿ ಕೆತ್ತಲ್ಪಟ್ಟಿರುವರು. ಈ ರಥದ ಶಿಬಿರವು ಬಂಗಾರದ್ದಿರುವದು. ನಾಲ್ಕು ಕುದುರೆಗಳು ಇದನ್ನು ಎಳೆ ಯುವವು. ಒಳಗೆ ಮಹಮ್ಮುದಶಹನು ಕುಳಿತಿರುವದು. ಅವನ ಸುತ್ತಲೂ ಅನುಚರರೂ ಗಾಯಕಿಯರು, ನರ್ತಕಿಯರೂ ಅಸಂಖ್ಯಾತರಿರುವರು. ಇವನ ಜೊತೆಗೆ ಇವನ ತಾಯಿಯೂ ತಂಗಿಯೂ ಇರುವರು. ಮತ್ತು ೨

ಸಾವಿರ ಸುಂದರಿಯರು ಮಹಮೂದನ ಸೇವಾಸ ಖಗಳನ್ನೀಯುತ್ತ ಸಾಗಿ ರುವರು. ಇವರೆಲ್ಲರೂ ಕುದುರೆಯ ವೇಲಿರಿಸಿದ ವಿಶಿಷ್ಟವಾದ ಪಾಲಕಿಗ ಳಲ್ಲಿ ಸಾಗಿರುವರು. ಈ ಪಲ್ಲಕ್ಕಿಗಳು ಬಂಗಾರದವಿರುವವು.

## ೧೪

ನವರಾತ್ರಿಯ ವರ್ಣನೆ:—

ಮಹಾನವಮಿ ನವರಾತ್ರಿ ಸಮಾರಂಭಗಳು ನಡೆಯುವ ಸ್ಥಳವು ಅತ್ಯಂತ ವಿಶಾಲವಾಗಿದ್ದು ಸಿರಿಸಂಪತ್ತಿನಿಂದ ಸಿಂಗರಿಸಲ್ಪಟ್ಟಿರುವದು. ಈ ಮಂಟಪವನ್ನೂ ಇವನ್ನು ಸಿದ್ಧಪಡಿಸಿದ ರೀತಿಯನ್ನೂ ಇದಕ್ಕಾಗಿ ಮಾಡಿದ ವೆಚ್ಚವನ್ನೂ ನಾನು ಶಬ್ದಗಳಲ್ಲಿ ಬಣ್ಣಿಸಲಾರೆ ಆದುದರಿಂದ ಮುಂದಿನ ವಿವರ ಗಳನ್ನಷ್ಟೇ ಹೇಳುತ್ತೇನೆ. ಈ ವಿಶಾಲವಾದ ಮಂಟಪದಲ್ಲಿಯ ಉನ್ನತವಾದ ರಂಗದಲ್ಲಿ ನಟ್ಟನಡುವೆ ಇರಿಸಿದ ನವರತ್ನ ಖಚಿತವಾದ ಬಂಗಾರದ ಸಿಂಹಾ ಸನದಲ್ಲಿ ರಾಜನು ಬಂದು ವಿರಾಜಮಾನನಾಗುತ್ತಾನೆ. ಆಗ ಅಲ್ಲಿದ್ದ ಪರಿವಾ ರವೆಲ್ಲವೂ ಅವನಿಗೆ ವಂದನೆಗಳನ್ನು ಅರ್ಪಿಸುತ್ತದೆ. ಆಮೇಲೆ ದರಬಾರದ ಪೈಲವಾನರು ಬಂದು ಕೆಳಗೆ ನೆಲಮೇಲೆ ಕೂಡ್ರುತ್ತಾರೆ. ರಾಜನು ಹೇಳಲಿ ಬಿಡಲಿ ಪೈಲವಾನರಿಗೆ ಕೂಡ್ರಲು ಅಧಿಕಾರವುಂಟು. ಉಳಿದವರು ಎಷ್ಟೇ ದೊಡ್ಡವರಿರಲಿ ಪ್ರಬಲ ಮಾಂಡಲೀಕ ಸೇನಾಪತಿಅಮಾತ್ಯ ಬೇಕಾದವರಿರಲಿ ರಾಜನು ಕೂಡ್ರಲು ಹೇಳದ ವಿನಃ ಆಸನವನ್ನು ಅವರು ಸ್ವೀಕರಿಸಬಾರ ದೆಂಬ ನಿಯಮವಿದೆ. ಮತ್ತು ರಾಜನೆದುರು ಈ ಪೈಲವಾನರು ಮತ್ತು ನರ್ತಕಿಯರಂತೂ ರಾಜನೆದುರೇ ವೀಳ್ಯದೆಲೆ ತೆಗೆದು ಬಾಯಿಯಲ್ಲಿ ಹಾಕಿ ಕೊಳ್ಳುವರು.

ರಾಜನು ಸಿಂಹಾಸನದಲ್ಲಿ ಕುಳಿತೊಡನೆ ತನ್ನ ಸಂಬಂಧಿಕರಾಗಿರುವ ಎರಡು ಮೂವರಿಗೆ ತನ್ನ ಸನಿಯದ ಆಸನದಲ್ಲಿ ಕೂಡ್ರಲು ಹೇಳುತ್ತಾನೆ. ಆ ಗುಂಪಿನಲ್ಲಿ ಅತ್ಯಂತ ಶ್ರೇಷ್ಠನೂ ಮರ್ಯಾದೆಗೆ ಯೋಗ್ಯನೂ

ಆದವನೆಂದರೆ (ಕೃಷ್ಣದೇವರಾಯನ ಆಳಿಕೆಯಲ್ಲಿ) ಮೈಸೂರ ರಾಜ್ಯ ಒಡೆಯನಾದ ಶ್ರೀರಂಗಪಟ್ಟಣದ ಕುಮಾರವೀರ್ಯನು, ಇವನು ರಾಯನ ಮಗ್ಗಲಲ್ಲಿಯೇ ಬಲಗಡೆಯಲ್ಲಿ ಕುಳಿತುಕೊಳ್ಳುತ್ತಾನೆ. ಉಳಿದವರೆಲ್ಲ ರಾಜನ ಹಿಂದೆ ಕುಳಿತುಕೊಳ್ಳುತ್ತಾರ.

ಸಮಾರಂಭದ ಸಕಲ ಕಾರ್ಯದಲ್ಲಿಯೂ ರಾಜನು ಶುಭ್ರವಾದ ಬಿಳೀ ರೇಶಿಮೆಯ ಜರದಂಚಿನ ವಸ್ತ್ರಗಳನ್ನೇ ಧರಿಸುತ್ತಾನೆ. ನವರತ್ನ ಖಚಿತವಾದ ಅನೇಕಾನೇಕ ಆಭರಣಗಳನ್ನೂ ಧರಿಸುತ್ತಾನೆ. ಮುತ್ತಿನ ಸರಗಳನ್ನು ಹಾಕಿಕೊಂಡಿರುತ್ತಾರೆ. ಅವನ ಹಿಂದೆಯೇ ಮಗ್ಗುಲಲ್ಲಿ ತಾಂಬೂಲಕರಡಿಕೆಯನ್ನು ಹಿಡಿದವರೂ ರಾಜ ಖಡ್ಗವನ್ನು ಹರಿವಾನದಲ್ಲಿಟ್ಟು ಹಿಡಿದುಕೊಂಡವನೂ ಮತ್ತು ಅನೇಕ ರಾಜ ಚಿಹ್ನಗಳನ್ನು ಒಬ್ಬೊಬ್ಬರು ಒಂದೊಂದನ್ನು ಹಿಡಿದಂಥವರೂ ನಿಂತಿರುತ್ತಾರೆ. ಸಿಂಹಾಸನದ ಸನಿಯದಲ್ಲಿದ್ದ ಪೀಠದ ಮೇಲೆ ಅರಮನೆಯ ದೇವರುಗಳನ್ನು ಇಟ್ಟು ಸಿಂಗರಿಸುತ್ತಾರೆ. ಅವರ ಸುತ್ತಲೂ ಬ್ರಾಹ್ಮಣರು ನಿಂತು ಚೌರಿ ಬೀಸುತ್ತಿರುತ್ತಾರೆ. ಈ ಚೌರಿಗಳು ಕಾಡಾಕಳ ಬಿಳೀ ಕೂದಲುಗಳಿಂದ ತಯಾರಿಸುವರು. ಬಂಗಾರದ ಹಿಡಿಕೆಗಳು ಇವಕ್ಕೆ ಇರುವವು. ರಾಜನಿಗೆ ಕೂಡ ಎಡಬಲದಲ್ಲಿ ನಿಂತ ಸುಂದರಿಯರೀರ್ವರು ಇಂಥಹವೇ ಚೌರಿಗಳಿಂದಬೀಸುತ್ತಿರುವರು. ಇವೇ ಅಖಂಡ ಮರ್ಯಾದೆಗೆ ಲಕ್ಷಣವಂತೆ.

ಅನೇಕಸೇನಾಪತಿಗಳು ಹೊರಗೆ ನಿಂತಿರುವರು ತಮ್ಮ ಅನುಯಾಯಿಗಳೊಡನೇ ಒಬ್ಬೊಬ್ಬರಾಗಿಯೇ ಬಂದು ರಾಜನಿಗೆ ವಂದನೆಗಳನ್ನರ್ಪಿಸಿ ಮೊದಲೇ ಗೊತ್ತುಪಡಿಸಿದ ತನ್ನ ಆಸನದ ಮೇಲೆ ಹೋಗಿ ಕುಳಿತುಕೊಳ್ಳುತ್ತಾರೆ. ಇವರಾದ ಮೇಲೆ ದಂಡನಾಯಕರು ಢಾಲುಭಲ್ಲೆಗಳ ಸಹಿತವಾಗಿ ಸಭಾಮಂಟಪವನ್ನು ಪ್ರವೇಶಿಸುತ್ತಾರೆ. ಇವರ ತರುವಾಯ ಬಿಲ್ಲುಬಾಣಧಾರಿಗಳ ಗುಂಪುಗಳ ನಾಯಕರು ಬರುತ್ತಾರೆ. ಇವರೆಲ್ಲರೂ ಆನೆಯ ಸಾಲುಗಳ ಮುಂದಿರುವ ನೆಲದಮೇಲೆ ಕುಳಿತುಕೊಳ್ಳುತ್ತಾರೆ. ಇವರು ಒಂದು ರೀತಿ

ಬ-ಲ್ಲಿ ರಾಜನ ಅಂಗರಕ್ಷಕರಿದ್ದಂತೆ ಏಕೆಂದರೆ ಇಷ್ಟು ಸನಿಯುಕ್ಕೆ ಆಯುಧ ಧಾರಿಯಾದವರನ್ನು ಬಿಡುವದಿಲ್ಲ.

ಎಲ್ಲರೂ ತಮ್ಮ ತಮ್ಮ ಆಸನದಲ್ಲಿ ಕುಳಿತ ಬಳಿಕನರ್ತಕಿಯರ ನರ್ತನವು ಪ್ರಾರಂಭವಾಗುವದು. ಈ ನರ್ತಕಿಯರ ಕಂಠಾಭರಣಗಳು ನವರತ್ನ ಖಚಿತವಾಗಿರುವವು. ಮುಟ್ಟಿಗೆಯಲ್ಲಿ ರಟ್ಟೆಗಳಿಗೆ ಬಂಗಾರದ್ದು ಅಮೂಲ್ಯವಾದ ಆಭರಣಗಳಿರುವವು. ಟೊಂಕಕ್ಕೆ ಬಂಗಾರದ ಪಟ್ಟಿ ಇರುವದು. ಅದಕ್ಕೆ ಮುತ್ತುಗಳ ಸರಗಳು ಕಮಾನುಕಮಾನುಗಳಂತೆ ಜಘನಗಳ ಸುತ್ತಲೂ ಇಳಿಬಿಟ್ಟಿರುವವು. ಕಾಲುಗಳಲ್ಲಿ ವಿಶಿಷ್ಟತರದ ಅಗಣಿತ ಬೆಲೆ ಬಾಳುವ ಕಡಗಗಳಿರುವವು. ಎಲ್ಲ ನರ್ತಕಿಯರು ಜರದಂಚಿನ ಅತ್ಯಂತ ಬೆಲೆಬಾಳುವ ಪೀತಾಂಬರವನ್ನು ಉಟ್ಟಿರುವರು. ಈ ನರ್ತಕಿಯರಲ್ಲಿದ್ದ ಬಂಗಾರ ವಜ್ರ ವೈಢೂರ್ಯ ಮುತ್ತುಗಳ ಬೆಲೆಯನ್ನೂ ಹೊಲಮನೆ ಮೊದಲಾದ ಆಸ್ತಿಯ ಲೆಕ್ಕವನ್ನೂ ಯಾರೂ ಮಾಡಲಾರರು. ಇವರು ಮೇಣೆಗಳಲ್ಲಿ ಓಡಾಡುವರು. ಇವರಿಗಿರುವ ದಾಸೀ ಗಣವು ಅಸಾಧ್ಯವಾಗಿರುವದು. ಕೆಲಕೆಲವು ನರ್ತಕಿಯರಲ್ಲಿ ಕೋಟಿಗಟ್ಲೆ ವರಾಹ (ಬಂಗಾರದ ನಾಣ್ಯಗಳು) ಉಂಟು. ಇವೆಲ್ಲವುಗಳನ್ನೂ ಈ ನರ್ತಕಿಯರ ಗೃಹಕ್ಕೆ ವಿಲಾಸಕ್ಕಾಗಿ ಕಾಮ ಸುಖಕ್ಕಾಗಿ ಬಂದುಹೋಗುವ ಸರದಾರರಿಂದಲೂ ಮಾಂಡಲೀಕರಿಂದಲೂ ಕೊಡಲ್ಪಟ್ಟ ಶಿರಿವಂತಿಕೆಯೆಂದು ತಿಳಿದುಬಂದಿದೆ.

ನರ್ತನ ಕಾರ್ಯಕ್ರಮವಾದ ಮೇಲೆ ಪೈಲವಾನರು ಕುಸ್ತಿ ಆಡಿಸುವರು. ಇದೆಲ್ಲ ಮುಗಿಯಬೇಕಾದರೆ ಸಂಜೆಯಾಗಿ ಕತ್ತಲಾಗುವದು. ಆಗ ಇಡೀ ಮೈದಾನದ ತುಂಬಾ ಅಲ್ಲಲ್ಲಿಗೆಹಿಲಾಲನ್ನು ಹಚ್ಚಿ ನಿಲ್ಲಿಸುವರು. ಕಟ್ಟಿಗೆಗಳ ದೊಣ್ಣೆಗಳಿಗೆ ಅರಿವೆಗಳನ್ನು ಸುತ್ತಿ ಅದನ್ನು ಎಣ್ಣೆಯಲ್ಲಿ ಎದ್ದಿ ಹಿಲಾಲನ್ನು ತಯಾರಿಸುವರು. ಮೈದಾನದ ಸುತ್ತಲಿರುವ ಗೋಡೆಗಳಮೇಲೆ ಸಹ ಅಲ್ಲಲ್ಲಿಗೆ ಹಿಲಾಲನ್ನು ಹಚ್ಚಿ ಇಡುವರು. ರಾಜನು ಅವನ ಪರಿವಾರದೆದರು ಕುಳಿತ ಕಟ್ಟೆಯ ಮೇಲೆ ಅಖಂಡವಾಗಿ ಬೆಳಕು ಬೀಳುವಂತೆ ಹಿಲಾಲುಗಳನ್ನು ಉರಿಸುವರು.ಆಗ ಇಡೀ ರಾಜದರಬಾರವು ಹಗಲುಎಂದೆನಿಸಿ ಬಿಡು

ವದು. ಜಾದುಗಾರರೂ ಮಂತ್ರ ಯಂತ್ರಜ್ಞರು ಮುಂದೆ ಬಂದು ತಮ್ಮ ಕೌಶಲ್ಯವನ್ನು ತೋರಿಸಿ ಹೋಗುವರು. ಆಮೇಲೆ ಕುದುರೆ ಸವಾರರ ಅನೇಕ ಯುದ್ಧ ಪ್ರದರ್ಶನವಾಗುವದು. ಬಲೆಯನ್ನು ಬೀಸಿಹಿಡಿಯುವದೂ ಯುದ್ಧದಲ್ಲಿ ವೈರಿಯನ್ನು ಜೀವಂತ ಸೆರೆಹಿಡಿಯುವದೂ ಮೊದಲಾದ ಕಲಾ ಪ್ರದರ್ಶನಗಳು ನಡೆಯುವವು. ಆಮೇಲೆ ವಿಲಕ್ಷಣ ಚಮತ್ಕಾರದ ಮದ್ದು ಸುಡುವದು ನಡೆಯುತ್ತದೆ. ಯುದ್ಧದಲ್ಲಿ ಕೋಣವೆಗೆ ಬೆಂಕಿ ಹಚ್ಚುವ ದೃಶ್ಯ ವೈರಿತೋಪು ಗುಂಡು ಮದ್ದುಗಳ ವಖಾರವನ್ನು ಸುಡುವ ದೃಶ್ಯಗಳು ಅದ ರಲ್ಲಿ ತೋರಿಸಲಾಗುವದು.

ಇದಾದ ಬಳಿಕ ರಾಜ್ಯದಲ್ಲಿಯ ರಥಗಳ ಮಾದರಿಗಳೆಲ್ಲವೂ ಒಂದೊಂ ದಾಗಿ ರಾಜನೆದುರು ಪ್ರದರ್ಶಿಸಲಾಗುವವು. ಆಮೇಲೆ ಕುದುರೆ ಸವಾರರ ಇಡೀ ಸೈನ್ಯವು ಪರೇಡ ಮಾಡುತ್ತ ರಾಜನಿಗೆ ವಂದನೆಗಳನ್ನರ್ಪಿಸಿ ದೂರ ಮೈದಾನದಲ್ಲಿ ಸಾಲಾಗಿ ನಿಲ್ಲುವವು. ಅವುಗಳದೇ ೪೦-೫೦ ಸಾಲುಗಳು ಒಂದರ ಹಿಂದೊಂದರಂತೆ ಇರುವವು. ಇದಾದ ಬಳಿಕ ಕುಂಭದಾರತಿಯು ಜರುಗುವದು. ಒಂದೊಂದು ದಿನ ಒಬ್ಬೊಬ್ಬ ರಾಣಿಯು ತನ್ನ ದಾಸಿಯ ರಿಂದ ಇದನ್ನು ಜರಗಿಸುವಳು. ಇದರ ಉದ್ದೇಶವು ಎರಡು ಪ್ರಕಾರದ್ದಿರು ವದು. ಒಂದು ಸಮಾರಂಭದಲ್ಲಿ ಭಾಗಿಯಾಗಿರುವದು ಇನ್ನೊಂದು ತನ್ನ ದಾಸಿಯರ ಶಿರಿವಂತಿಕೆಯ ಘನತೆಯನ್ನು ತೋರುವದು. ತನ್ನ ದಾಸಿಯರೇ ಇಷ್ಟು ಧನಕನಕ ವಜ್ರ ವೈಢೂರ್ಯವುಳ್ಳವರಿರುವರೆಂದ ಬಳಿಕ ತನ್ನ ಶಿರಿವಂತಿಕೆಯು ಎಷ್ಟಿರಬಹುದು ಎಂಬುದನ್ನು ತನ್ನ ಪ್ರಜೆಗಳು ತಿಳಿಯಲಿ ಎಂಬುದಾಗಿರುತ್ತದೆ.

ಇರಲಿ. ಈ ಸಭಾಂಗಣದ ಒಳಬಾಗಿಲಿನಿಂದ ೨೦-೨೫ ಸುಂದರಿಯರು ಬೆಳ್ಳಿ ಬೆತ್ತವನ್ನು ಕೈಯಲ್ಲಿ ಹಿಡಿದು ಹೆಗಲಮೇಲೆ ಬಾರಕೋಲನ್ನು ಸಭಾಂ ಗಣವನ್ನು ಪ್ರವೇಶಿಸುತ್ತಾರೆ. ಅವರ ಹಿಂದೆ ಶಿಖಂಡಿಗಳು ಬರುತ್ತಾರೆ. ಅವರಹಿಂದೆ ಅನೇಕ ಮಂದಿ ಸುಂದರಿಯರು ಗುಂಪುಗುಂಪಾಗಿ ಬರುತ್ತಾರೆ ಕೆಲವರು ತುತೂರಿಯನ್ನು ಊದುತ್ತಾರೆ. ಕೆಲವರು ಕಹಳೆ, ಕೆಲವರು

ಕೊಂಬು ಕೇವರು ಕೊಳಲು ಊದುತ್ತಾರೆ. ಕೆಲವರು ಪಿಟೀಲನ್ನು ಬಾರಿ ಸುತ್ತಾರೆ. ಇನ್ನೂ ಅನೇಕಾನೇಕ ವಾದ್ಯ ಬಾರಿಸುವದರಲ್ಲಿಯೂ ಪ್ರವೀಣೆ ಯರು ಬಾರಿಸುತ್ತ ಊದುತ್ತ ಬರುತ್ತಾರೆ. ಅವರ ಹಿಂದೆ ಮತ್ತೆ ಮತ್ತೆ ಬೆಳ್ಳಿ ಬೆತ್ತದ ದಾಸಿಯರು ಬರುತ್ತಾರೆ. ಇವರ ಹಿಂದೆ ಬಂದಂಥ ಸುಂದರಿ ಯರ ದೇಹವು ನಖಶಿಖಾಂತ ಬಂಗಾರ ಮುತ್ತು ರತ್ನ ವಜ್ರ ಪುಷ್ಯರಾಗ ಪಚ್ಚೆ ಇಂದ್ರನೀಲ ಮೊದಲಾದವುವಳಿಂದ ತುಂಬಿ ಹೋಗುವದು. ಇವರು ಕುಲಾಯಿ ನಮೂನೆಯ ಶಿರೋಭೂಷಣವನ್ನು ಹಾಕಿಕೊಂಡಿರುತ್ತಾರೆ ಅದು ರೇಶಿಮೆಯ ವಸ್ತ್ರದಿಂದ ತಯಾರಿಸಿದ್ದು ನವರತ್ನ ಖಚಿತವಾಗಿದ್ದಿರುವದು. ಇವರು ಎರಡೂ ಕೈಗಳಿಂದ ಬಂಗಾರದ ಕೊಡವನ್ನು ಹಿಡಿದಿರುವರು ಅದರ ಮೇಲೆ ದೀಪಗಳಿರುವವು. ಇವರು ಸುಮಾರು ೬೦ ಯುವತಿಯರಿರುವರು. ಎಲ್ಲರೂ ೧೬ ರಿಂದ ೨೨ ವರುಷದ ವಯಸ್ಸಿನಒಳಗಿನವರಿರುವರು. ಒಬ್ಬರ ಕ್ಕಿಂತ ಇನ್ನೊಬ್ಬರು ಸೌಂದರ್ಯದಲ್ಲಿ ಮಿಗಿಲಾಗಿರುವರು. ಅವರೆಲ್ಲರು ಒಬ್ಬರ ಬೆನ್ನಹಿಂದೆ ಒಬ್ಬರಂತೆ ಸಾಲಾಗಿ ಬಂದು ರಾಜನಿಗೂ ಆವನ ಪರಿವಾ ರಕ್ಕೂ ಕುದುರೆ ಆನೆಗಳಿಗೂ ಮಂಗಳಾರತಿಮಾಡಿ ತೆರಳುವರು. ಒಬ್ಬೊಬ್ಬ ಸ್ತ್ರೀಯ ಮೈಮೇಲಿನ ಆಭರಣಗಳ ಬೆಲೆಯು ಒಂದು ಲಕ್ಷ ವರಹಗಳ ಮೇಲೆ ಆಗಬಹುದೆಂದು ಪಾಯಸ್‌ನು ಬರೆದಿದ್ದಾನೆ.

ಇವರು ಹೋದಬಳಿಕ ಕುದುರೆ ಸವಾರರು ತೆರಳುತ್ತಾರೆ. ಆಮೇಲೆ ಆನೆಯ ದಳವು ಬರುವದು. ಅದು ರಾಜನಿಗೆ ವಂದನೆಗಳನ್ನರ್ಪಿಸಿ ತೆರಳು ವದು. ರಾಜನು ಆಸನದಿಂದ ಎದ್ದು ಒಳಗೆ ಹೋಗುವನು. ಆಮೇಲೆ ಬ್ರಾಹ್ಮಣರು ಪೀಠದಲ್ಲಿಟ್ಟ ದೇವರುಗಳನ್ನು ಒಳಗೆ ಒಯ್ಯುವರು. ಅಲ್ಲಿ ರಾಜನು ದೇವರಿಗೆ ವಂದನೆಗಳನ್ನು ಅರ್ಪಿಸಿ ಪೂಜಿಸುವನು. ಆಮೇಲೆ ದೇವರ ಪ್ರೀತ್ಯರ್ಥವಾಗಿ ಕೋಣಗಳನ್ನು ಕುರಿಗಳನ್ನು ಕಡಿದು ಆಹುತಿ ಕೊಡುವರು. ಈ ಕಾಲಕ್ಕೆ ವೇಶ್ಯೆಯರ ದೊಡ್ಡ ತಂಡವು ಬಂದು ನರ್ತನ ವನ್ನೂ ಗಾಯನವನ್ನೂ ಮಾಡುತ್ತಲೇ ಇರುವರು. ಇಷ್ಟೆಲ್ಲ ಆಗಬೇಕಾದರೆ ಮಧ್ಯರಾತ್ರಿಯ ಕಾಲ ಬರುವದು. ಅದು ದಾಟುವದರೊಳಗಾಗಿ ರಾಜನೂ ಅವನ ಸಕಲ ರಾಣೀ ಬಳಗವು ಊಟಮಾಡುವದು.

ಏಕೆಂದರೆ ರಾಜನು ಅವನ ಪರಿವಾರವು ಈ ನವರಾತ್ರಿಯ ಹಬ್ಬ
ನಸುಕಿನಿಂದ ಮಧ್ಯರಾತ್ರಿಯವರೆಗೆ ಯಾವ ಆಹಾರವನ್ನೂ ಸ್ವೀಕರಿಸ
ದಿಲ್ಲ. ಯಾವ ಪಾನೀಯವನ್ನೂ ಕುಡಿದಿರುವದಿಲ್ಲ. ಕೇವಲ ಉಪವಾಸ
ವರು. ಮಧ್ಯರಾತ್ರಿಯಾಗುವದರೊಳಗಾಗಿ ಸಮಾರಂಭವನ್ನು ಮು
ಊಟಮಾಡಿ ಮಲಗುವರು. ಪುನಃ ಅರುಣೋದಯಕ್ಕೆ ಎದ್ದು ಎರ
ದಿನದ ಸಮಾರಂಭದಲ್ಲಿ ಭಾಗಿಯಾಗುವರು. ಈ ಪ್ರಕಾರ ಒಂಭತ್ತು
ಗಳೂ ನಡೆಯುವದು. ಕೊನೆಯ ದಿನ ೨೫೦ ಕೋಣಗಳನ್ನೂ ೪೫೦೦
ಗಳನ್ನೂ ಕಡಿದು ದೇವತೆಗಳನ್ನು ತೃಪ್ತಿಪಡಿಸುವರು.

ಆಮೇಲೆ ರಾಯರು ಪರರಾಜ್ಯದಿಂದ ಕರೆಯಿಸಿದ ರಾಯಭಾರಿ
ಕಾಣಿಕೆಗಳನ್ನು ಕೊಡುವನು. ತನ್ನ ಮಾಂಡಲೀಕರಿಗೂ ಸೇನಾಪತಿಗಳ
ಮಂತ್ರಿಗಳಿಗೂ ಹೇರಳವಾದ ಧನಕನಕಗಳನ್ನೂ ಬಿರುದಾವಳಿಗಳ
ಜಾಹಗೀರುಗಳನ್ನೂ ಬರೆಸಿಕೊಡುವನು. ಬ್ರಾಹ್ಮಣರಿಗೆ ಮುಕ್ತಹಸ್ತದಿ
ದಾನ ಧರ್ಮಾದಿಗಳನ್ನೂ ಮಾಡಿ ಅವರಿಂದ ಆಶೀರ್ವಾದ ಪಡೆಯುವನ
ತನ್ನ ಸಕಲ ಪತ್ನಿಯರನ್ನೂ ಕಂಡು ಅವರೊಡನೆ ವಿನೋದಮಾಡಿ ಸುಖ
ತಾನು ಸುಖಪಡುವನು. ಈ ರೀತಿ ನವರಾತ್ರಿ ಸಮಾರಂಭವು ಜರುಗಲ್ಪಡ
ವದು. ಆಗ ವೆಚ್ಚವಾಗುವ ಸರಕಾರದ ಹಣದ ಲೆಕ್ಕವೇ ಹತ್ತುವದಿಲ್ಲ.

ಮರುದಿನದಿಂದ ರಾಜಕಾರಣವು ಪ್ರಾರಂಭವಾಗುವದು. ಯಾ
ಮೇಲೆ ದಂಡೆತ್ತಿ ಹೋಗಬೇಕು, ಅಥವಾ ಯಾವ ಸುಲ್ತಾನನು ತನ್ನ ಮೇ
ದಂಡಯಾತ್ರೆ ಕೈಕೊಳ್ಳಲಿರುವನು, ಮತ್ತು ರಾಜ್ಯದಲ್ಲಿ ರಾಜವಂಶ ನಾಶ
ಒಳಸಂಚೇನಾದರೂ ನಡೆದಿದೆಯೇ ಎಂಬ ಮೊದಲಾದ ವಿಚಾರಗಳ
ಪ್ರಾರಂಭವಾಗುವವು.

—ಮುಗಿದುದು—

# — ನಮ್ಮ ಪ್ರಕಟಣೆಗಳು —

| | | |
|---|---|---|
| ೧ | ಸರ್ವವೈದ್ಯರತ್ನ | ೫-೫೦ |
| ೨ | ಬಸವ ಪುರಾಣ | ೫-೫೦ |
| ೩ | ಸರ್ವಜೋತಿಷ್ಯ ರತ್ನ | ೬-೦೦ |
| ೪ | ಬೃಹಸ್ತೋತ್ರ ರತ್ನಾಕರ | ೪-೦೦ |
| ೫ | ಸಿದ್ಧಾರೂಢ ಚರಿತ್ರೆ | ೫-೦೦ |
| ೬ | ಗುರುಚರಿತ್ರೆ | ೫-೦೦ |
| ೭ | ದಾಸಬೋಧೆ | ೩-೦೦ |
| ೮ | ಸ್ತ್ರೀಚರಿತ್ರೆ | ೨-೫೦ |
| ೯ | ಪುರಂದರದಾಸರ ಕೀರ್ತನೆ | ೧-೦೦ |
| ೧೦ | ವೇದಾಂತ ಪಂಚೀಕರಣ | ೨-೫೦ |
| ೧೧ | ಇಂದ್ರಜಾಲ ಮಹೇಂದ್ರಜಾಲ ಯಕ್ಷಿಣಿ ವಿನೋದ | ೨-೫೦ |
| ೧೨ | ಹಸ್ತ ಸಾಮುದ್ರಿಕ | ೨-೫೦ |
| ೧೩ | ಕನಕದಾಸ ಚರಿತ್ರೆ | ೨-೨೫ |
| ೧೪ | ರಾಘವೇಂದ್ರ ಚರಿತ್ರೆ | ೨-೨೫ |
| ೧೫ | ವಿಜಯನಗರ ಸಾಮ್ರಾಜ್ಯ | ೨-೫೦ |
| ೧೬ | ಠಕ್ಕಸೇನರಾಜಪುತ್ರನಕಥೆ | ೨-೦೦ |
| ೧೭ | ಭೋಜಕಾಳಿದಾಸ ಕಥೆ | ೨-೦೦ |
| ೧೮ | ಸರ್ವವಿದ್ಯಾ ಬೋಧೆ | ೨-೦೦ |
| ೧೯ | ವಿಚಾರ ಚಂದ್ರೋದಯ | ೨-೦೦ |
| ೨೦ | ಸ್ವಾ ವಿವೇಕಾನಂದಚರಿತ್ರೆ | ೨-೦೦ |
| ೨೧ | ರಾಮ ಕೃಷ್ಣಪರಮಹಂಸ | ೨-೦೦ |
| ೨೨ | ವೈದ್ಯ ಸನ್ಮಿತ್ರ ಭಾ. ೧ | ೨-೦೦ |
| ೨೩ | " " ೨. | ೨-೫೦ |
| ೨೪ | " " ೩ | ೧-೫೦ |
| ೨೫ | ಅಕಬರ ಬೀರಬಲ್ಲ | ೦-೭೫ |
| ೨೬ | ಇಸಾಫ ನೀತಿ ಕಥೆಗಳು | ೧-೫೦ |
| ೨೭ | ಪತಿವ್ರತೆಯರ ಕಥೆಗಳು | ೧-೫೦ |
| ೨೮ | ವಿಕ್ರಮ ಬೇತಾಳ ಕಥೆಗಳು | ೧-೫೦ |
| ೨೯ | ಸಚಿತ್ರ ಯಮಶಾಸನ | ೧-೫೦ |
| ೩೦ | ಪಶು ವೈದ್ಯ ಸಂಜೀವಿನಿ | ೧-೫೦ |
| ೩೧ | ಪ್ರಶ್ನೆ ಫಲ ದರ್ಪಣ | ೧-೫೦ |
| ೩೨ | ಗಲ್‌ಬಕಾವಲಿ | ೧-೦೦ |
| ೩೩ | ಸಿಂಹಾಸನಬತ್ತಿಸಪುತ್ತಳಿ | ೧-೦೦ |
| ೩೪ | ನವೀನ ಪಾಕಶಾಸ್ತ್ರ | ೧-೨೫ |
| ೩೫ | ಶ್ರೀಶೈಲ ಮಹಾತ್ಮೆ | ೦-೫೦ |
| | **ಸಂಗೀತ ನಾಟಕಗಳು** | |
| ೩೬ | ಸುಖದ ಸುಪ್ಪತ್ತಿಗೆ | ೨-೦೦ |
| ೩೭ | ಮನೆಎರಡು ಮನಒಂದು | ೨-೦೦ |
| ೩೮ | ಅನುರಾಧಾ | ೨-೦೦ |
| ೩೯ | ಪಡೆದ ಮುತ್ತು | ೨-೦೦ |
| ೪೦ | ಪಂಚಾಯತ ರಾಜ್ಯ | ೨-೦೦ |
| ೪೧ | ಸೂಕ್ಕಿನ ಸೊಸೆ | ೨-೦೦ |
| ೪೨ | ನಾರೀಮಣಿ | ೨-೦೦ |
| ೪೩ | ಚರಣದಾಸಿ | ೨-೦೦ |
| ೪೪ | ಭೀಷ್ಮ ಪ್ರತಿಜ್ಞೆ | ೨-೦೦ |
| ೪೫ | ಕಲವತಿ | ೨-೦೦ |
| ೪೬ | ಪಣಕ್ಕಿಟ್ಟ ಪ್ರಮಾಣ | ೨-೦೦ |
| ೪೭ | ಗಾಂಧೀಟೋಪಿ | ೨-೦೦ |
| ೪೮ | ಲವ್ ಇನ್ ಹುಬಳಿ | ೨-೦೦ |
| ೪೯ | ಶ್ರೀ ಸತ್ಯನಾರಾಯಣವ್ರತ | ೨-೦೦ |
| ೫೦ | ಶ್ರೀ ಕ. ರ. ಬಸವೇಶ್ವರ | ೨-೦೦ |
| ೫೧ | ಶ್ರೀ ಪಾದುಕಪಟ್ಟಾಭಿಷೇಕ | ೨-೦೦ |
| ೫೨ | ಮಂಗೂರಟುಬೆಂಗಳೂರ | ೨-೦೦ |
| ೫೩ | ಧೂಳ ಮುಸುಕಿದ ಹೂ | ೨-೦೦ |
| ೫೪ | ಸುಮ್ಮದು ಕಾಶ್ಮೀರ | ೨-೦೦ |
| ೫೫ | ಪತಿಯು ಚಂದ್ರ | ೨-೦೦ |
| ೫೬ | ಮುಂಚೇ ಮಗ | ೨-೦೦ |
| ೫೭ | ಖಾದೀ ಸೀರೆ | ೨-೦೦ |
| ೫೮ | ಹೋಳಿ ಹುಣ್ಣಿವೆ | ೨-೦೦ |

ಎ. ಎಂ. ಕರಡಿ ಬುಕ್ ಡಿಪೋ ಹುಬ್ಬಳ್ಳಿ.